# ಮನಃಶಾಸ್ತ್ರ ಪ್ರವೇಶಿಕೆ

ಮೊದಲನೆಯ ಬಿ.ಎ. ತರಗತಿಗೆ ಪಠ್ಯ ಪುಸ್ತಕ

ಎಸ್. ಕೆ. ರಾಮಚಂದ್ರರಾವ್






ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಾಶನ ವಿಭಾಗ

1968

# ಮನಃಶಾಸ್ತ್ರ ಪ್ರವೇಶಿಕೆ

ಒಂದನೆಯ ಬಿ.ಎ. ತರಗತಿಗೆ ಪಠ್ಯ ಪುಸ್ತಕ



ಎಸ್. ಕೆ. ರಾಮಚಂದ್ರರಾವ್

ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಾಶನ ವಿಭಾಗ

1968

## ಬೆಂಗಳೂರು ವಿಶ್ವವಿದ್ಯಾಲಯದ ಪ್ರಕಾಶನ ವಿಭಾಗ

ಪ್ರಧಾನ ಸಂಪಾದಕರು: ಡಾ॥ ರಂ. ಶ್ರೀ. ಮುಗಳಿ



ಪಠ್ಯ ಪುಸ್ತಕ – 3

**ಮನಃಶಾಸ್ತ್ರ ಪ್ರವೇಶಿಕೆ**

ಮನಃಶಾಸ್ತ್ರ ಸಂಪಾದಕ ಸಮಿತಿ:

ಪ್ರೊ. ಬಿ. ಕುಪ್ಪುಸ್ವಾಮಿ, (ಅಧ್ಯಕ್ಷರು)
ಶ್ರೀ ಅಬ್ದುಲ್ ಹಫೀಝ್
ಪ್ರೊ. ಎಸ್. ಕೆ. ರಾಮಚಂದ್ರರಾವ್
ಡಾ. ಹೆಚ್. ಎನ್. ನಾರಾಯಣಮೂರ್ತಿ
ಶ್ರೀ ಸಿ. ಎಸ್. ಸೂರ್ಯನಾರಾಯಣರಾವ್
ಶ್ರೀಮತಿ ಎನ್. ಎಸ್. ಶಾಂತಾ
ಶ್ರೀ ಆರ್. ಎ. ಫಣಿಶಾಯಿ







ಬೆಲೆ ರೂ. 3.50

ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಪ್ರೈವೇಟ್ ಲಿಮಿಟೆಡ್
ಬೆಂಗಳೂರು-4

ವ್ಯಾಪಾರ ಸಂಬಂಧ ಪತ್ರವ್ಯವಹಾರ:

Bangalore University Consumers' Cooperative
Society Ltd, Gandhinagar, Bangalore 9

# ಮುನ್ನುಡಿ

ಕನ್ನಡ ಮಾಧ್ಯಮದಲ್ಲಿ ಕಾಲೇಜು ಮಟ್ಟದ ವಿದ್ಯಾಭ್ಯಾಸಂಗ ಮಾಡಬೇಕು ಎಂದು ಬಯಸುವ ವಿದ್ಯಾರ್ಥಿಗಳಿಗೆ ತಕ್ಕ ಸೌಕರ್ಯ ಒದಗಿಸಿಕೊಡಬೇಕು ; ಜೊತೆಯಲ್ಲಿಯೇ, ಉನ್ನತ ಮಟ್ಟದ ಜ್ಞಾನದಾನ ಮಾತೃಭಾಷೆಯಲ್ಲಿಯೇ ನಡೆಯಲು ಸಮರ್ಪಕ ವಾತಾವರಣವನ್ನು ರಚಿಸಬೇಕು – ಇವೆರಡು ಉದ್ದೇಶಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಬೆಂಗಳೂರು ವಿಶ್ವವಿದ್ಯಾಲಯವು ಜನವರಿ 1967 ರಲ್ಲಿ ಒಂದು ನಿರ್ಧಾರವನ್ನು ಕೈಗೊಂಡಿತು. ಅದು ಅಖಿಲಭಾರತೀಯ ವಿದ್ಯಾಧೋರಣೆಗೆ ಅನುಸಾರವಾಗಿಯೂ ಇತ್ತು.

ಇದರ ಅಂಗವಾಗಿ, 1967–68 ರ ಪ್ರೀಯುನಿವರ್ಸಿಟಿ ತರಗತಿಯಲ್ಲಿ ಐಚ್ಛಿಕವಾಗಿ ಕನ್ನಡ ಮಾಧ್ಯಮವನ್ನು ಸ್ವೀಕರಿಸುವ ವಿದ್ಯಾರ್ಥಿಗಳಿಗೆ, ಕನ್ನಡ ಮಾಧ್ಯಮದ ಒಂದು ವಿಭಾಗವನ್ನು ಪ್ರಾರಂಭಿಸಬಹುದೆಂದು ಕಾಲೇಜುಗಳಿಗೆ ಆದೇಶ ನೀಡಲಾಯಿತು. ಜೊತೆಯಲ್ಲಿಯೇ ಯೋಗ್ಯ ಪಠ್ಯ ಪುಸ್ತಕಗಳನ್ನು ಕನ್ನಡ ಭಾಷೆಯಲ್ಲಿ ಒದಗಿಸಿಕೊಡುವ ಹೊಣೆಗಾರಿಕೆಯನ್ನು ವಿಶ್ವವಿದ್ಯಾಲಯವು ವಹಿಸಿಕೊಂಡಿತು. ಇದರ ನಿರ್ವಹಣೆಗಾಗಿ ವಿಶ್ವವಿದ್ಯಾಲಯದ ಕನ್ನಡ ಪಠ್ಯಪುಸ್ತಕ ಸಮಿತಿಯು ರೂಪುಗೊಂಡಿತು. ಡಾ. ರಂ. ಶ್ರೀ. ಮುಗಳಿಯವರ ಅಧ್ಯಕ್ಷತೆಯಲ್ಲಿ ನೇಮಕವಾದ ಈ ಸಮಿತಿಯು ಹೊಸದಾರಿಯಲ್ಲಿ ಉತ್ಸಾಹದಿಂದ ನಡೆದು ಇದೀಗ ಹಲವಾರು ಪಠ್ಯ ಪುಸ್ತಕಗಳನ್ನು ಬೇರೆ ಬೇರೆ ವಿಷಯಗಳಲ್ಲ ಪ್ರಕಟಗೊಳಿಸುತ್ತಿದೆ.

ಇಂಥ ಒಂದು ಪವಿತ್ರ ಕಾರ್ಯದಲ್ಲಿ ಸಹಾಯಕವಾಗಿರುವ ಶಕ್ತಿಗಳು ಹಲವಾರು – ವಿವಿಧ ವಿಷಯಗಳ ಸಂಪಾದಕ ಮಂಡಳಿಗಳು, ಲೇಖಕರು, ಭಾಷಾತಜ್ಞರು, ಮುದ್ರಣಕಾರರು, ಮೊದಲಾದವರು ; ಮತ್ತು ಇವರನ್ನೆಲ್ಲ ಒಂದುಗೂಡಿಸಿ ಕ್ಷಿಪ್ರ ವೇಳೆಯಲ್ಲಿ ಗುರಿಸಾಧಿಸಿರುವ ಪಠ್ಯಪುಸ್ತಕ ಸಮಿತಿ. ಇವರೆಲ್ಲರಿಗೂ ವಿಶ್ವವಿದ್ಯಾಲಯವು ಋಣಿಯಾಗಿದೆ. ಅವರ ವಿಶ್ವಾಸಪೂರ್ಣ ಸೇವೆಯನ್ನು ಮೆಚ್ಚಿಕೊಂಡಿದೆ.

ಕನ್ನಡ ಭಾಷೆ ಬೆಳೆಯದೇ ವಿಶ್ವದ ಆಧುನಿಕ, ವಿಶೇಷವಾಗಿ, ವೈಜ್ಞಾನಿಕ ಜ್ಞಾನವನ್ನು ಅದರಲ್ಲಿ ವಿವರಿಸುವದು ಸಾಧ್ಯವಿಲ್ಲ; ಸಾಕಷ್ಟು ಗ್ರಂಥಗಳು ಬರದೇ ಭಾಷೆ ಬೆಳೆಯುವಂತಿಲ್ಲ. ಈ ವಿಷವರ್ತುಲ ಭೇದನದ ದಾರಿ ಒಂದೇ—ವಿಶ್ವವಿದ್ಯಾಲಯವು ತಜ್ಞರ ನೆರವಿನಿಂದ ಗ್ರಂಥರಚನೆ ಪ್ರಾರಂಭಿಸಬೇಕು. ಮೊದಲ ದಿನಗಳಲ್ಲಿ ಎದುರಾಗುವ ತೊಡರುಗಳು ಹಲವಾರು – ಕನ್ನಡದಲ್ಲಿ ಬರೆಯಬಲ್ಲ ತಜ್ಞರು ಯಾರು? ಪಾರಿಭಾಷಿಕ ಪದಗಳ ವಿಚಾರವೇನು? ಯಾರಿಗಾಗಿ ಬರೆಯುವುದು? ಪುಸ್ತಕ ಸಮಿತಿಯ ಈ ಪ್ರತ್ಯಕ್ಷ ಕಾರ್ಯವು ಇವೆಲ್ಲ ಪ್ರಶ್ನೆಗಳಿಗೂ ಸ್ವಲ್ಪ ಮಟ್ಟಿಗಾದರೂ ಉತ್ತರ ನೀಡಿದೆ.

ಮುಂಬರುವ ದಿವಸಗಳಲ್ಲಿ ಪಠ್ಯಪುಸ್ತಕಗಳೂ, ಇತರ ಪುಸ್ತಕಗಳೂ ವಿಪುಳ ಸಂಖ್ಯೆಯಲ್ಲಿ ಪ್ರಕಟಿತವಾಗಿ ಕನ್ನಡದ ಸಜೀವ ಮಾಧ್ಯಮದ ಮೂಲಕ ಪ್ರಪಂಚದ ಅತ್ಯುತ್ತಮ (ಅತ್ಯಾಧುನಿಕ ಜ್ಞಾನ ಸಹ) ಜ್ಞಾನ ಕನ್ನಡ ಮಕ್ಕಳಿಗೆ ದೊರೆಯುವುದೆಂದು ಹಾರೈಸುತ್ತೇನೆ.

ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು
5-6-1968

ವಿ. ಕೃ. ಗೋಕಾಕ್
ಉಪಕುಲಪತಿ

# ನಾಲ್ಕು ಮಾತು

ಬೆಂಗಳೂರು ವಿಶ್ವವಿದ್ಯಾಲಯವು ವಿದ್ಯಾಭ್ಯಾಸದ ಮಾಧ್ಯಮದ ವಿಚಾರದಲ್ಲಿ ಕೂಲಂಕಷವಾಗಿ ಆಲೋಚಿಸಿ ಪ್ರಾದೇಶಿಕ ಭಾಷೆಯೆ ಉಚ್ಚವ್ಯಾಸಂಗದಲ್ಲಿಯೂ ಮಾಧ್ಯಮವಾಗಬೇಕೆಂಬ ತೀರ್ಮಾನಕ್ಕೆ ಬಂದಿತು. ಆದರೆ ಸದ್ಯದ ಪರಿಸ್ಥಿತಿಯಲ್ಲಿ ಅದನ್ನು ಐಚ್ಛಿಕವಾಗಿಡುವುದು ಯುಕ್ತ ಎಂಬ ನಿರ್ಣಯವನ್ನು ಅದು ಕೈಗೊಂಡು ಕನ್ನಡ ಪಠ್ಯಪುಸ್ತಕಗಳ ರಚನೆ ಮತ್ತು ಪ್ರಕಟನೆಗಳಿಗೆ ಕನ್ನಡ ಪಠ್ಯಪುಸ್ತಕ ಸಮಿತಿ ಒಂದನ್ನು ನೇಮಕ ಮಾಡಿರುತ್ತದೆ. ಈ ಸಮಿತಿಯ ಪರವಾಗಿ ಬೇರೆ ಬೇರೆ ವಿಷಯಗಳನ್ನು ಕುರಿತು ಕನ್ನಡದಲ್ಲಿ ಪುಸ್ತಕಗಳನ್ನು ಬರೆಯುವುದಕ್ಕೆಂದು ಅನುಭವಿಕರಾದ ಅಧ್ಯಾಪಕರನ್ನು ಕೇಳಿಕೊಳ್ಳಲಾಯಿತು. ಆಯಾ ವಿಷಯಕ್ಕೆ ಸಂಬಂಧಪಟ್ಟ ಪಠ್ಯಸಮಿತಿಯು ಸದಸ್ಯರಾಗಲಿ, ಪಠ್ಯಸಮಿತಿ ಗೊತ್ತು ಪಡಿಸಿದ ಸಂಪಾದಕ ಸಮಿತಿಯ ಅಧ್ಯಕ್ಷರಾಗಲಿ ಸದಸ್ಯರಾಗಲಿ ಲೇಖಕರಿಂದ ಬರುವ ಹಸ್ತ ಪ್ರತಿಗಳನ್ನು ಪರೀಶೀಲಿಸಬೇಕೆಂದು ಬಿನ್ನವಿಸಲಾಯಿತು. ಪ್ರತಿಯೊಂದು ಹಸ್ತ ಪ್ರತಿಯನ್ನು ಭಾಷಾತಜ್ಞರಿಂದ ನೋಡಿಸಬೇಕೆಂದೂ ಗೊತ್ತಾಯಿತು. ಈ ಎಲ್ಲ ಬಗೆಯ ಪ್ರಕ್ರಿಯೆಗೆ ಒಳಪಟ್ಟು ಸಾಧ್ಯವಾದಷ್ಟು ಪರಿಪೂರ್ಣವೂ ನಿರ್ದುಷ್ಟವೂ ಆದ ಪಠ್ಯಪುಸ್ತಕವು ರಚಿತವಾಗಬೇಕೆಂದೂ ಅದು ಸೊಗಸಾಗಿ ಮುದ್ರಿತವಾಗಬೇಕೆಂದೂ ಕನ್ನಡ ಪಠ್ಯಸಮಿತಿ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡುತ್ತಿದೆ. ಪಠ್ಯವೆಂಬ ದೃಷ್ಟಿಯಿಂದ ಮಾತ್ರವಲ್ಲ ಕನ್ನಡ ಜನಕ್ಕೆ ಕನ್ನಡದಲ್ಲಿಯೆ ಉತ್ತಮ ಜ್ಞಾನವು ಉಪಲಬ್ಧವಾಗಲಿ ಎಂಬ ವ್ಯಾಪಕವಾದ ಉದ್ದೇಶವೂ ಈ ಮಹಾಕಾರ್ಯದ ಹಿನ್ನೆಲೆ ಯಲ್ಲಿದೆ.

ಈ ಕಾರ್ಯವು ಎಷ್ಟು ಯಶಸ್ವಿಯಾಗುವುದೋ ಅಷ್ಟು ವೇಗದಿಂದ ಐಚ್ಛಿಕ ವಾದ ಮಾಧ್ಯಮವು ಸಾರ್ವತ್ರಿಕವಾಗುತ್ತದೆ. ಕಡ್ಡಾಯವಾದ ಮಾಧ್ಯಮ ಎನಿಸಿಕೊಳ್ಳದೆ ಕಡ್ಡಾಯವಾಗಿ ಅದನ್ನೇ ಸ್ವೀಕರಿಸಬೇಕು ಎಂಬ ಇಚ್ಛೆಯನ್ನು ನಿರ್ಮಾಣಮಾಡುತ್ತದೆ. ಮಾಧ್ಯಮದ ವಿಚಾರವಾಗಿ ನಮ್ಮ ದೇಶದಲ್ಲಿ ಅನೇಕ ಬಗೆಯ ಸಾಧಕ ಬಾಧಕ ಚರ್ಚೆ ನಡೆದಿದೆ. ಮುಖ್ಯವಾಗಿ ಜ್ಞಾನದ ಆಕಲನ ಮತ್ತು ಅಭಿವ್ಯಕ್ತಿ ಇವೆರಡು ಕ್ರಿಯೆಗಳಿಗೆ ಸಾಮಾನ್ಯವಿದ್ಯಾರ್ಥಿ ಮತ್ತು ಸಾಮಾನ್ಯ ನಾಗರಿಕ ಇವರ ದಾರಿಯಲ್ಲಿ ಪರಕೀಯ ಭಾಷೆಯ ಅಡ್ಡಿ-ಆತಂಕಗಳನ್ನು ಒಡ್ಡದೆ ಅವರವರ ಸ್ವಂತ ಭಾಷೆಯಲ್ಲಿ ಜ್ಞಾನ ಸಾಮಗ್ರಿಯನ್ನು ಒದಗಿಸಿದರೆ ಮಾತ್ರ ಪ್ರಜಾಪ್ರಭುತ್ವ ಸಾರ್ಥಕವಾಗುತ್ತದೆ, ನಿರ್ಮಾಣಶೀಲವಾದ ವಿಚಾರವಂತಿಕೆ ಮತ್ತು ಮುಕ್ತರೀತಿಯ ಅಭಿವ್ಯಕ್ತಿ ಇವುಗಳಿಗೆ ಅವ ಕಾಶ ದೊರೆಯುತ್ತದೆ. ಈ ದೃಷ್ಟಿಯನ್ನು ಇಟ್ಟುಕೊಂಡು ಕನ್ನಡ ಪಠ್ಯಸಮಿತಿ ನಿಷ್ಠೆಯಿಂದ ಕಾರ್ಯಪ್ರವೃತ್ತವಾಗಿದೆ.

ಈ ಪಠ್ಯಪುಸ್ತಕ ಯೋಜನೆಗೆ ರೂಪಕೊಟ್ಟು ಅದನ್ನು ಕಾರ್ಯಗತಮಾಡುವ ದಿಶೆಯಲ್ಲಿ ಸೂಕ್ತ ಕ್ರಮಗಳನ್ನು ಕೈಗೊಂಡು ಕನ್ನಡ ಪಠ್ಯಪುಸ್ತಕ ಸಮಿತಿಗೆ ಎಲ್ಲ ಬಗೆಯ ಮಾರ್ಗದರ್ಶನ ಮಾಡುತ್ತಿರುವ ಮತ್ತು ಈ ಪುಸ್ತಕಕ್ಕೆ ಮುನ್ನುಡಿ ಬರೆದಿರುವ ಬೆಂಗಳೂರು ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿರುವ ಡಾ. ವಿ. ಕೆ. ಗೋಕಾಕ್ ಅವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು. ನಮ್ಮ ಕಾರ್ಯದಲ್ಲಿ ಸರ್ವವಿಧವಾದ ನೆರವನ್ನು ನೀಡುತ್ತಿರುವ ವಿಶ್ವವಿದ್ಯಾಲಯದ ರಿಜಿಸ್ಟ್ರಾರ್ ಶ್ರೀ ಪಿ. ಮಲ್ಲಿಕಾರ್ಜುನಪ್ಪ ನವರಿಗೂ ನಮ್ಮ ಹಾರ್ದಿಕ ಧನ್ಯವಾದಗಳು.

ಮನಃಶಾಸ್ತ್ರ ಮತ್ತು ಇತರ ಕ್ಷೇತ್ರಗಳಲ್ಲಿ ಆಳವಾಗಿ ಅಭ್ಯಾಸಮಾಡಿರುವ, ಜನಪ್ರಿಯ ಲೇಖಕರೂ, ಹಿರಿಯ ಪ್ರಾಧ್ಯಾಪಕರೂ ಆಗಿರುವ ಶ್ರೀ ಎಸ್. ಕೆ. ರಾಮಚಂದ್ರರಾಯರು ಈ ಗ್ರಂಥವನ್ನು ರಚಿಸಿದ್ದಾರೆ. ಅವರಿಗೆ ನಾವು ಕೃತಜ್ಞರಾಗಿ ದ್ದೇವೆ. ಇದನ್ನು ಪರಿಶೋಧಿಸಿ ಮುದ್ರಣಕ್ಕೆ ಶಿಪಾರಸುಮಾಡಿದ ಮನಃಶಾಸ್ತ್ರ ಸಂಪಾದಕ ಮಂಡಳಿಯ ಅಧ್ಯಕ್ಷ ಪ್ರೊ. ಬಿ. ಕುಪ್ಪುಸ್ವಾಮಿಯವರಿಗೆ ನಮ್ಮ ವಂದನೆಗಳು. ಇದನ್ನು ಅಂದವಾಗಿ ಮುದ್ರಿಸಿದ ಬೃಂದಾವನ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್ ಪ್ರೈವೇಟ್ ಲಿಮಿಟೆಡ್, ಇವರಿಗೆ ನಾವು ಕೃತಜ್ಞರು.

ಪಠ್ಯಸಮಿತಿಯ ಕಾರ್ಯದಲ್ಲಿ ನನಗೆ ನಿತಾಂತ ಉತ್ಸಾಹದಿಂದಲೂ ಶ್ರದ್ಧೆ ಯಿಂದಲೂ ಸಹಾಯ ನೀಡುತ್ತಿರುವ ಶ್ರೀ ಜಿ. ಟಿ. ನಾರಾಯಣರಾಯರಿಗೆ ನಾನು ಹಾರ್ದಿಕ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

5-6-1968

ರಂ. ಶ್ರೀ. ಮುಗಳಿ
ಪ್ರಧಾನ ಸಂಪಾದಕರು
ಕನ್ನಡ ಪಠ್ಯ ಪುಸ್ತಕ ಸಮಿತಿ

# ಅರಿಕೆ

ಬೆಂಗಳೂರು ವಿಶ್ವವಿದ್ಯಾಲಯದ ಪಠ್ಯಪುಸ್ತಕಸಮಿತಿಯು ನಾನು ಮನಃಶಾಸ್ತ್ರದ ಪ್ರವೇಶಿಕೆಯನ್ನು ಕನ್ನಡದಲ್ಲಿ ಬರೆಯಬೇಕೆಂದು ಗೊತ್ತುಮಾಡಿದಾಗ, ಸಂತೋಷದಿಂದ ಈ ಕೆಲಸವನ್ನು ಒಪ್ಪಿಕೊಂಡೆ. ಕಳೆದ ವರ್ಷ ಕಣ್ಮರೆಯಾಗಿ ಕನ್ನಡನಾಡನ್ನು ಬಡತನದಲ್ಲಿ ಬಿಟ್ಟು ಹೋದ ಪ್ರೊ॥ ತೀ. ನಂ. ಶ್ರೀಕಂಠಯ್ಯನವರು ನನ್ನನ್ನು ಕಂಡಾಗಲೆಲ್ಲ "ನೀವು ಮನಃಶಾಸ್ತ್ರದ ವಿಚಾರವಾಗಿ ಕನ್ನಡದಲ್ಲಿ ಬರೆಯಬೇಕು" ಎಂದು ಹೇಳುತ್ತಿದ್ದರು. ಅವರಂತೆಯೇ ನಾಡಿಗೂ ನನಗೂ ಹಿರಿಯರಾದ ಶ್ರೀ ಪು. ತಿ. ನರಸಿಂಹಾಚಾರ್ಯರು ಇನ್ನಷ್ಟು ಸಲುಗೆಯಿಂದ "ನೀವು ಮನಃಶಾಸ್ತ್ರದ ಬಗ್ಗೆ ಇಂಗ್ಲೀಷಿನಲ್ಲಿ ಬರೆಯುವುದು ಸಾಕುಮಾಡಿ. ಕನ್ನಡದಲ್ಲಿ ಬರೆಯಿರಿ" ಎಂದು ಆಗ್ರಹ ಮಾಡುತ್ತಿದ್ದರು, ಮಾಡುತ್ತಿದ್ದಾರೆ. ಇವರಿಬ್ಬರ ವಿಚಾರದಲ್ಲಿಯೂ ನನಗೆ ಅಮಿತವಾದ ಗೌರವಬುದ್ಧಿಯಿರುವುದರಿಂದ ಈ ಕೆಲಸವನ್ನು ಮಾಡಲೇಬೇಕೆಂದು ಹವಣಿಸುತ್ತಿದ್ದೆ. ಬೇರೆ ಕೆಲಸದ ಮಧ್ಯೆ ಬಿಡುವಾಗದೆ ಪಶ್ಚಾತ್ತಾಪಪಡುತ್ತಿದ್ದಾಗ ಬೆಂಗಳೂರು ವಿಶ್ವವಿದ್ಯಾಲಯವು ಈ ಕೆಲಸಕ್ಕೆ ನಿಯೋಜಿಸಿ ನನ್ನನ್ನು ಕೃತಕೃತ್ಯನನ್ನಾಗಿ ಮಾಡಿದೆ. ಇದು ಸಂತೋಷಕ್ಕೆಕಾರಣ.

ಮನಃಶಾಸ್ತ್ರದ ವಿಚಾರವಾಗಿ ಕನ್ನಡದಲ್ಲಿ ಈ ವರೆಗೆ ಪುಸ್ತಕಗಳು ಬಂದಿಲ್ಲವೆಂದಲ್ಲ. ನನ್ನ ವಿದ್ಯಾಗುರುಗಳಾದ ಡಾ॥ ಎನ್. ಎಸ್. ನಾರಾಯಣಶಾಸ್ತ್ರಿಯವರೂ ಡಾ॥ ಬಿ. ಕುಪ್ಪುಸ್ವಾಮಿಯವರೂ ಮನಃಶಾಸ್ತ್ರದ ವಿಚಾರಗಳನ್ನು ಅಧಿಕರಿಸಿ ಸಣ್ಣ ಪುಸ್ತಕಗಳನ್ನೂ ದೊಡ್ಡಪ್ರಬಂಧಗಳನ್ನೂ ಬರೆದು ಪ್ರಕಟಿಸಿದ್ದಾರೆ. ಆದರೆ ಪಠ್ಯಪುಸ್ತಕಶೈಲಿಯಲ್ಲಿ ಸಾಧಾರಣ ಮನಃಶಾಸ್ತ್ರದ ಸಮಗ್ರಚಿತ್ರವನ್ನು ಒದಗಿಸುವಂಥ ಪುಸ್ತಕ ಈ ವರೆಗೆ ಬಂದುದಿಲ್ಲ. ಈ ಕೆಲಸವನ್ನು ನಾನು ಮಾಡಬೇಕಾಗಿ ಬಂದಾಗ ಪ್ರಥಮ ಪ್ರಯತ್ನದ ಕಷ್ಟನಿಷ್ಠುರಗಳನ್ನು ಅನುಭವಿಸಬೇಕಾಯಿತು. ಬೆಂಗಳೂರು ವಿಶ್ವವಿದ್ಯಾಲಯದ ಕಾಲೇಜುಗಳಲ್ಲಿ ಮನಃಶಾಸ್ತ್ರವನ್ನು ಸದ್ಯಕ್ಕೆ ಬೋಧಿಸಲು ವಿಷಯವ್ಯಾಪ್ತಿಯನ್ನು ನಿರ್ದೇಶನಮಾಡಿರುವ 'ಸಿಲಬಸ್' ನನಗೆ ಮಾರ್ಗದರ್ಶಕವಾಗಬೇಕಾಯಿತು. ವಿಶ್ವವಿದ್ಯಾಲಯದಲ್ಲಿ ಮನಃಶಾಸ್ತ್ರದ ಸ್ನಾತಕೋತ್ತರ ತರಗತಿಗಳಾಗಲೀ ಪ್ರತ್ಯೇಕ ಶಾಖೆಯಾಗಲೀ ಇನ್ನೂ ಇಲ್ಲದಿರುವುದರಿಂದ ಈ 'ಸಿಲಬಸ್' ಅಸಮರ್ಪಕವಾಗಿಯೇ

ಉಳಿದಿರುವುದು ಸಹಜ. ಇದನ್ನೇ ಅನುಸರಿಸಿ ಈ ಪಠ್ಯಪುಸ್ತಕವೂ ಸಿದ್ಧವಾಗಬೇಕಾದು ದರಿಂದ ಇಲ್ಲಿನ ವಿಷಯವ್ಯಾಪ್ತಿಯ ಬಗ್ಗೆ ನನಗೆ ಸಮಾಧಾನವಿಲ್ಲ. ಮುಂದಿನ ಪಠ್ಯ ಪುಸ್ತಕ ಸಿದ್ಧವಾಗುವ ವೇಳೆಗೆ 'ಸಿಲಬಸ್' ಇನ್ನಷ್ಟು ಸಮಗ್ರ ಚಿತ್ರವನ್ನು ಒದಗಿಸುವಂತೆ ಮಾರ್ಪಟ್ಟಿರುವುದೆಂದು ಆಶಿಸುತ್ತೇನೆ.

ಇದಲ್ಲದೆ, ನಮ್ಮ ಕಾಲೇಜುಗಳಲ್ಲಿ ಹಲವಾರು ಕಾರಣಗಳಿಂದ ಅಧ್ಯಾಪಕರು ಒಂದೊಂದು ಪ್ರಸಿದ್ಧಗ್ರಂಥವನ್ನು ಆಶ್ರಯಿಸಿ ಅದರಲ್ಲಿ ಅಡಕವಾದ ವಿವರಗಳನ್ನೇ ಅದೇ ನಿರೂಪಣಾಕ್ರಮದಲ್ಲಿಯೇ ಬೋಧಿಸುತ್ತಾರೆ. ಇದು ಸಹಜವೇ; ವಿದ್ಯಾರ್ಥಿ ಗಳಿಗೂ ಇದರಿಂದ ಹೆಚ್ಚಿನ ಶ್ರಮ ತಪ್ಪುತ್ತದೆ. ಸದ್ಯಕ್ಕೆ, ಬೆಂಗಳೂರಿನ ವಿಶ್ವವಿದ್ಯಾ ಲಯಕ್ಕೆ ಸೇರಿದ ಕಾಲೇಜುಗಳಲ್ಲಿ ನಾರ್ಮನ್ ಮನ್ ಬರೆದಿರುವ ಮನಃಶಾಸ್ತ್ರ ಗ್ರಂಥವನ್ನು ಅಧ್ಯಾಪಕರೂ ವಿದ್ಯಾರ್ಥಿಗಳೂ ವಿಶೇಷವಾಗಿ ಅವಲಂಬಿಸುತ್ತಾರೆ; ಈಗ ಬಳಕೆಯಲ್ಲಿರುವ 'ಸಿಲಬಸ್' ಕೂಡ ಇದೇ ಗ್ರಂಥದಿಂದ ವಿವರಗಳನ್ನೂ ಕ್ರಮವನ್ನೂ ಆಯ್ದುಕೊಂಡ ಹಾಗಿದೆ. ಹೀಗಾಗಿ ನಾನು ಪಠ್ಯಪುಸ್ತಕವನ್ನು ಸಿದ್ಧ ಮಾಡುವಾಗ ಇದೇ ಗ್ರಂಥವನ್ನು ಆಶ್ರಯಿಸದೆ ಬೇರೆ ದಾರಿಯಿರಲಿಲ್ಲ. ಮನಃಶಾಸ್ತ್ರ ವನ್ನು ಈವರೆಗೆ ಹದಿನೇಳು ವರ್ಷ ಪಾಠಹೇಳಿರುವ ನನ್ನ ಅನುಭವದಲ್ಲಿ ಹತ್ತಾರು ಗ್ರಂಥಗಳನ್ನು ಅವಲಂಬಿಸಿದ್ದೇನೆ, ನೂರಾರು ಗ್ರಂಥಗಳಿಂದ ನೆರವನ್ನು ಪಡೆದಿದ್ದೇನೆ. ನನ್ನ ಮಟ್ಟಿಗೆ ಹೇಳುವುದಾದರೆ ಮನ್ ಬರೆದಿರುವ ಈ ಪುಸ್ತಕ ಅಷ್ಟು ಸಮರ್ಪಕವಲ್ಲ; ಇದರ ಧೋರಣೆ ತುಲನಾತ್ಮಕ ಮನಃಶಾಸ್ತ್ರಕ್ಕೆ ಸೀಮಿತವಾದುದು. ಇಂದಿನ ಮನಃಶಾಸ್ತ್ರದ ವಿಚಾರಲಹರಿಯ ನಿಷ್ಪಕ್ಷಪಾತ ವಿಮರ್ಶೆ ಅಲ್ಲಿ ದೊರೆಯದು. ಆದರೂ ಅದನ್ನೇ ಮುಖ್ಯವಾದ ಆಧಾರಗ್ರಂಥವಾಗಿ ಇರಿಸಿಕೊಂಡೇ ನಾನು ಈ ಪುಸ್ತಕವನ್ನು ಬರೆಯಬೇಕಾಗಿ ಬಂದುದೂ ನನಗೆ ಸಮಾಧಾನವಿಲ್ಲ.

ಈ ಎರಡೂ ವಿಚಾರಗಳನ್ನು ನಾನು ಪ್ರಸ್ತಾಪಮಾಡಿರುವ ಕಾರಣ ಇಷ್ಟೇ. ಉಪಾಧ್ಯಾಯರೂ ವಿದ್ಯಾರ್ಥಿಗಳೂ ಮನಃಶಾಸ್ತ್ರದ ಪರಿಚಯವನ್ನು ಮಾಡುವಾಗ, ಪಡೆಯುವಾಗ ಈ 'ಸಿಲಬಸ್'ನ ಮತ್ತು ಪಠ್ಯಪುಸ್ತಕದ ಮಿತಿಯನ್ನು ಅರಿತು ಕೊಳ್ಳುವುದು ಅಗತ್ಯ. ಅವನ್ನೇ ಶ್ರುತಿಪ್ರಮಾಣದಂತೆ ಪರಿಗಣಿಸದೆ ಇತರ ವಿವರ ಗಳನ್ನೂ ಇತರ ಗ್ರಂಥಗಳನ್ನೂ ಪರಿಶೀಲಿಸಬೇಕೆಂದು ಅವರಲ್ಲಿ ನನ್ನ ಬಿನ್ನಹ. ಇದರಿಂದ ಈ ಶಾಸ್ತ್ರದ ವಿಚಾರವಾಗಿ ಸ್ನೇಹ ಬೆಳೆದೀತು, ಇದರಿಂದ ಪ್ರಯೋಜನ ವಾದೀತು. ಪಠ್ಯಪುಸ್ತಕವೊಂದರಿಂದಲೇ ಶಾಸ್ತ್ರದ ಪರಿಚಯವನ್ನು ಪಡೆಯುವುದು ಸಾಧ್ಯವಿಲ್ಲವಷ್ಟೆ. ಕನ್ನಡದಲ್ಲಿ ಸ್ವತಂತ್ರ ಗ್ರಂಥಗಳು ಸಾಕಷ್ಟು ಬರುವವರೆಗಾದರೂ ಇಂಗ್ಲಿಷ್ ಗ್ರಂಥಗಳು ಅಧ್ಯಾಪಕರ, ವಿದ್ಯಾರ್ಥಿಗಳ ನೆರವಿಗೆ ಬರಬೇಕು.

ಇಲ್ಲಿ ಬಳಸಿರುವ ಪಾರಿಭಾಷಿಕ ಪದಗಳ ವಿಚಾರವಾಗಿ ಎರಡು ಮಾತು. ಹೊರದೇಶಗಳಲ್ಲಿ ಹುಟ್ಟಿ, ಅಲ್ಲೇ ಬೆಳೆದು ವಯಸ್ಸಿಗೆ ಬಂದ ಶಾಸ್ತ್ರಗಳ ಪರಿಚಯ

ವನ್ನು ನಮ್ಮ ದೇಶಭಾಷೆಗಳಲ್ಲಿ ಮಾಡಿಕೊಡುವಾಗ ಪಾರಿಭಾಷಿಕಪದಗಳ ಗೊಂದಲ ತಪ್ಪುವುದಿಲ್ಲ. ಶಾಸ್ತ್ರ ಬೆಳೆಯದೆ ಪಾರಿಭಾಷಿಕಪದಗಳು ಬಳಕೆಗೆ ಬರುವುದಿಲ್ಲ. ನಿತ್ಯ ಆಡುವ ಮಾತಿನಲ್ಲಿ ಪಾರಿಭಾಷಿಕ ಕಳೆಯನ್ನು ತುಂಬಿಸುವುದು ಕಷ್ಟ. ಶಾಸ್ತ್ರ ಪ್ರಕ್ರಿಯೆಯನ್ನು ಅನುಸರಿಸಿ, ಅರ್ಥದ ಕಡೆ ಗಮನವಿಟ್ಟು ಹೊಸ ಪದಗಳನ್ನು ಸೃಷ್ಟಿ ಮಾಡಬೇಕಾಗುತ್ತದೆ. ಹೀಗೆ ಮಾಡುವಾಗ ಸಂಸ್ಕೃತದಿಂದ ಮಾತುಗಳನ್ನು ಆಯ್ದು ಕೊಳ್ಳುವುದು ಸುಲಭ. ತಿಳಿಗನ್ನಡದಲ್ಲಿ ನಾಲ್ಕಾರು ವಾಕ್ಯಗಳ ವಿವರಣೆಯನ್ನು ಕೊಡಬಹುದು, ಆದರೆ ಸಮಾನಾರ್ಥದ ಪದಗಳನ್ನು ಕನ್ನಡದಲ್ಲಿಯೇ ಹೊಂದಿಸುವುದು ಕಷ್ಟ. ಇಂಗ್ಲಿಷ್, ಲ್ಯಾಟಿನ್, ಜರ್ಮನ್ ಭಾಷೆಗಳಲ್ಲಿ ಪಾರಿಭಾಷಿಕಪದಗಳನ್ನು ಹೊಂದಿಸುವ ಸೌಕರ್ಯ ಎಷ್ಟಿದೆಯೋ ಅದಕ್ಕಿಂತ ಹೆಚ್ಚಿನ ಸೌಕರ್ಯ ಸಂಸ್ಕೃತದಲ್ಲಿದೆ. ಈ ಭಾಷೆ ಸಹಜಮಾತ್ರವಲ್ಲದೆ 'ಸಂಸ್ಕೃತ' ವೂ ಆದುದರಿಂದ ಈ ಗುಣ ಅದರಲ್ಲಿದೆ. ಈ ಕಾರಣದಿಂದ ನಮ್ಮ ನಾಡಿನ ಎಲ್ಲ ದೇಶಭಾಷೆಗಳಲ್ಲಿಯೂ ಪಾರಿಭಾಷಿಕ ಪದಗಳನ್ನು ಸಾಧ್ಯವಾದಮಟ್ಟಿಗೆ ಸಂಸ್ಕೃತದಿಂದಲೇ ಆಯ್ದುಕೊಳ್ಳುವ ಪದ್ಧತಿಯಿದೆ. ಇಲ್ಲಿ ಬಳಸಿರುವ ಪಾರಿಭಾಷಿಕಪದಗಳು ಕೆಲವೊಮ್ಮೆ ಆಟಾಟೋಪ, ಭಯಂಕರ ಎಂದು ಕಂಡುಬಂದರೂ ಅರ್ಥಪುಷ್ಟಿಯ ದೃಷ್ಟಿಯಿಂದಲೂ ಖಚಿತತಾತ್ಪರ್ಯದ ದೃಷ್ಟಿ ಯಿಂದಲೂ ಇವು ಹೀಗಾಗಿವೆ ಎಂದು ಮನಗೊಳ್ಳಬೇಕು. ವಿದ್ಯಾರ್ಥಿಗಳು ಸಹನೆ ಯಿಂದ ಈ ಮಾತುಗಳನ್ನು ಅರಗಿಸಿಕೊಳ್ಳಬೇಕಾದ ಅಗತ್ಯವಿದೆ. ಸಂಸ್ಕೃತಕ್ಕೂ ಬಗ್ಗದಿರುವ ಪಾರಿಭಾಷಿಕ ಪದಗಳನ್ನು ಅವುಗಳ ಮೂಲ ಲ್ಯಾಟಿನ್, ಇಂಗ್ಲಿಷ್ ಅಥವಾ ಜರ್ಮನ್ ರೂಪಗಳಲ್ಲೇ ಬಿಟ್ಟಿದ್ದೇನೆ. ಇದೂ ಅನಿವಾರ್ಯವೇ. ಪೂರ್ವ ಸೂರಿಗಳ ನೆರವಿಲ್ಲದೆ ನಾನೇ ಈ ಪಾರಿಭಾಷಿಕ ಪದಗಳನ್ನು ಹೆಣೆಯಬೇಕಾಗಿ ಬಂದುದು ಕಷ್ಟವೇ ಆಯಿತು. ಆದರೆ ಈ ಮಾತುಗಳೇ ಸರಿ ಎನ್ನುವ ಛಲ ನನಗಿಲ್ಲ; ಇನ್ನಷ್ಟು ಒಪ್ಪವಾದ ಮಾತುಗಳನ್ನು ಮನಃಶಾಸ್ತ್ರಕ್ಷೇತ್ರದಲ್ಲಿ ಕೆಲಸಮಾಡುತ್ತಿರುವ ನನ್ನ ಮಿತ್ರರು ಸಿದ್ಧಪಡಿಸಿದರೆ ನನಗೆ ತೃಪ್ತಿಯೇ; ಪ್ರಚೋದನೆ ನನ್ನದಾಯಿತೆಂದು ಸಂತೋಷಪಟ್ಟುಕೊಳುತ್ತೇನೆ.

ಕಡೆಯದಾಗಿ, ಈ ಕೆಲಸಕ್ಕೆ ಆದೇಶವನ್ನೂ ಸ್ಫೂರ್ತಿಯನ್ನೂ ನೆರವನ್ನೂ ನೀಡಿದ ಹಿರಿಯರಿಗೆಲ್ಲ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಪಠ್ಯ ಪುಸ್ತಕ ಸಮಿತಿಯ ಅಧ್ಯಕ್ಷರಾದ ಡಾ॥ ರಂ. ಶ್ರೀ. ಮುಗಳಿಯವರಿಗೂ, ಡಾ॥ ಬಿ. ಕುಪ್ಪುಸ್ವಾಮಿ ಯವರಿಗೂ ಋಣಿಯಾಗಿದ್ದೇನೆ. ಬರೆಯಲು ನೆರವಾದ ನನ್ನ ಹೆಂಡತಿ ಶ್ರೀಮತಿ ರಮಾದೇವಿಗೂ ನನ್ನ ಮಿತ್ರ ಶ್ರೀ ಎಂ. ಎಸ್. ವಾಸುದೇವಮೂರ್ತಿಗೂ ನನ್ನ ಕೃತಜ್ಞತೆ ಸಲ್ಲಬೇಕು.

ಎಸ್. ಕೆ. ರಾಮಚಂದ್ರರಾವ್

15 ಏಪ್ರಿಲ್ 1968
ಆರ್. ವಿ. ಟೀಚರ್ಸ್ ಕಾಲೇಜು
ಬೆಂಗಳೂರು – 11

# ವಿ ಷ ಯಾ ನು ಕ್ರ ಮ ಣಿ ಕೆ

ಪರಿಚ್ಛೇದ ಒಂದು

# ವಸ್ತುನಿರ್ದೇಶ – ವ್ಯಾಪ್ತಿ

೧

**ಅವತರಣಿಕೆ**

ಮನುಷ್ಯನ ಮನಸ್ಸನ್ನು ಹಿಡಿಯುವುದು ಕಷ್ಟ ಎನ್ನುವ ಗಾದೆಯುಂಟಷ್ಟೆ. ಮನುಷ್ಯನ ಮನಸ್ಸನ್ನು ಅರಿತುಕೊಳ್ಳುವುದೂ ಕಷ್ಟವೇ. ನಾವು ಯೋಚನೆ ಮಾಡುವುದು ಹೇಗೆ? ನೆನಪು ಉಳಿಯುವುದು ಹೇಗೆ? ಕೋಪ ಬಂದಾಗ ಮೈ ನಡುಗುವುದೇಕೆ? ಕಣ್ಣು ಆಶ್ಚರ್ಯದಲ್ಲಿ ಅರಳುವುದೇಕೆ? ಕೆಲವರು ತುಂಬ ಬುದ್ಧಿಶಾಲಿಗಳಾಗಿಯೂ ಕೆಲವರು ಬುದ್ಧಿಯಿಲ್ಲದೆ ಮಂಕರಾಗಿಯೂ ಇರುವುದು ಹೇಗೆ? ಹೀಗೆಯೇ ನೂರಾರು ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ. ಮನಸ್ಸಿನ ಆಡಿ-ಆಯಗಳನ್ನು ತಿಳಿಯಬೇಕೆನ್ನುವ ಹಂಬಲ ಮನುಷ್ಯನಿಗೆ ಹೊಸದೇನಲ್ಲ. ಮನುಷ್ಯನ ಸಂಸ್ಕೃತಿ ಆರಂಭವಾಗುವಾಗಲೇ ಈ ಜಿಜ್ಞಾಸೆ ಮೊದಲಾಯಿತು. ಕಾಡುಮನುಷ್ಯ ಗುಹೆಯಲ್ಲಿ ಮಲಗಿರುತ್ತ ಕನಸುಕಂಡು, ಎಚ್ಚರಗೊಂಡು ತಾನು ನೋಡಿದ ಅದ್ಭುತಕ್ಕೆ ಬೆಚ್ಚಿಬೀಳುತ್ತಾನೆ, ಬೆರಗಾಗುತ್ತಾನೆ. ನಿತ್ಯಜೀವನದಲ್ಲಿ ಆಗಲಾರದ, ನೋಡಲಾರದ ವೃತ್ತಗಳೂ ಪ್ರಸಂಗಗಳೂ ಮಿದುಳಿನ ಒಳಗೇ ನಡೆಯುವುದು ಸೋಜಿಗವಲ್ಲವೆ? ಮನಸ್ಸಿಗೆ ಸಂಬಂಧಿಸಿದ ಅನ್ವೇಷಣೆ ಹೀಗೆ ಮೊದಲಾಯಿತು.

ಎಲ್ಲ ಪ್ರಾಚೀನ ಜನಾಂಗದಲ್ಲಿಯೂ ಮನಃಶಾಸ್ತ್ರಕ್ಕೆ ಹೊಂದಿಕೊಂಡಂತೆ ವಿಚಾರಧಾರೆ ಅಗತ್ಯವಾಗಿಯೇ ಬಂದಿದೆ. ಮನಸ್ಸನ್ನು ನಮ್ಮ ತಿಳುವಳಿಕೆಯಲ್ಲಿ ಹಿಡಿದಿಡಬೇಕೆಂಬ ಕಾತರ ಪ್ರಪಂಚದ ಎಲ್ಲ ಜನರಲ್ಲಿಯೂ ಉಂಟು. ಆದರೆ ಶಾಸ್ತ್ರನಿಷ್ಠವಾಗಿ ಈ ವಿಚಾರ ಪ್ರೌಢವಾದುದು ಇತ್ತೀಚಿಗೆ, ಐರೋಪ್ಯ ದೇಶಗಳಲ್ಲಿ. ಭೌತ

ಶಾಸ್ತ್ರ, ರಸಾಯನಶಾಸ್ತ್ರ, ಪ್ರಾಣಿಶಾಸ್ತ್ರ, ವೈದ್ಯಶಾಸ್ತ್ರ ಮೊದಲಾದ ಉಳಿದ ಶಾಸ್ತ್ರಗಳು ಸಂಪನ್ನವಾದಮೇಲೆ ಮನಃಶಾಸ್ತ್ರ ಮೈದಳೆಯಿತು. ಇದೂ ಒಂದು ದೃಷ್ಟಿಯಲ್ಲಿ ಸರಿಯೇ. ಹೊರಗಿನ ವಿಶ್ವವನ್ನು ಅಷ್ಟಿಷ್ಟು ಅರಿತಮೇಲೆ ಒಳಗಿನ ಆಗುಹೋಗುಗಳನ್ನು ಅರಿಯುವ ಬಯಕೆ ಬೇರೂರುವುದು ಸಹಜ. ನೋಡುವ ನೋಟ ಬಲಗೊಂಡಮೇಲೆ ಕಾಣುವ ಕಣ್ಣಿನ ಸ್ವಾರಸ್ಯವೇನೆಂದು ತಿಳಿಯುವ ಕುತೂಹಲ ಒದಗುತ್ತದೆ. ಅನುಭವವೆಲ್ಲ ಕೈಗೂಡಿದರೆ, ಅದಕ್ಕೆ ಮೂಲಭೂತವಾದ ಮನಃಪ್ರವೃತ್ತಿ ಸ್ಪಷ್ಟವಾಗುತ್ತದೆ. ಈ ನೆಲೆಯಲ್ಲಿಯೇ ನಮ್ಮ ಪ್ರಾಚೀನರು ಆಧಿ ಭೌತಿಕಕ್ಕೆ ಅಧ್ಯಾತ್ಮ ವ್ಯಾಪಾರ ಮುಖ್ಯವಾದುದೆಂದು ಹೇಳಿದರು.

ಮನಃಶಾಸ್ತ್ರವು ಶಾಸ್ತ್ರಗಳ ಸಂಸಾರದಲ್ಲಿ ತುಂಬ ಕಿರಿಯದು ; ಅದು ಪ್ರೌಢವಾಗಿ ಒಂದು ನೂರು ವರ್ಷಗಳಾಗಿವೆಯಷ್ಟೆ. ಇಂದಿಗೂ ' ಅದು ಶಾಸ್ತ್ರವಲ್ಲ, ಒಂದು ವಿದ್ಯೆ ಅಷ್ಟೆ ' ಎಂದು ವಾದಿಸುವ ಶಾಸ್ತ್ರನಿಷ್ಠರು ಇಲ್ಲದೆ ಇಲ್ಲ. ಉಳಿದ ಶಾಸ್ತ್ರಗಳಲ್ಲಿದ್ದಂತೆ ಇಲ್ಲಿ ವಸ್ತುನಿರ್ದೇಶ ಸ್ಪಷ್ಟವಾಗಿಲ್ಲ, ಇದರ ಸಂವಿಧಾನಗಳು ಅಷ್ಟು ಅನವದ್ಯವಲ್ಲ ಇದಕ್ಕೆ ಪ್ರಯೋಗದ ಗೀಳು ಹೆಚ್ಚು, ಅನ್ವೇಷಣೆಯ ದೃಷ್ಟಿ ದುರ್ಬಲ ಎಂದು ಮುಂತಾಗಿ ಅವರು ವಾದಿಸುತ್ತಾರೆ. ಈ ವಾದವನ್ನು ತೀರ ತಪ್ಪೆಂದು ತಿರಸ್ಕರಿಸುವ ಹಾಗಿಲ್ಲ. ಮನಃಶಾಸ್ತ್ರದ ವಸ್ತುನಿರ್ದೇಶ ಇಂದಿಗೂ ಅಲ್ಲಲ್ಲಿ ವಿವಾದಾಸ್ಪದವಾಗಿಯೇ ಉಳಿದಿದೆ. ಸಂವಿಧಾನಗಳು ಇನ್ನೂ ಖಚಿತವಾಗಿಲ್ಲ ; ಪ್ರಯೋಗದ ನೆಲೆಯನ್ನು ಪೂರ್ತಿ ದಾಟಿಲ್ಲ. ವೈದ್ಯಕ್ಕೆ, ಉದ್ಯೋಗಕ್ಕೆ, ಶಿಕ್ಷಣಕ್ಕೆ, ರಕ್ಷಣೆಗೆ ಮನಃಶಾಸ್ತ್ರವನ್ನು ಬಳಸುವ ಉತ್ಸಾಹದಲ್ಲಿ ಅನ್ವೇಷಣೆಯ ದೃಷ್ಟಿ ಸ್ವಲ್ಪಮಟ್ಟಿಗೆ ಕುಂಠಿತವಾಗಿದೆಯೆಂದು ಒಪ್ಪಿಕೊಳ್ಳಬೇಕು. ಆದರೆ ಇಷ್ಟರಿಂದ ಅದು ಶಾಸ್ತ್ರವಲ್ಲ ಎನ್ನುವಹಾಗಿಲ್ಲ, ವಸ್ತು ನಿರ್ದೇಶವಾಗಿಲ್ಲ ಎನ್ನುವಹಾಗಿಲ್ಲ, ಅನ್ವೇಷಣೆ ಬಲಗೊಂಡಿಲ್ಲ ಎನ್ನುವಹಾಗಿಲ್ಲ.

ಮನಃಶಾಸ್ತ್ರದ ಮುಖ್ಯ ವಿಷಯ ಮನಸ್ಸು. ಇದು ನೆಲದಂತೆ, ನೀರಿನಂತೆ, ಜೀವಿ ಗಳಂತೆ ಇಂದ್ರಿಯಗೋಚರವಾದುದಲ್ಲ, ವ್ಯವಹಾರ್ಯವಾದುದಲ್ಲ: ವಿಚಾರದಲ್ಲಿಯೇ ಪ್ರಯೋಗಶಾಲೆಯಲ್ಲಿಯೇ ನೇರವಾಗಿ ನಿಲ್ಲುವಂಥದಲ್ಲ. ಅದರ ಸ್ವರೂಪ ಸ್ಥೂಲವಾದುದಲ್ಲ, ಅತ್ಯಂತ ಸೂಕ್ಷ್ಮ. ಮನಸ್ಸಿನ ಬಗ್ಗೆ ವಿಚಾರಮಾಡಲು ಮನಸ್ಸೇ ನೆರವಾಗಬೇಕಲ್ಲವೆ ? ಇದೂ ಒಂದು ಕೊರತೆಯೇ. ಯಾವ ಯಂತ್ರದಿಂದಲೂ, ಭೌತಿಕ ಸಾಧನದಿಂದಲೂ ಮನಸ್ಸನ್ನು ಅರಿಯುವುದಾಗಲೀ ಅಳೆಯುವುದಾಗಲೀ ಸಾಧ್ಯವಿಲ್ಲ. ಇತರ ಶಾಸ್ತ್ರಗಳಂತೆ ಪ್ರಯೋಗಪ್ರಮುಖವಾದ ಸಂವಿಧಾನವನ್ನು ಇಲ್ಲಿ ಅನುಸರಿಸುವಹಾದಿಲ್ಲ. ಪ್ರತ್ಯಕ್ಷಕ್ಕೆ ಒಳಪಡುವಂಥ ವಸ್ತುವಲ್ಲ ಮನಸ್ಸು. ಮನಸ್ಸನ್ನು ಅನುಸಂಧಾನ ಮಾಡಿ ವಿಚಾರಮಾಡುವಾಗ ವ್ಯಕ್ತಿಗತವಾದ ವೈವಿಧ್ಯ ಬಹುಮಟ್ಟಿಗೆ ಮನಃಶಾಸ್ತ್ರವನ್ನು ಕಾಡುತ್ತದೆ. ಈ ಕೊರತೆ ಉಳಿದ ಶಾಸ್ತ್ರಗಳಲ್ಲಿ ಅಷ್ಟಾಗಿ ಇರದು. ಆದರೆ ಇದಕ್ಕೆ ಅಂಜಿ ಶಾಸ್ತ್ರವನ್ನೇ ವ್ಯವಸ್ಥೆ ಮಾಡದಿದ್ದರೆ ಹೇಗೆ ?

ಈ ವಸ್ತುವಿಗೆ ಅನುರೂಪವಾದ ಅನುಸಂಧಾನವನ್ನೇ ಏರ್ಪಡಿಸಿದನಂತರ ಮನಃಶಾಸ್ತ್ರ ಬೆಳೆಯಿತು.

ಮನಃಶಾಸ್ತ್ರ ಬೆಳೆಯುವಾಗ ಉಳಿದೆಲ್ಲ ಶಾಸ್ತ್ರಗಳ ನೆರವು ದೊರೆಯಿತು. ಮನುಷ್ಯನ ದೇಹವ್ಯವಸ್ಥೆ, ಅಂಗರಚನೆ, ಜೀವವಿಜ್ಞಾನ, ಮನುಷ್ಯೇತರ ಪ್ರಾಣಿಗಳ ಸ್ವರೂಪ-ಸ್ವಭಾವ, ಪ್ರಚೋದನೆ-ಪ್ರತಿಕ್ರಿಯೆಗಳ ನೆಲೆ ಮೊದಲಾದ ವಿಚಾರಗಳು ಮನಸ್ಸಿನ ಸ್ವರೂಪವನ್ನು ನಿಷ್ಕರ್ಷೆ ಮಾಡಲು ನೆರವಾದುವು. ಉಳಿದ ಶಾಸ್ತ್ರಗಳಿಂದ ಮೈದುಂಬಿಸಿಕೊಂಡ ಮನಃಶಾಸ್ತ್ರವು ಇಂದು ಉಳಿದ ಶಾಸ್ತ್ರಗಳಿಗೆ ನೆರವು ನೀಡುವ ಸ್ಥಿತಿಯಲ್ಲಿದೆ. ಅದರ ವೈಶಿಷ್ಟ್ಯವನ್ನೂ ಉಪಯುಕ್ತತೆಯನ್ನೂ ಉಳಿದ ಶಾಸ್ತ್ರಗಳು ಗ್ರಹಿಸಿವೆ.

೨

**ಶಾಸ್ತ್ರನಿಷ್ಠೆ**

ಮನಃಶಾಸ್ತ್ರದ ವಸ್ತುನಿರ್ದೇಶ ನೂರು ವರ್ಷಗಳಿಂದ ಏಕಪ್ರಕಾರವಾಗಿ ಉಳಿದುಬಂದಿಲ್ಲ ; ಯುಗಯುಗದಲ್ಲಿ ಮಾರ್ಪಡುತ್ತ ಬಂದು ನಮ್ಮ ಕಾಲಕ್ಕೆ ಸುಮಾರಾಗಿ ನಿರ್ದಿಷ್ಟವಾಗಿದೆ -ಎನ್ನಬಹುದು. ಹೊಂದಿಕೊಂಡು ಬಂದ ಇತರ ಶಾಸ್ತ್ರಗಳ ಪ್ರಭಾವದಿಂದ ವಸ್ತುನಿರ್ದೇಶದಲ್ಲಿ ವೈವಿಧ್ಯ ಒದಗಿದೆ. ನಿದರ್ಶನಕ್ಕೆ, ಮನಃಶಾಸ್ತ್ರ ಬೆಳೆದುಬಂದ ದಾರಿಯಲ್ಲಿ ಮೊದಲನೆಯ ಪ್ರಭಾವ ತತ್ತ್ವಶಾಸ್ತ್ರದ್ದು; ಮೊದಮೊದಲು ತತ್ತ್ವಶಾಸ್ತ್ರದ ವ್ಯಾಪ್ತಿಯಲ್ಲಿಯೇ ಮನಃಶಾಸ್ತ್ರ ಮೂಡಿಬಂದಿತು. ಮನುಷ್ಯನ ಅಂತರಾತ್ಮದ ವಿಶ್ಲೇಷಣೆಯಲ್ಲಿ, ವಿಶ್ವ-ಮಾನವ ಸಂಬಂಧದಲ್ಲಿ ಒದಗಿ ಬರುವ ದರ್ಶನ, ಕ್ರಿಯೆ, ಅನುಭವ, ಉದ್ವೇಗ, ಚಿಂತನ, ಮನನ, ರುಚಿ, ರಕ್ತಿ ಮೊದಲಾದ ವಿವರಗಳನ್ನು ತಿಳಿಯಬೇಕಾದ ಅಗತ್ಯವಿದೆ. ಮನುಷ್ಯನ ಮೂಲ ಪ್ರವೃತ್ತಿಗಳನ್ನು ತಿಳಿಯದೆ ವಿಶ್ವವ್ಯವಸ್ಥೆಯ ನಿಯಮಗಳನ್ನು ತಿಳಿಯುವುದು ಸಾಧ್ಯ ವಿಲ್ಲ. ಈ ದೃಷ್ಟಿಯಿಂದ ತತ್ತ್ವಶಾಸ್ತ್ರವು ಮನಃಶಾಸ್ತ್ರದ ಅನ್ವೇಷಣೆಯನ್ನು ಅಳವಡಿಸಿಕೊಂಡಿತು. ಈ ಮಾತು ಪೌರ್ವಾತ್ಯ, ಪಾಶ್ಚಾತ್ಯ ಎರಡೂ ದೇಶಗಳ ತತ್ತ್ವಶಾಸ್ತ್ರ ಪ್ರಕಾರಗಳಿಗೆ ಅನ್ವಯಿಸುತ್ತದೆ. ಮೊದಲಿಗೆ ಮನುಷ್ಯನ ದೇಹದಲ್ಲಿ ಚೇತನಸ್ವರೂಪವಾಗಿರುವ 'ಅಧ್ಯಾತ್ಮ'ವೇ ಮನಃಶಾಸ್ತ್ರದ ವಸ್ತು ಎಂದು ಬಗೆದಾಗ ಮನಃಶಾಸ್ತ್ರವನ್ನು 'ಅಧ್ಯಾತ್ಮವಿದ್ಯೆ' (ಸೈಕಾಲಜಿ) ಎಂದು ನಿರ್ದೇಶಿಸಿದರು. ತತ್ತ್ವಶಾಸ್ತ್ರಕ್ಕೆ ಸಹಜವಾದ ಚಿಂತನ ಸಂವಿಧಾನವೇ ಮನಃಶಾಸ್ತ್ರದಲ್ಲಿಯೂ ಒದಗಿ ಬಂದಿತು.

ಶಾಸ್ತ್ರದ ದೃಷ್ಟಿಯಿಂದ 'ಅಧ್ಯಾತ್ಮ' ವಿಮರ್ಶೆಗಾಗಲೀ, ವಿಚಾರಕ್ಕಾಗಲೀ, ಪ್ರಯೋಗಕ್ಕಾಗಲೀ ಒಳಪಡುವುದಿಲ್ಲ ಎಂದು ಕಂಡುಕೊಂಡಾಗ ಈ ವಸ್ತುವನ್ನು ಕೈಬಿಟ್ಟು ಮಾನವವ್ಯಾಪಾರಕ್ಕೆ ಅಧಿಷ್ಠಾನವಾದ 'ಸಂವಿತ್' (consciousness) ಇದನ್ನು

ವಸ್ತುವೆಂದು ಗ್ರಹಿಸಿದರು. 'ಸೈಕಾಲಜಿ' ಎನ್ನುವ ಮಾತಿನಲ್ಲಿ ಧಾತುವಾಗಿ ಸೇರಿರುವ 'ಸೈಕಿ' ಎನ್ನುವ ಗ್ರೀಕ್‌ಪದಕ್ಕೆ 'ಚೇತನ', 'ಸಂವಿತ್', 'ಆತ್ಮ' ಎಂದರ್ಥ. ಆತ್ಮವು ಅನ್ವೇಷಣೆಯ ಹಿಡಿತದಿಂದ ಜಾರಿದಾಗ 'ಚೇತನ'ವನ್ನು ಉಳಿಸಿಕೊಂಡರು. ಆದರೆ ಸಂವಿತ್ ಅಥವಾ 'ಚೇತನ' ಕಲ್ಪನೆಯು ಜೀವಾತ್ಮದ ಕಲ್ಪನೆಗಿಂತ ಹೆಚ್ಚು ನಿರ್ದಿಷ್ಟವಾದುದೇನಲ್ಲ ಎಂಬುದು ಸ್ಪಷ್ಟವಾದಾಗ ಈ ಪದವೂ ಬಳಕೆಯಿಂದ ಜಾರಿತು. ಈ ವೇಳೆಗಾಗಲೇ ವಿಜ್ಞಾನದ ಸಂವಿಧಾನಗಳ ಬಗ್ಗೆ ವಿಶೇಷವಾದ ಆದರ ಬೆಳೆದುಬಂದಿದ್ದಿತಾಗಿ, ಮನಃಶಾಸ್ತ್ರ ಅನ್ವೇಷಕರು ಈ ಸಂವಿಧಾನಗಳನ್ನು ಬಳಸಿದಾಗ ಹಿಡಿತಕ್ಕೆ ಸಿಗುವುದಷ್ಟೇ ಮನಃಶಾಸ್ತ್ರದ ವಸ್ತುವಾಗಬೇಕು ಎಂದು ವಾದಿಸಲಾರಂಭಿಸಿದರು. ಈ ದೃಷ್ಟಿಯಿಂದ ವರ್ತನೆ (behaviour) ಎನ್ನುವ ಪ್ರಕ್ರಿಯೆ ಆರಂಭವಾಯಿತು. ಪ್ರಯೋಗಶಾಲೆಯಲ್ಲಿ ಅಳೆಯಬಹುದಾದುದು, ಇಂದ್ರಿಯಗಳಿಂದ ಗ್ರಾಹ್ಯವಾದುದು, ವರ್ಣನೆಗೆ ಉಚಿತವಾದುದು ವರ್ತನೆಯೇ ಅಲ್ಲವೆ? ಆಡುವ ಮಾತು, ಮಾಡುವ ಕೆಲಸ, ಹೂಡುವ ಭಂಗಿ ಎಲ್ಲವೂ ವರ್ತನೆಯೇ. ವಾಚಿಕ, ಮಾನಸಿಕ, ಕಾಯಿಕ ಎಂದು ಕರ್ಮದಲ್ಲಿ ಮೂರುವಿಭಾಗವನ್ನು ನಮ್ಮ ಪ್ರಾಚೀನರು ಮಾಡಿದ್ದರಷ್ಟೆ. ವರ್ತನೆಗೆ ಈ ವಿಸ್ತಾರದ ವ್ಯಾಪ್ತಿಯುಂಟು. ಕೆಲವು ವರ್ತನವಾದಿಗಳೇನೋ ಮಾನಸಿಕ ಕ್ರಿಯೆಗಳೆಲ್ಲ ವಾಸ್ತವವಾಗಿ ದೈಹಿಕ ಕರ್ಮಗಳೇ ಎಂದು ಶಪಥಮಾಡಿದರು; ಆದರೂ ಅವು ಆಂತರವೆನ್ನುವ ಗೋತ್ರಕ್ಕೆ ಸೇರಿದವು ಎನ್ನುವುದನ್ನು ಒಪ್ಪಿದರು. ಅಂತೂ ವರ್ತನವಾದವು ವಿಶೇಷವಾಗಿ ಅಮೆರಿಕೆಯಲ್ಲಿ ಬೆಳೆಯಿತು. ಜಾನ್ ವಾಟ್ಸನ್ ಎಂಬ ಮನಃಶಾಸ್ತ್ರಜ್ಞನು ವರ್ತನವಾದದ ಹಟವನ್ನು ಹಿಡಿದು ಮನಃಶಾಸ್ತ್ರದ ಇತಿಹಾಸದಲ್ಲಿ ಕ್ರಾಂತಿಯೊಂದನ್ನೇ ಎಬ್ಬಿಸಿದನು.

ಈ ವಾದವನ್ನೇ ಎಲ್ಲರೂ ಒಪ್ಪಲಿಲ್ಲ. ಜರ್ಮನ್‌ದೇಶದಲ್ಲಿ ಆಧ್ಯಾತ್ಮಪ್ರಸಕ್ತಿ ಸಂಪೂರ್ಣವಾಗಿ ಮರೆಯಾಗಲಿಲ್ಲ; ಮನೋವಿಶ್ಲೇಷಣವಾದಿಗಳು ಶುದ್ಧಮಾನಸ ವ್ಯಾಪಾರಗಳನ್ನು ಮತ್ತು ಸಂವಿತ್‌ಪ್ರವೃತ್ತಿಗಳನ್ನು ಕೈಬಿಡಲಿಲ್ಲ. ಆದರೂ ಮನಃಶಾಸ್ತ್ರವು ಪ್ರಯೋಗಶೀಲವಾಗಲು ವರ್ತನವಾದವು ಬಹುಮಟ್ಟಿಗೆ ನೆರವಾಯಿತು. ವರ್ತನವಾದದ ಮೂಲಪ್ರಣಾಳಿಕೆಗಳನ್ನು ಎಲ್ಲರೂ ಗ್ರಾಹ್ಯವೆಂದೂ ವ್ಯವಹಾರ್ಯವೆಂದೂ ಪರಿಗಣಿಸಿದರು. ಈಗ ಮನಃಶಾಸ್ತ್ರವೆಂದರೆ 'ಮಾನವ ವರ್ತನೆಯನ್ನು ವಿಧ್ಯುಕ್ತವಾಗಿ ಅನ್ವೇಷಣೆಮಾಡುವ ಶಾಸ್ತ್ರ' ಎನ್ನುವ ನಿರೂಪಣೆ ದೃಢವಾಗಿ ನಿಂತಿದೆ. ಮಾನವನ ವರ್ತನೆಯೆಂದರೆ ದೈಹಿಕ, ಮಾನಸಿಕ, ವಾಚಿಕ ಮೂರೂ ಕ್ರಿಯೆಗಳು ಸೇರಿವೆಯೆಂಬುದನ್ನು ನೆನಪಿನಲ್ಲಿಟ್ಟುಕೊಳ್ಳಬೇಕು.

ಮಾನವನ ವರ್ತನೆಯನ್ನು ಅಧ್ಯಯನ ಮಾಡುವ ಶಾಸ್ತ್ರಗಳು ಹಲವಾರು ಇವೆ. ಅವನ ದೇಹರಚನೆ, ದೈಹಿಕಪ್ರವೃತ್ತಿಗಳನ್ನು ಕುರಿತು ದೇಹವಿಜ್ಞಾನ (Physiology); ಜೀವಸಂತಾನದಲ್ಲಿ ಅವನ ನೆಲೆ, ಅವನ ವಂಶಾಭ್ಯುದಯ, ಸಾಂಸ್ಕೃತಿಕಸಂಪತ್ತುಗಳನ್ನು ಕುರಿತು ಮಾನವವಿಜ್ಞಾನ (Anthropology);

ಅವನ ಸಾಂಘಿಕಜೀವನ, ಸಮಷ್ಟಿವ್ಯಾಪಾರಗಳನ್ನು ಕುರಿತು ಸಮಾಜಶಾಸ್ತ್ರ (Sociology); ಅವನ ಪ್ರಾಪಂಚಿಕಸ್ಥಿತಿ, ಅನುಕೂಲ, ಆಹಾರ ಮೊದಲಾದ ವಿವರಗಳನ್ನು ಕುರಿತು ಅರ್ಥಶಾಸ್ತ್ರ (Economics); ಅವನ ರಾಜಕಾರಣವ್ಯವಸ್ಥೆ ಆಡಳಿತನಿರ್ವಹಣೆ, ಸುಭದ್ರತೆ ಮೊದಲಾದ ವಿವರಗಳನ್ನು ಕುರಿತು ರಾಜಕೀಯಶಾಸ್ತ್ರ (Politics) — ಹೀಗೆ ಹಲವಾರು ಶಾಸ್ತ್ರಗಳು ಮನುಷ್ಯನ ವಿವಿಧ ಮುಖಗಳನ್ನು ಅಧ್ಯಯನ ಮಾಡುತ್ತವೆ. ಮನಃಶಾಸ್ತ್ರವು ಈ ಎಲ್ಲ ಶಾಸ್ತ್ರಗಳಿಂದಲೂ ನೆರವನ್ನು ಪಡೆದು, ಈ ಶಾಸ್ತ್ರಗಳ ವ್ಯಾಪ್ತಿಯಲ್ಲಿ ನಿರ್ದಿಷ್ಟವಾಗಿ ಸೇರದ ವೈಯಕ್ತಿಕವರ್ತನೆಯಲ್ಲಿ ಆಸಕ್ತಿ ತಳೆದಿದೆ. ಮಾನವವಿಜ್ಞಾನದ ದೃಷ್ಟಿಯಲ್ಲಿ ಮನುಷ್ಯನೊಬ್ಬ ಜೀವಿ; ದೇಹವಿಜ್ಞಾನದ ಪ್ರಕಾರ ಅವನೊಬ್ಬ ಶರೀರವಷ್ಟೆ; ಸಮಾಜಶಾಸ್ತ್ರದ ದೃಷ್ಟಿಯಲ್ಲಿ ಅವನೊಬ್ಬ ಸಮಾಜಜೀವಿ, ಅರ್ಥಶಾಸ್ತ್ರಜ್ಞರಿಗೆ ಅವನೊಬ್ಬ ಉದ್ಯಮಿ, ಉತ್ಪಾದಕ, ವಿತರಣಶೀಲ, ಅರ್ಥಾರ್ಥಿ; ರಾಜಕೀಯಶಾಸ್ತ್ರದ ಪ್ರಕಾರ ಅವನೊಬ್ಬ ರಾಜಕಾರಣಿ, ಸಂಘಟನಶೀಲ. ಇವೆಲ್ಲವನ್ನೂ ಸಮರ್ಪಕವಾಗಿ ಅರಿಯುವುದಕ್ಕೆ ಮೂಲಭೂತವಾಗಿ ಇರುವ "ಮನುಷ್ಯ ಆಲೋಚಿಸಬಲ್ಲ, ಮಾತನಾಡಬಲ್ಲ, ಕೆಲಸ ಮಾಡಬಲ್ಲ ವ್ಯಕ್ತಿ" ಎನ್ನುವ ತತ್ತ್ವ ಮನಃಶಾಸ್ತ್ರದ ನಿಲುವು. ಮನುಷ್ಯ ಚಿಂತನಾಶೀಲನಾದ, ಮನನಶೀಲನಾದ, ಭಾವುಕನಾದ, ವ್ಯವಹಾರಕುಶಲನಾದ, ನಿರ್ದಿಷ್ಟ ಪ್ರವೃತ್ತಿಗಳನ್ನೊಳಗೊಂಡ ವ್ಯಕ್ತಿ ಎನ್ನುವುದೇ ಈ ಶಾಸ್ತ್ರದ ಮುಖ್ಯಸೂತ್ರ. ಹೀಗೆ ಮೂಲಭೂತವಾದ ನೆಲೆಯಲ್ಲಿ ಮನುಷ್ಯನ ಗುಣ, ಶಕ್ತಿ, ಪ್ರವೃತ್ತಿ, ಮಿತಿ ಮೊದಲಾದವುಗಳನ್ನು ಕುರಿತು ಮನಃಶಾಸ್ತ್ರ ಅಧ್ಯಯನ ನಡೆಸುತ್ತದೆ. ಮನಃಶಾಸ್ತ್ರದ ಈ ಅಧ್ಯಯನದ ಫಲ ಉಳಿದ ಶಾಸ್ತ್ರಗಳಿಗೆ ಪ್ರಯೋಜನಕಾರಿಯಾಗಿ ಪರಿಣಮಿಸಿದೆ.

೩

## ವಿಚಾರದ ವ್ಯಾಪ್ತಿ

ಮನುಷ್ಯನ ವರ್ತನೆಯೇ ಮುಖ್ಯವಸ್ತುವಾಗಿ ಉಳ್ಳ ಮನಃಶಾಸ್ತ್ರವು ಮನುಷ್ಯನೊಬ್ಬ ಜೀವಿ, ಪ್ರಾಣಿ ಎನ್ನುವುದನ್ನು ಮರೆಯುವ ಹಾಗಿಲ್ಲ. ಉಳಿದ ಪ್ರಾಣಿಕೋಟಿಯಲ್ಲಿ ಕಾಣಬರುವ ಜೀವನತತ್ತ್ವ ಮನುಷ್ಯನಲ್ಲಿಯೂ ಕಾಣಬರುತ್ತದೆ. ಉಳಿದ ಪ್ರಾಣಿಗಳಂತೆಯೇ ಮನುಷ್ಯನೂ ಬೆಳೆಯುತ್ತಾನೆ, ಹೊಸಹೊಸಪ್ರವೃತ್ತಿಗಳನ್ನೂ ಸಾಮರ್ಥ್ಯಗಳನ್ನೂ ಪಡೆಯುತ್ತಾನೆ, ಆಹಾರವನ್ನು ಅರಗಿಸಿಕೊಂಡು ಅಜೀರ್ಣವಾದುದನ್ನು ಹೊರಗೆ ಹಾಕುತ್ತಾನೆ, ಶತ್ರುಬಾಧೆಯಿಂದ ಪಾರಾಗಿ ಉಳಿಯಲು ಹೋರಾಡುತ್ತಾನೆ, ತನ್ನ ಸಂತಾನವನ್ನು ಬೆಳೆಸುತ್ತಾನೆ, ತನ್ನ ವರ್ಗಕ್ಕೇ ಸೇರಿದ ಉಳಿದ ಪ್ರಾಣಿಗಳೊಂದಿಗೆ ಬಾಳಬಯಸುತ್ತಾನೆ. ಉಳಿದ ಪ್ರಾಣಿಗಳಂತೆಯೇ ಇವನಿಗೂ ಈ ಎಲ್ಲ ಕೆಲಸಗಳಿಗೂ ನೆರವಾಗುವಂತೆ ಶರೀರಸೌಲಭ್ಯವಿದೆ. ಶರೀರರಚನೆಯಲ್ಲಿಯೂ, ಪ್ರವೃತ್ತಿಗಳಲ್ಲಿಯೂ ಬಹುಮಟ್ಟಿಗೆ ಸಾಮ್ಯವಿದೆ, ಮನುಷ್ಯನ ಸ್ವಭಾವ, ಸಾಮರ್ಥ್ಯಗಳನ್ನು ತಿಳಿಯಲು

ಅವನು ಮೂಲತಃ ಜೀವಿ ಎನ್ನುವುದನ್ನು ಕಂಡುಕೊಳ್ಳಬೇಕು. ಮನಃಶಾಸ್ತ್ರವು ಪ್ರಾಣಿಶಾಸ್ತ್ರಗಳಲ್ಲಿ ಒಂದು ( biological science ). ಮನುಷ್ಯನು ಜೀವಿ, ತನ್ನ ಜೀವನ ನಿರ್ವಹಣೆಗೆ ಅಗತ್ಯವಾದ ಪ್ರಚೋದನೆ-ಪ್ರತಿಕ್ರಿಯೆ (stimulus-response) ಗಳನ್ನು ಅಳವಡಿಸಿಕೊಳ್ಳುತ್ತಾನೆ, ಮಾರ್ಪಡಿಸಿಕೊಳ್ಳುತ್ತಾನೆ ಎನ್ನುವ ತತ್ತ್ವವೇ ಈ ಶಾಸ್ತ್ರಕ್ಕೆ ಆಧಾರ. ಅವನ ಪ್ರವೃತ್ತಿಗಳನ್ನೂ, ಪ್ರಯೋಜನ ( purpose )ಗಳನ್ನೂ, ವ್ಯವಸ್ಥೆ - ವಿನ್ಯಾಸ ( organisation ) ಗಳನ್ನೂ, ವ್ಯಕ್ತಿವಿಕಾಸವನ್ನೂ ಇಲ್ಲಿ ಅಧ್ಯಯನ ಮಾಡುತ್ತೇವೆ. ನಮ್ಮ ಸುತ್ತ ಇರುವ ಆವರಣದಿಂದ ನಾವು ಹೇಗೆ ಉತ್ತೇಜಿತರಾಗುತ್ತೇವೆ, ಪ್ರಚೋದಿತರಾಗುತ್ತೇವೆ ಎನ್ನುವುದೂ, ಈ ಪ್ರಚೋದನೆಗೆ ತಕ್ಕಂತೆ ಹೇಗೆ ಪ್ರತಿಕ್ರಿಯೆಗಳನ್ನು ಮಾಡುತ್ತೇವೆ ಎನ್ನುವುದೂ ಇಲ್ಲಿ ಮುಖ್ಯವಿಷಯ. ಈ ಪ್ರಚೋದನೆ, ಪ್ರತಿಕ್ರಿಯೆಗಳ ನಡುವೆ ಇರುವ ಸಂಬಂಧವೇ ವರ್ತನೆ ಎನಿಸಿಕೊಳ್ಳುತ್ತದೆ.

ಆದರೆ ಮನಃಶಾಸ್ತ್ರವು ಪ್ರಾಣಿಶಾಸ್ತ್ರವೊಂದರಲ್ಲೇ ಮುಗಿಯುವುದಿಲ್ಲ. ಇತರ ಪ್ರಾಣಿಗಳಂತೆ ಮನುಷ್ಯನಲ್ಲೂ ಮೂಲಭೂತಪ್ರವೃತ್ತಿಗಳು ದೇಹಗತವಾಗಿದ್ದರೂ ಅವನ ಸಂಘಜೀವನ ಇವನ್ನು ಮಾರ್ಪಡಿಸುತ್ತವೆ. ಸಮಾಜಕ್ಕೆ ಸೇರಿದಂತೆ ಅವನು ಬದುಕುವಾಗ ಸಮಾಜದ ನೀತಿ-ನಿಯಮಗಳನ್ನೂ, ರೀತಿ-ರಂಗುಗಳನ್ನೂ ಅನುಕರಿಸಬೇಕಾಗುತ್ತದೆ; ನಾಲ್ಕು ಜನ ಇರುವಂತೆ ತಾನೂ ಇರಬೇಕಾಗುತ್ತದೆ; ತನ್ನ ಸ್ವಾರ್ಥವನ್ನು ಬದಿಗಿರಿಸಿ ಸಮಾಜದ ಹಿತಕ್ಕೆ ಶ್ರಮಿಸಬೇಕಾಗುತ್ತದೆ. ವ್ಯಕ್ತಿಯು ಸಮಾಜಕ್ಕೆ ಹೊಂದಿಕೊಂಡು ನಡೆಯುವಾಗ ಅವನ ಪ್ರವೃತ್ತಿಗಳೂ, ಸ್ವಭಾವವೂ ಬದಲಾಗುವುದು ಸಹಜವೇ. ಮನುಷ್ಯನಲ್ಲಿ ಸಾಮಾಜಿಕಪ್ರಜ್ಞೆ ಸ್ವಭಾವಸಿದ್ಧವಾಗಿಯೇ ಒದಗುತ್ತದೆ. ಇದು ಪ್ರಾಣಿಶಾಸ್ತ್ರದ ವ್ಯಾಪ್ತಿಯನ್ನು ಮೀರಿದ ವಿಷಯ. ಇತರರಿಂದ ತನ್ನ ವರ್ತನೆ ಮಾರ್ಪಡುವುದೂ, ತನ್ನ ವರ್ತನೆಯಿಂದ ಇತರರು ಮಾರ್ಪಡುವುದೂ ಪ್ರಾಣಿಶಾಸ್ತ್ರದಲ್ಲಿ ವಿಚಾರಮಾಡುವ ವಿವರಗಳಲ್ಲ. ವ್ಯಕ್ತಿ-ಸಮಾಜಗಳ ಅನ್ಯೋನ್ಯಾಶ್ರಯಸಂಬಂಧ ಮನಃಶಾಸ್ತ್ರದಲ್ಲಿ ಎದ್ದು ಕಾಣುವ ವಿವರ. ಹುಟ್ಟಿದ ಮಗು ಸಮಾಜದ ಪ್ರಭಾವಕ್ಕೆ ಒಳಪಡದಿದ್ದರೆ ಏನನ್ನು ಕಲಿಯುವುದೂ ಸಾಧ್ಯವಿಲ್ಲ : ಭಾಷೆ, ಸಂಸ್ಕೃತಿ, ಉದ್ಯಮ, ಕಲೆ ಎಲ್ಲವೂ ಸಂಘಜೀವನದಿಂದ ಎದ್ದು ಬಂದ ವಿವರಗಳೇ, ಅವುಗಳ ಪ್ರಯೋಜನವೆಲ್ಲ ಸಾಂಘಿಕವೇ. ಹೀಗೆ ಮನಃಶಾಸ್ತ್ರವು ಪ್ರಾಣಿಶಾಸ್ತ್ರವನ್ನೂ ಸಮಾಜಶಾಸ್ತ್ರವನ್ನೂ ಹಿತಮಿತವಾಗಿ ಸಮನ್ವಯಮಾಡಿ 'ಸಮಾಜವಿಶಿಷ್ಟಜೀವ'ವಾದ ( biosocial ) ವ್ಯಕ್ತಿಯನ್ನು ತನ್ನ ಅಧ್ಯಯನ ವ್ಯಾಪ್ತಿಯಲ್ಲಿ ಕೇಂದ್ರೀಕರಿಸಿಕೊಂಡಿದೆ.

ಮನಃಶಾಸ್ತ್ರವು ಸ್ಪಷ್ಟವಾಗಿ ಮೈದಳೆಯುವ ಕಾಲಕ್ಕೆ ಪ್ರಾಣಿಶಾಸ್ತ್ರವು ವಿಕಾಸವಾದವನ್ನು ಸಿದ್ಧಾಂತವೆಂದು ಪರಿಗಣಿಸಿದ್ದಿತು. ಜೀವಜಗತ್ತಿನಲ್ಲಿ ಅನುಕ್ರಮಣಿಕ ವಿಕಾಸದಿಂದಲೇ ಜೀವಿಗಳು ವಿವಿಧವಾದುವು, ವಿಪುಲವಾದವು, ಅವುಗಳಲ್ಲಿ

ಉತ್ತರೋತ್ತರ ಪ್ರಗತಿಯಾಯಿತು. ಆವರಣದೊಂದಿಗೆ ಹಗರಣ, ಬದುಕಬೇಕೆಂಬ ಬಯಕೆ, ಸಮರ್ಥನಾದವನ ಉಳಿವು ಇವು ವಿಕಾಸತತ್ತ್ವಗಳೆಂದು ಪ್ರಸಿದ್ಧವಾಗಿವೆ. ಈ ತತ್ತ್ವಗಳನ್ನು ಮನಃಶಾಸ್ತ್ರವು ಒಪ್ಪಿಕೊಂಡಿತಲ್ಲದೆ, ತನ್ನ ವಸ್ತುವಿನಲ್ಲಿಯೂ ಇವನ್ನು ಬಳಸಿಕೊಂಡಿತು. ವ್ಯಕ್ತಿವಿಕಾಸದಲ್ಲಿಯೂ ಇದೇ ಲಕ್ಷಣಗಳನ್ನು ಕಾಣಬಹುದಲ್ಲವೆ? ವ್ಯಕ್ತಿಯೂ ಅನುಕ್ರಮವಾಗಿ, ಉತ್ತರೋತ್ತರವಾಗಿ ವಿಕಾಸಗೊಳ್ಳುವ ಪ್ರಾಣಿಯೇ, ಹುಟ್ಟಿದ ಮಗು ಬೆಳೆದು, ಪ್ರೌಢವಾಗಿ, ಕಡೆಗೆ ವೃದ್ಧವಾಗಿ ತೀರಿಕೊಳ್ಳುವವರೆಗೂ ಅದು ಅನುಕ್ರಮವಿಪರ್ಯಾಯವೇ. ಪ್ರಾಣಿಶಾಸ್ತ್ರದ ನಿಯಮಗಳನ್ನು ಇಲ್ಲಿ ಅನುಸಂಧಾನಮಾಡಿದಾಗ ಶಿಶುಮನಃಶಾಸ್ತ್ರ (Child Psychology) ಕವಲೊಡೆಯಿತು. ಈ ಉಪಶಾಸ್ತ್ರದಲ್ಲಿ ಅನುಕ್ರಮವಾದ ಬೆಳವಣಿಗೆ ಮುಖ್ಯವಾದ ವಿಚಾರ. ಪ್ರಾಣಿಶಾಸ್ತ್ರದಿಂದ ನೇರವಾಗಿ ಮನಃಶಾಸ್ತ್ರಕ್ಕೆ ದೊರೆತ ವಿಚಾರಧಾರೆಯಿದು. ೧೮೭೭ ರಷ್ಟು ಹಿಂದೆಯೇ ಸುಪ್ರಸಿದ್ಧ ಪ್ರಾಣಿಶಾಸ್ತ್ರಜ್ಞನಾದ ಚಾರ್ಲಸ್ ಡಾರ್ವಿನ್ ಶಿಶುಗಳು ಬೆಳೆಯುವ ಬಗ್ಗೆ ಬರೆದು ಪ್ರಕಟಿಸಿದ್ದನು. ೧೮೮೨ ರ ಸುಮಾರಿಗೆ ಪ್ರೇಯರ್ ಎಂಬಾತ 'ಮಗುವಿನ ಮನಸ್ಸು' ಎನ್ನುವ ಪ್ರಬಂಧವನ್ನು ಪ್ರಕಟಿಸಿ ಈ ಉಪಶಾಸ್ತ್ರವನ್ನು ಎತ್ತಿ ನಿಲ್ಲಿಸಿದನು. ಈಗ ಇದು ದೃಢವಾಗಿ ನಿಂತಿದೆ, ವಿಪುಲವಾಗಿ ಬೆಳೆದಿದೆ. ಮಗುವಿನ ಸಾಮರ್ಥ್ಯವೇನು, ದೈಹಿಕಶಕ್ತಿಗಳೂ ಮತ್ತು ಮಾನಸಿಕ ಶಕ್ತಿಗಳೂ ಹೇಗೆ ಒದಗುತ್ತವೆ, ಮೂಲಪ್ರವೃತ್ತಿಗಳು ಮಾರ್ಪಡುವುದು ಹೇಗೆ, ಬೆಳವಣಿಗೆಯ ದಾರಿಯಾವುದು, ಸಮಸ್ಯೆಗಳೇನು, ಬುದ್ಧಿಶಕ್ತಿ ಎಂದರೇನು, ಶಾಲೆಯ ಪಾತ್ರ ಏನು, ತಾರುಣ್ಯದಲ್ಲಿ ನಡೆಯುವ ಕೋಲಾಹಲಕ್ಕೆ ಕಾರಣವೇನು ಇವೆಲ್ಲ ಶಿಶುಮನಃಶಾಸ್ತ್ರದ ವ್ಯಾಪ್ತಿಯಲ್ಲಿ ಬರುವ ಪ್ರಶ್ನೆಗಳು.

ಇದಕ್ಕೆ ಹೊಂದಿಕೊಂಡಂತೆ ಉಳಿದ ಪ್ರಾಣಿಗಳ ಅಧ್ಯಯನವೂ ಮನುಷ್ಯನ ಸ್ವಭಾವ-ಸಾಮರ್ಥ್ಯಗಳನ್ನೂ ಗುಣಾವಗುಣಗಳನ್ನೂ ಅರಿತುಕೊಳ್ಳಲು ನೆರವಾಗುತ್ತದೆ. ತುಲನಾತ್ಮಕವಾದ ಅಭ್ಯಾಸ ಇಲ್ಲಿನ ವಿಶೇಷ. ಕಪಿಗಳ ವರ್ತನೆ ಮನುಷ್ಯಸ್ವಭಾವದ ಮೇಲೆ ಬೇಕಾದಷ್ಟು ಬೆಳಕು ಚೆಲ್ಲಿದೆ. ಕಾಲಮಾನದಲ್ಲಿ ಮನುಷ್ಯ ಕಪಿಯಿಂದ ತುಂಬ ದೂರವೇನಲ್ಲ. ದೂರವಾಗಿರುವ ನಾಯಿ, ಬೆಕ್ಕು, ಇಲಿ ಮೊದಲಾದ ಪ್ರಾಣಿಗಳ ಅಧ್ಯಯನವೂ ಮನಃಶಾಸ್ತ್ರಕ್ಕೆ ಬೇಕಾದಷ್ಟು ಸಾಮಗ್ರಿಯನ್ನು ಒದಗಿಸಿದೆ. ನಿರ್ದಿಷ್ಟವಾಗಿ, ಮನುಷ್ಯನ ಪ್ರವೃತ್ತಿ (motivation) ಯನ್ನೂ ಅರ್ಥಮಾಡಿಕೊಳ್ಳಲು ಈ ಅಧ್ಯಯನ ಸಹಾಯಮಾಡಿದೆ. ಮೆಕ್‌ಡೂಗಲ್ ಮೊದಲಾದವರು ಪ್ರತಿಪಾದಿಸಿದ ಸಹಜಪ್ರವೃತ್ತಿ (instinct) ವಾದವೂ ಈ ನೆಲೆಯಲ್ಲಿಯೇ ರೂಪ ತಳೆಯಿತು. ಪ್ರವರ್ತನೆ, ಅಂತಃಪ್ರೇರಣೆ; ಅಂತರವ್ಯಾಪಾರ, ಕ್ರಿಯಾವಿಶಿಷ್ಟವ್ಯವಹಾರ ಮೊದಲಾದ ವಿವರಗಳೆಲ್ಲ ಇಲ್ಲಿ ಜಿಜ್ಞಾಸೆಗೆ ಬರುತ್ತವೆ. ಪ್ರೌಢನಾದ ಮನುಷ್ಯ ಆದುದು ಹೇಗೆ ಎನ್ನುವುದು ಶಿಶುಮನಃಶಾಸ್ತ್ರದ ಸಮಸ್ಯೆಯಾದರೆ, ಮೃಗಗಳಿಗೂ ಮನುಷ್ಯನಿಗೂ

ಮಾನಸಿಕವಾಗಿ ಇರುವ ಸಂಬಂಧ ಎಷ್ಟರಮಟ್ಟಿನದು, ಎಂಥದು ಎನ್ನುವುದು ಈ ತುಲನಾತ್ಮಕ ( comparative ) ಅಧ್ಯಯನದ ಉದ್ದೇಶ.

ಮಕ್ಕಳನ್ನೂ ಮೃಗಗಳನ್ನೂ ಅಧ್ಯಯನಮಾಡಿದುದರ ಫಲವಾಗಿ ಬುದ್ಧಿಶಕ್ತಿ ಅಥವಾ ಬುದ್ಧಿಚಾತುರ್ಯದ ವಿಚಾರ ಸ್ಪಷ್ಟವಾಯಿತು. ಯಾವುದೇ ಸಂದರ್ಭದಲ್ಲಿ ಯಶಸ್ವಿಯಾಗಿ ನಿರ್ವಹಣಮಾಡಲು ತಕ್ಕಷ್ಟು ಬುದ್ಧಿಶಕ್ತಿ ಇರಬೇಕು ; ಬೆಪ್ಪನೂ, ತಿಳಿಗೇಡಿಯೂ, ಯಾವ ಕೆಲಸವನ್ನೂ ಸಮರ್ಪಕವಾಗಿ ಮಾಡಲಾರರಷ್ಟೆ. ಈ ಬುದ್ಧಿಶಕ್ತಿ ಎನ್ನುವುದು ಏನು ? ಅದು ಯಾವುದನ್ನು ಅವಲಂಬಿಸಿರುತ್ತದೆ ? ಎಲ್ಲ ಮನುಷ್ಯರಲ್ಲಿಯೂ ಸಮವಾಗಿ ಇರುವುದೋ ಹೇಗೆ ? ವೈಯಕ್ತಿಕ ವೈವಿಧ್ಯ ( individual difference ) ಕ್ಕೆ ಏನು ಕಾರಣ ? ಅದು ಯಾವಜ್ಜೀವವೂ ಒಂದೇ ಪ್ರಮಾಣವಲ್ಲಿ ಇರುವುದೋ ಅಥವಾ ಚಿಕ್ಕಂದಿನಲ್ಲಿ ಬೆಳೆಯುತ್ತ ಬಂದು ತಾರುಣ್ಯದಲ್ಲಿ ತಟಸ್ಥವಾಗುವುದೋ ? ಈ ಬುದ್ಧಿಶಕ್ತಿಯ ಸ್ವರೂಪವೇನು ? ಅದರ ವಿವರಗಳೇನು ? ಇವೇ ಮೊದಲಾದ ಸಮಸ್ಯೆಗಳನ್ನು ಪರಿಹರಿಸಲು ಮನಃಶಾಸ್ತ್ರ ಯತ್ನಿಸಿದೆ. ಈ ಜಿಜ್ಞಾಸೆಯ ಪ್ರಭಾವದಿಂದ ಹಲವಾರು ಬುದ್ಧಿಮಾಪಕ ಪಟ್ಟಿಕೆಗಳೂ ಪರೀಕ್ಷೆಗಳೂ ಸಿದ್ಧವಾದುವು. ಶಾಲೆಯಲ್ಲಿ ಮಕ್ಕಳನ್ನು ವರ್ಗಮಾಡಲು, ಅಭ್ಯರ್ಥಿಗಳನ್ನು ಆಯ್ಕೆಮಾಡಲು, ಉದ್ಯಮದಲ್ಲಿ, ಸೇನೆಯಲ್ಲಿ, ಈ ಪರೀಕ್ಷೆಗಳು ಇಂದಿಗೂ ಬಳಕೆಯಲ್ಲಿವೆ. ಮನಃಶಾಸ್ತ್ರದ ಜನಪ್ರಿಯ ವಿಚಾರಗಳಲ್ಲಿ ಬುದ್ಧಿಶಕ್ತಿಯ ಪರೀಕ್ಷೆ ಒಂದು.

ಇಲ್ಲಿ ವಿಚಾರಕ್ಕೆ ಬರುವ ಮೂಲ ಪ್ರವೃತ್ತಿಗಳು, ಸಹಜ ಸಾಮರ್ಥ್ಯ, ಅಭಿರುಚಿ, ಯೋಗ್ಯತೆ ಇವುಗಳ ಅಧ್ಯಯನದಿಂದ ಮತ್ತೊಂದು ಉಪಶಾಸ್ತ್ರ ತಲೆಯೆತ್ತಿ ನಿಂತಿತು. ಅದು ಶೈಕ್ಷಣಿಕಮನಃಶಾಸ್ತ್ರ ( Educational Psychology ). ಬುದ್ಧಿ ಶಕ್ತಿಯಿದ್ದ ಮಾತ್ರಕ್ಕೇ ಮಗು ತಾನಾಗಿ ಬೆಳೆದು ವ್ಯವಹಾರ ಕುಶಲವಾಗುವುದಿಲ್ಲ; ಕಲಿಕೆಯ ಅಗತ್ಯವಿದೆಯಷ್ಟೆ. ಹೊಸ ಕೌಶಲಗಳನ್ನು ಕಲಿಯುವುದು, ಸ್ಮೃತಿಯನ್ನು ಬಳಸಿಕೊಳ್ಳುವುದು, ಜನ್ಮಸಿದ್ಧವಾದ ಕರ್ಮಾನುಸಾರಿಣಿಯಾದ ಬುದ್ಧಿಯನ್ನೂ ಅಭ್ಯಾಸಾನುಸಾರಿಣಿಯಾದ ವಿದ್ಯೆಯನ್ನೂ ಒಟ್ಟುಗೂಡಿಸುವುದು, ಶಾಲಾವ್ಯವಸ್ಥೆಯಲ್ಲಿ ಮಾನಸಿಕ ಸೌಲಭ್ಯಗಳು ಆತಂಕಗಳು, ವಿದ್ಯಾರ್ಜನೆಯ ಸಂವಿಧಾನ, ವಿದ್ಯಾರ್ಥಿಗಳಲ್ಲಿ ವೈಯಕ್ತಿಕ ವೈವಿಧ್ಯ ಇವೇ ಮೊದಲಾದ ಸಮಸ್ಯೆಗಳು ಇಲ್ಲಿ ವಿವರಣೆಗೂ ಪರಿಹಾರಕ್ಕೂ ಬರುತ್ತವೆ. ಶಿಕ್ಷಣವೆನ್ನುವುದು ಸಹಜ ವ್ಯಾಪಾರವೇ . ತಾಯಿ ಮಗುವನ್ನು ತಿದ್ದಿ ಬೆಳೆಸುವುದಿಲ್ಲವೆ ? ಅನುಭವದಿಂದ ನಮ್ಮ ಚಾತುರ್ಯ ಹೆಚ್ಚುವುದಿಲ್ಲವೆ ? ಪ್ರತ್ಯಕ್ಷವೋ ಪರೋಕ್ಷವೋ, ಶಿಕ್ಷಣದಿಂದಲೇ ವ್ಯಕ್ತಿಯು ವಿಕಾಸವನ್ನು ಹೊಂದುವುದು. ಶಾಲಾ ಶಿಕ್ಷಕರಿಗೆ ತುಂಬ ಉಪಯುಕ್ತವಾದ ವಿಚಾರ ಇದು.

ವ್ಯಕ್ತಿಯು ಉದ್ಯಮದಂಥ, ಕಾರ್ಖಾನೆಯಂಥ ಸಂಸ್ಥೆಯಲ್ಲಿ ಜೀವನೋಪಾಯ ಕ್ಕೆಂದು ಸೇರಿದಾಗ ಅವನಿಂದ ಸಂಸ್ಥೆಗೂ, ಸಂಸ್ಥೆಯಿಂದ ಅವನಿಗೂ ಸಂಬಂಧ

ಏರ್ಪಡುತ್ತದೆ. ನಾಲ್ಕು ಜನರೊಂದಿಗೆ ಕೆಲಸಮಾಡುವಾಗ ವ್ಯಕ್ತಿಯ ಸ್ವಭಾವವೇ ಮಾರ್ಪಡುತ್ತದೆ ; ಯಂತ್ರಗಳ ಸಾನ್ನಿಧ್ಯವೇ ಅನವರತವೂ ಅವನಿಗಿದ್ದರೆ ಅದರಿಂದಲೂ ಅವನು ಪ್ರಭಾವಿತನಾಗುತ್ತಾನೆ. ಹಿಡಿದ ಕೆಲಸವನ್ನು ನಿರ್ವಹಿಸಬೇಕೆಂದರೆ ಬುದ್ಧಿಶಕ್ತಿ ಬೇಕು, ಅನುಕೂಲವಾದ ಮನೋವೃತ್ತಿ ಬೇಕು, ನೆರವಾಗುವಂಥ ಸನ್ನಿವೇಶ ಬೇಕು, ಆಸಕ್ತಿಯಿರಬೇಕು, ಅಭಿರುಚಿಯಿರಬೇಕು. ನೂರಾರು ಮಂದಿ ಒಟ್ಟಾರೆ ಕೆಲಸ ಮಾಡುವಾಗ ಪ್ರತಿ ವ್ಯಕ್ತಿಯ ಸ್ವಭಾವಕ್ಕಿಂತ ಹೆಚ್ಚಾಗಿ ಗುಂಪಿನ ಸ್ವಭಾವ ಬಯಲಾಗುತ್ತದೆ. ದೊಂಬಿಯಲ್ಲಿ ಸೇರಿದ ವ್ಯಕ್ತಿ ಸಂಭಾವಿತನಂತೆ ವರ್ತಿಸುವುದು ಕಷ್ಟವೆಂದು ಸಾಂಘಿಕ ಮನಃಶಾಸ್ತ್ರಜ್ಞರಿಗೆ ತಿಳಿದ ವಿಚಾರವೇ ; ದೊಂಬಿ ವರ್ತನೆ ( Crowd Behaviour ) ಯ ರೀತಿನೀತಿಗಳೇ ಬೇರೆ. ಆದರೆ ಕಾರ್ಮಿಕರು ಸುವ್ಯವಸ್ಥಿತರಾದ ಗುಂಪು ; ಈ ಗುಂಪಿನ ನೀತಿನಿಯಮಗಳಲ್ಲಿ ಕೂಡ ಮನಃಶಾಸ್ತ್ರದ ವಿವರಗಳು ಸೇರಿಬರುತ್ತವೆ. ಕಾರ್ಮಿಕರಿಗೂ ಯಜಮಾನರಿಗೂ ಸಹಜವಾಗಿ ಇರುವ ಸಂಬಂಧ, ಕಾರ್ಮಿಕರ ನೆಮ್ಮದಿ ತಪ್ಪುವುದು, ಕಾರ್ಯಕೌಶಲ, ಕೆಲಸಗಾರರನ್ನು ಆರಿಸಿ ಕೊಳ್ಳುವಾಗ ಗಮನಿಸಬೇಕಾದ ಅಂಶಗಳು, ಕಲಿಯುವ ಸಮಯದ ಸಮಸ್ಯೆಗಳು, ಕೆಲಸದಿಂದ ಒದಗುವ ಆಯಾಸ-ಬೇಸರ, ಯಾಂತ್ರಿಕ ಕೆಲಸದ ಒತ್ತಡದಿಂದ ವ್ಯಕ್ತಿತ್ವಕ್ಕೆ ಉಂಟಾಗಬಹುದಾದ ಅಪಘಾತ, ಈ ಮೊದಲಾದ ಪ್ರಶ್ನೆಗಳನ್ನು ಮನಃಶಾಸ್ತ್ರವು ಬಿಡಿಸಲೆತ್ನಿಸುವಾಗ ಔದ್ಯಮಿಕ ಮನಃಶಾಸ್ತ್ರ ( Industrial Psychology ) ಮೈದಳೆಯುತ್ತದೆ. ಇದಕ್ಕೆ ಹೊಂದಿಕೊಂಡಂತೆ ಕೆಲಸದ ಅಗತ್ಯಗಳು, ಕೆಲಸಗಾರನ ಸಾಮರ್ಥ್ಯ-ಅಭಿರುಚಿಗಳು ಇವುಗಳ ನಡುವೆ ಇರುವ ಸಂಬಂಧವನ್ನು ಔದ್ಯೋಗಿಕ ಮನಃಶಾಸ್ತ್ರ ( Occupational Psychology ) ಚರ್ಚಿಸುತ್ತದೆ. ಯಾವ ಕೆಲಸಕ್ಕೆ ಎಂಥ ವ್ಯಕ್ತಿ ಸರಿಯಾದಾನು ಎಂದು ನಿರ್ಧರಿಸುವುದು ತುಂಬ ಅವಶ್ಯವಾದ, ಹಾಗೂ ಕಷ್ಟವಾದ ವಿಚಾರ. ಕಾರ್ಖಾನೆಗಳಲ್ಲಿ ಮಾತ್ರವಲ್ಲದೆ, ಸೇನೆಯಲ್ಲಿಯೂ ( ಯುದ್ಧ ಕ್ರಿಯೆಗಳಿಗೆ ಅನುಕೂಲವಾದ ವ್ಯಕ್ತಿತ್ವ ಎಲ್ಲರಿಗೂ ಇಲ್ಲದೆ ಇರುವುದರಿಂದ ) ಇಂಥ ನಿರ್ಧಾರದ ಅಗತ್ಯವಿದೆ. ಶಾಲಾಮಾಸ್ತರರನ್ನು ನೇಮಿಸಿಕೊಳ್ಳುವಾಗಲೂ, ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವ ವಿದ್ಯಾವಿಭಾಗಗಳನ್ನು ಸೂಚಿಸುವಾಗಲೂ, ಸಂಗೀತ-ಸಾಹಿತ್ಯ, ಕೈಕೆಲಸ-ಯಾಂತ್ರಿಕ ಕರ್ಮ ಇವುಗಳಲ್ಲಿ ಜನರಿಗೆ ಇರಬಹುದಾದ ಸಾಮರ್ಥ್ಯವನ್ನು ಅಳೆಯುವಾಗಲೂ ಮನಃಶಾಸ್ತ್ರವು ಉಪಯೋಗಕ್ಕೆ ಬರುತ್ತದೆ.

ದೈಹಿಕ ಆರೋಗ್ಯ ಕೆಲವೊಮ್ಮೆ ಕೆಡುವಂತೆ ಮಾನಸಿಕ ಆರೋಗ್ಯವೂ ಕೆಡುವುದುಂಟು. ಕೆಲವು ಜನ ಅಸಾಧಾರಣವಾಗಿ ವರ್ತಿಸುವುದನ್ನು ಕಂಡಿದ್ದೇವಷ್ಟೆ. 'ಹುಚ್ಚು', 'ಉನ್ಮಾದ', 'ಭ್ರಾಂತಿ' ಎಂದು ನಿರ್ದಿಷ್ಟವಾಗಿ ಹೇಳುವುದು ಆಗದಿದ್ದರೂ ಸ್ವಲ್ಪ ವಿರುಪೇರು, ಐಲುಪೈಲು, ವಿಚಿತ್ರ ಎನಿಸಿಕೊಳ್ಳುವ ಮಂದಿ ಜಗತ್ತಿನ ತುಂಬ ಇದ್ದಾರೆ. ಎಲ್ಲರೂ ಸಮನಾಗಿರಲಾರರು ; ಪ್ರತಿ ವ್ಯಕ್ತಿಯೂ ಒಂದು ನಮೂನೆಯೇ ; ಒಬ್ಬರ ಹಾಗೆಯೇ ಇನ್ನೊಬ್ಬರೂ ಇರುವುದು ಸಾಧ್ಯವಿಲ್ಲ. ವ್ಯಕ್ತಿ ವೈಶಿಷ್ಟ್ಯಗಳನ್ನೂ

ವ್ಯಕ್ತಿಗಳ ನಡುವೆ ಇರುವ ವೈವಿಧ್ಯವನ್ನೂ ವ್ಯಕ್ತಿಮನಃಶಾಸ್ತ್ರವು (Individual Psychology) ಅಧ್ಯಯನ ಮಾಡುತ್ತದೆ. ಈ ವೈಶಿಷ್ಟ್ಯ – ವೈವಿಧ್ಯಗಳು ವಿಪರೀತವಾಗಿ ನೆಮ್ಮದಿಯಿಂದ ಬಾಳುವುದೂ ಇತರರೊಂದಿಗೆ ಹೊಂದಿಕೊಂಡು ಹೋಗುವುದೂ ಕಷ್ಟವಾದಾಗ ಮಾನಸಿಕ ಆರೋಗ್ಯ ತಪ್ಪಿತು ಎಂದರ್ಥ. ದೈಹಿಕರೋಗಕ್ಕೆ ಕಾರಣವಿರುವಂತೆಯೇ ವೈದ್ಯವಿರುವಂತೆಯೇ, ಮಾನಸಿಕರೋಗಕ್ಕೂ ಕಾರಣವಿರುತ್ತದೆ, ವೈದ್ಯವಿರುತ್ತದೆ. ಇವನ್ನೆಲ್ಲ ಕೂಲಂಕಷವಾಗಿ ಪರಿಶೀಲಿಸಲು, ಅಭ್ಯಾಸಮಾಡಲು ಹೊರಟಿರುವ ಮನಃಶಾಸ್ತ್ರದ ಭಾಗಕ್ಕೆ ಅತಿರೇಕ ಮನಃಶಾಸ್ತ್ರ (Abnormal Psychology) ಎಂದು ಹೆಸರು. ಮಾನಸಿಕಸ್ವಾಸ್ಥ್ಯಕ್ಕೆ ಅಗತ್ಯವಾದ ತತ್ತ್ವಗಳನ್ನು ನಿರೂಪಿಸುವುದು ಈ ಭಾಗದ ಮುಖ್ಯ ಉದ್ದೇಶ. ಚಿಕಿತ್ಸೆಯೇ ಪ್ರಧಾನವಾಗಿ ಉಳ್ಳ ಭಾಗವು ವೈದ್ಯಕೀಯ ಮನಃಶಾಸ್ತ್ರ (Medical Psychology) ಎನಿಸಿಕೊಳ್ಳುತ್ತದೆ.

೪

## ಸ್ವಾರಸ್ಯ

ಹೀಗೆ ಮನಃಶಾಸ್ತ್ರದ ವ್ಯಾಪ್ತಿಯಲ್ಲಿ ಮಾನವವ್ಯಾಪಾರದ ನಾನಾ ಮುಖಗಳು ಸೇರಿಕೊಂಡಿವೆ. ಮನುಷ್ಯ ಮಾಡುವ ಎಲ್ಲ ಕೆಲಸಕ್ಕೂ ಆಂತರ ಪ್ರಯೋಜನವಿದ್ದೇ ಇದೆ ಎನ್ನುವ ಸೂತ್ರವನ್ನು ಒಪ್ಪಿಕೊಂಡರೆ ಮನಃಶಾಸ್ತ್ರದ ಹರವು ಸ್ಪಷ್ಟವಾಗುತ್ತದೆ. ಬೌದ್ಧರ 'ಧರ್ಮಪದ'ದಲ್ಲಿ ಮೊದಲನೆಯ ಗಾಥೆಯೇ 'ಎಲ್ಲ ಸಂಗತಿಗಳೂ ಮನಸ್ಸನ್ನೇ ಮುಂದೆ ಮಾಡಿಕೊಂಡು ನಡೆಯುತ್ತವೆ' (ಮನೋಪುಬ್ಬಂಗಮಾ ಧಮ್ಮಾ) ಎಂದು ಹೇಳುತ್ತದೆ. ಪ್ರಾಣಿಕೋಟಿಯಲ್ಲಿ ಮಾನವನ ಮೇಲ್ಮೆ ಮನಸ್ಸಿನಿಂದಲೇ ಅದುದು. ನೀಚವರ್ಗದ ಜಂತುಗಳಲ್ಲೇ ಆರಂಭವಾದ ಮಿದುಳೂ ನರವ್ಯವಸ್ಥೆಯೂ ಕ್ರಮಕ್ರಮವಾಗಿ ಬೆಳೆಯುತ್ತ ಬಂದು ಮನುಷ್ಯನಲ್ಲಿ ಪ್ರೌಢವಾಗಿವೆ. ಉಳಿದೆಲ್ಲ ದೈಹಿಕವಿವರಗಳನ್ನೂ ಕ್ರಿಯೆಗಳನ್ನೂ ಅತಿಕ್ರಮಿಸಿ ಮನಸ್ಸು ನಿಂತಿದೆ. ಈ ಕಾರಣದಿಂದ, ಮನುಷ್ಯ ಜಗತ್ತಿನಲ್ಲಿ ಬಾಳಲು ಮನಸ್ಸೇ ಮುಖ್ಯವಾದುದು. ಅವನ ವಿಶಿಷ್ಟ ವ್ಯವಹಾರವೂ ಮಾನಸಿಕನೆಲೆಯಲ್ಲಿಯೇ ನಡೆಯುತ್ತದೆ. ಮನಸ್ಸಿನ ವ್ಯಾಪ್ತಿ ಅಷ್ಟು ವಿಶಾಲವಾದದು. ಹಾಗೆಂದೇ ಉಳಿದೆಲ್ಲ ಶಾಸ್ತ್ರಗಳಿಗೂ ಮನಃಶಾಸ್ತ್ರದ ನೆರವು ಅಗತ್ಯವೆನಿಸಿದೆ.

ಅಷ್ಟು ಮಾತ್ರವಲ್ಲದೆ, ಮನಸ್ಸಿನ ಆಳ–ಅಗಲಕ್ಕೆ ಮಿತಿಯಿಲ್ಲ. ಮನಸ್ಸೇ ಒಂದು ವಿಶ್ವವೆಂದೂ, ಅದರ ಗರ್ಭದಿಂದ ಹಲವಾರು ಪ್ರಪಂಚಗಳನ್ನು ವ್ಯಕ್ತಿ ಸೃಷ್ಟಿಮಾಡಿಕೊಳ್ಳುತ್ತಾನೆಂದೂ ಧರ್ಮಗ್ರಂಥಗಳು ಹೇಳುವುದುಂಟು. ಮನಸ್ಸಿನಿಂದ ಪರಿಕಲ್ಪಿತವಾದ ಆಂತರ ಜಗತ್ತಿನ ವಿಚಾರವನ್ನು ಮನೋವಿಶ್ಲೇಷಣ (Psychoanalysis) ಸ್ಪಷ್ಟಪಡಿಸುತ್ತದೆ. ಮನಸ್ಸಿನ ನೆಲೆಗಳು, ಪದರಗಳು, ಹೊದಿಕೆಗಳು, ಗುಹಾಗಹ್ವರಗಳು, ಕಮರಿಗಳು, ಏರುಪೇರುಗಳು ಇವೆಲ್ಲ ಅದ್ಭುತಗಳೇ ! ಮನಃಶಾಸ್ತ್ರದ ಸಂಶೋಧನೆಗಳಿಂದ ಮಾನವನ ಒಳಗಿರುವ ಈ ಅದ್ಭುತಪ್ರಪಂಚದ ಬಗ್ಗೆ ನಮಗೆ ಸಾಕಷ್ಟು ತಿಳಿದಿದೆ.

ಫ್ರಾಯ್ಡನ ಮನೋವಿಶ್ಲೇಷಣ, ಯುಂಗನ ವಿಶ್ಲೇಷಣ, ಆಡ್ಲರನ ವ್ಯಕ್ತಿಮೀಮಾಂಸೆ, ನವ್ಯವಿಶ್ಲೇಷಣವಾದಿಗಳ ಸಿದ್ಧಾಂತಗಳು ಇವೆಲ್ಲ ಮನಃಶಾಸ್ತ್ರದ ವ್ಯಾಪ್ತಿಯಲ್ಲೇ ಸೇರಿವೆ. ಇವೇ ಈ ಶಾಸ್ತ್ರದ ಜನಪ್ರಿಯವಾದ ಭಾಗವೆಂದರೂ ಉತ್ಪ್ರೇಕ್ಷೆಯಾಗದು.

ಕೆಲವು ಮಂದಿಗೆ ಅತಿಮಾನಸವೆನಿಸಿದ ವ್ಯಾಪಾರ ಸಾಧ್ಯ. ಸಾಮಾನ್ಯವಾಗಿ ನಮ್ಮ ಅನುಭವಕ್ಕೆ ಬರದ ಪ್ರಸಂಗಗಳು ಅವರಿಗೆ ಬರುವುದುಂಟು. ನಮ್ಮ ಪ್ರತ್ಯಕ್ಷಾನುಭವವೆಲ್ಲ ಇಂದ್ರಿಯಗಳನ್ನು ಅವಲಂಬಿಸಿಯೇ ಆಗುವುದಷ್ಟೆ; ಆದರೆ ಕೆಲವರಿಗೆ ಅತೀಂದ್ರಿಯಪ್ರತ್ಯಕ್ಷ ಕೈಗೂಡಿದೆ. ಮನೋವೃತ್ತಿಗಳಿಂದ ಭೌತಿಕವ್ಯವಹಾರಗಳನ್ನು ನೇರವಾಗಿ ನಡೆಸುವ ಸಾಮರ್ಥ್ಯ ಅವರಿಗೆ ಇರುತ್ತದೆ. ನಮ್ಮ ಯೋಗಪ್ರತ್ಯಕ್ಷ, ಅಲೌಕಿಕ ಸಿದ್ಧಿಗಳು, ಮೊದಲಾದ ಅಸಾಧಾರಣಶಕ್ತಿಗಳು ಈ ಜಾತಿಗೇ ಸೇರಿದವು. ಇಂಥ ಅತಿಮಾನಸಕ್ರಿಯೆಗಳ ವಿಚಾರವಾಗಿ ಅನ್ವೇಷಣೆ ಬಹುಕಾಲದಿಂದ ನಡೆದಿದೆ. ಆದರೆ ಮನಃಶಾಸ್ತ್ರ ಮೈದಳೆದು ಅದರ ಸಂವಿಧಾನಗಳು ಪಕ್ವವಾದಾಗ ಈ ಅನ್ವೇಷಣೆಗೆ ವೈಜ್ಞಾನಿಕ ಕಳೆ ಒದಗಿತು. ಮನಃಶಾಸ್ತ್ರದ ಆಶ್ರಯದಲ್ಲಿ ಈ ಅನ್ವೇಷಣೆ ಬೆಳೆದು 'ಅತಿಮಾನಸಶಾಸ್ತ್ರ' ಅಥವಾ 'ಪರಾಮಾನಸಶಾಸ್ತ್ರ' (Parapsychology) ವಾಗಿ ಇಂದು ನಿಂತಿದೆ. ಒಂದು ಕಾಲಕ್ಕೆ ಪುರಾಣವೆಂದು ಕೈಬಿಟ್ಟಿದ್ದ ವಿವರಗಳು ಈಗ ಪ್ರಯೋಗಾತ್ಮಕವಾಗಿ, ಅನುಸಂಧಾನಯೋಗ್ಯವಾಗಿ ಉಳಿದಿವೆ.

ಇದು ಮನಃಶಾಸ್ತ್ರದ ವ್ಯಾಪ್ತಿಯಲ್ಲಿ ಅಡಗಿರುವ ನಿರ್ದಿಷ್ಟ ವಿಚಾರಧಾರೆಗಳ ಸಿಂಹಾವಲೋಕನ. ಒಂದೊಂದು ಧಾರೆಯಲ್ಲಿಯೂ ಸೀಳುಗಳು ಸ್ವತಂತ್ರವಾಗಿ ಹರಿಯಲಾರಂಭಿಸಿ ವ್ಯಾಪ್ತಿಗೆ ಗಂಭೀರತನವನ್ನು ತಂದುಕೊಟ್ಟಿದೆ. ಪ್ರೌಢರೂ, ಪರಿಣತರೂ, ಪ್ರತಿಭಾವಂತರೂ ಈ ಕ್ಷೇತ್ರದಲ್ಲಿ ಕಳೆದ ನೂರುವರ್ಷಗಳಿಂದಲೂ ಅವಿರತವಾಗಿ ಶ್ರಮಿಸಿ ಮನಃಶಾಸ್ತ್ರವನ್ನು ವಿಜ್ಞಾನದ ನೆಲೆಯಲ್ಲಿ ನಿಲ್ಲಿಸಿದ್ದಾರೆ: ಹೆಚ್ಚು ಹೆಚ್ಚು ಸ್ವಾರಸ್ಯವಾದ ವಿವರಗಳನ್ನು ಸಂಗ್ರಹಿಸಿದ್ದಾರೆ. ಮನಃಶಾಸ್ತ್ರಕ್ಕೆ ವಿಶಿಷ್ಟವಾದ ಸಂವಿಧಾನಗಳನ್ನು ಬಳಸಿ ಸ್ವಾರಸ್ಯಕ್ಕೆ ಶಾಸ್ತ್ರಮರ್ಯಾದೆಯನ್ನು ತಂದುಕೊಟ್ಟಿದ್ದಾರೆ.



## ಪರಿಚ್ಛೇದ ಎರಡು

# ಸಂವಿಧಾನಗಳು

೧

**ಅನ್ವೇಷಣೆಯ ಮಾರ್ಗಗಳು**

ಯಾವ ಶಾಸ್ತ್ರವೇ ಆಗಲಿ, ಅದು ಒಂದು ಅನ್ವೇಷಣೆ, ಒಂದು ಅನುಸಂಧಾನ. ತನಗೆ ಸೀಮಿತವಾದ ವಿವರಗಳ ಬಗ್ಗೆ ಕೂಲಂಕಷವಾದ, ಪರಿಪೂರ್ಣವಾದ ಜ್ಞಾನವನ್ನು ಪಡೆಯುವುದು ಅದರ ಉದ್ದೇಶ. ಈ ಉದ್ದೇಶ ಸಫಲವಾಗಬೇಕಾದರೆ ಆಯಾ ವಿವರಗಳಿಗೆ ತಕ್ಕಂಥ, ಅನುಕೂಲವಾದ, ಸಂವಿಧಾನಗಳನ್ನು ಬಳಸಬೇಕಷ್ಟೆ. ಮನಃಶಾಸ್ತ್ರವೂ ತನ್ನ ಅನ್ವೇಷಣೆಗೆ ಅನುಕೂಲವಾದ ಸಂವಿಧಾನಗಳನ್ನು ಸಿದ್ಧಪಡಿಸಿಕೊಂಡಿದೆ. ಇವುಗಳಲ್ಲಿ ಕೆಲವು ಉಳಿದ ಖಚಿತ ಶಾಸ್ತ್ರಗಳಿಂದ ಗ್ರಹಿಸಿದುವು; ಮತ್ತೆ ಕೆಲವು ಮನಃಶಾಸ್ತ್ರಕ್ಕೇ ವಿಶಿಷ್ಟವಾದುವು. ನಿದರ್ಶನಕ್ಕೆ ಅವೇಕ್ಷಣ (Observation) ಮತ್ತು ಪ್ರಯೋಗ (Experiment) ಎರಡೂ ಸಾಮಾನ್ಯವಾಗಿ ಎಲ್ಲ ಶಾಸ್ತ್ರಗಳಲ್ಲಿಯೂ ಬಳಸುವ ಸಂವಿಧಾನಗಳೇ; ಆದರೆ ವೈಯಕ್ತಿಕ ಅನುಸಂಧಾನ (Case study) ಮತ್ತು ಅಂತರವೇಕ್ಷಣ (Introspection) ಮನಃಶಾಸ್ತ್ರದಲ್ಲಿ ವಿಶೇಷವಾಗಿ ಬಳಸುವಂಥವು. ಉಳಿದ ಖಚಿತ ಶಾಸ್ತ್ರಗಳು ಬಳಸುವ ಸಂಖ್ಯಾನ ಪದ್ಧತಿಗಳನ್ನೂ (Statistical Methods) ಮನಃಶಾಸ್ತ್ರವು ತನಗಾಗಿ ಅಳವಡಿಸಿಕೊಂಡಿದೆ. ಸಾಮಾಜಿಕಮನಃಶಾಸ್ತ್ರ, ಶಿಶುಮನಃಶಾಸ್ತ್ರ, ಔದ್ಯಮಿಕ ಮನಃಶಾಸ್ತ್ರ, ತುಲನಾತ್ಮಕ ಮನಃಶಾಸ್ತ್ರ ಇವುಗಳಲ್ಲೆಲ್ಲ ಬೇರೆ ಬೇರೆ ವಸ್ತುವಿಗೆ ತಕ್ಕಂತೆ, ಸಂವಿಧಾನಗಳನ್ನು ಸಿದ್ಧಪಡಿಸಿಕೊಂಡಿದ್ದಾರೆ. ಆದರೆ ಸ್ಥೂಲವಾಗಿ ಇವೆಲ್ಲ ಮೇಲೆ ಹೇಳಿದ ಐದು ಸಂವಿಧಾನಗಳಲ್ಲಿಯೇ ಸೇರುತ್ತವೆ.

ಮೊದಲನೆಯದಾಗಿ ಅವೇಕ್ಷಣೆ ಅಥವಾ ಪರಿಶೀಲನೆ. ಎಲ್ಲ ಶಾಸ್ತ್ರಗಳಲ್ಲಿಯೂ ಅಗತ್ಯವಾದ, ಪ್ರಮುಖವಾದ ಸಂವಿಧಾನ ಇದು. ಹೊರಗೆ ನಡೆಯುವ ವ್ಯಾಪಾರವನ್ನು ಗಮನವಿಟ್ಟು ನೋಡುವುದು. ನೋಡಿದ ವ್ಯಾಪಾರಗಳನ್ನು ನೋಡಿದಂತೆಯೆ

ನಿರೂಪಿಸುವುದು ಈ ಎರಡರಿಂದಲೇ ಶಾಸ್ತ್ರ ಮೈದುಂಬಿಕೊಳ್ಳುವುದು. ಇಂದ್ರಿಯಗಳ ಸಾಮರ್ಥ್ಯ, ಅವಧಾನ, ವಸ್ತುವಿನ ಸ್ಥಾನ–ಮಾನ, ಆಸಕ್ತಿ, ಆವರಣದ ಸೌಕರ್ಯ ಮೊದಲಾದ ವಿವರಗಳು ಅವೇಕ್ಷಣದಲ್ಲಿ ಅನಿವಾರ್ಯವಾಗಿ ಸೇರುತ್ತವೆ. ನಡೆಯುತ್ತಿರುವ ಸಂಗತಿಗಳನ್ನು ನಿರ್ದುಷ್ಟವಾಗಿ ಪರಿಶೀಲಿಸುವ ಸಾಮರ್ಥ್ಯ ಎಲ್ಲರಿಗೂ ಇರುವುದಿಲ್ಲ; ಸರಿಯಾಗಿ ಪರಿಶೀಲಿಸಿದರೂ ಅದನ್ನು ಸಮರ್ಪಕವಾಗಿ ನಿರೂಪಿಸುವ ಶಕ್ತಿ ಇರುವುದಿಲ್ಲ. ಇವೆರಡೂ ಅಭ್ಯಾಸದಿಂದಲೇ ಬರತಕ್ಕವು. ಎಲ್ಲರೂ ನೋಡಿದಂತೆ ವಿಜ್ಞಾನಿ ನೋಡುವುದಿಲ್ಲ; ಅವನ ನೋಟದಲ್ಲಿ ಅವಧಾನವಿರುತ್ತದೆ, ಗ್ರಹಿಸಬೇಕೆಂಬ ಕಾತರ ಇರುತ್ತದೆ. ಈಕ್ಷಣವೆಂದರೆ ನೋಡುವುದು; ಅವೇಕ್ಷಣವೆಂದರೆ ಎಚ್ಚರದಿಂದ ನೋಡುವುದು. ಈಕ್ಷಣವು ಇಚ್ಛೆಯಿಲ್ಲದೇ ನಡೆಯಬಹುದು; ನೋಡಬೇಕೆನ್ನುವ ಬಯಕೆಯಿಲ್ಲದಿದ್ದರೂ ನಾವು ನೋಡುವುದಿಲ್ಲವೇ? ಆದರೆ ಇಚ್ಛೆಯಿಲ್ಲದೆ, ಆಸಕ್ತಿ ಇಲ್ಲದೆ ಅವೇಕ್ಷಣ ನಡೆಯಲಾರದು. ಸಂಗತಿಯ ಮುಖ್ಯ ವಿವರಗಳನ್ನೂ ಗೌಣವಾದ ವಿವರಗಳಿಂದ ಬೇರ್ಪಡಿಸುವುದು ಅವೇಕ್ಷಣದ ಮುಖ್ಯಾಂಶ. ಸಾರವಾದುದನ್ನು ತಟ್ಟನೆ ಗ್ರಹಿಸುವ ಶಕ್ತಿ ಸತತವಾದ ಅಭ್ಯಾಸ, ಅಧ್ಯಯನ, ಅನುಸಂಧಾನ, ಅನ್ವೇಷಣೆಗಳಿಂದ ಸಿದ್ಧಿಸುತ್ತದೆ. ಇದರ ಸಿದ್ಧಿಯಿಲ್ಲದೆ ವಿಜ್ಞಾನಿ ಯಶಸ್ವಿಯಾಗಲಾರ.

ಮನಃಶಾಸ್ತ್ರದಲ್ಲಿ ವರ್ತನೆಯೇ ಮುಖ್ಯ ವಸ್ತುವಾದುದರಿಂದ ಅದನ್ನು ಇಂದ್ರಿಯಗಳು ಗ್ರಹಿಸಿ, ಮನಸ್ಸು ಪರಿಗ್ರಹಿಸಿ, ವಿಶ್ಲೇಷಣೆಗೆ ಒಳಪಡಿಸುವುದು ಅವೇಕ್ಷಣದಲ್ಲಿ ನಡೆಯುವ ಕೆಲಸ. ಮಾತು, ಕ್ರಿಯೆ, ಭಂಗಿ, ಉದ್ವೇಗ, ಭಾವಪ್ರದರ್ಶನ, ಸಮಸ್ಯಾಪೂರಣ, ಪ್ರಚೋದನೆಗೆ ಪ್ರತಿಕ್ರಿಯೆ ಇವೆಲ್ಲ ವರ್ತನೆಗಳೇ. ಇವೆಲ್ಲ ಇಂದ್ರಿಯಗ್ರಾಹ್ಯವಾದುವು; ಮನಸ್ಸು ಇಂದ್ರಿಯಗಳೊಡಗೂಡಿ ಇವನ್ನು ಗ್ರಹಿಸುವುದು ಸಾಧ್ಯ. ತಾನು ಯಾವುದಾದರೂ ವರ್ತನೆಯನ್ನು ಪರಿಶೀಲನೆಮಾಡಬೇಕೆಂದರೆ, ಮನಃಶಾಸ್ತ್ರಜ್ಞನು ಈ ವರ್ತನೆಯನ್ನು ಪ್ರಯೋಗಶಾಲೆಯಲ್ಲಿ, ನಿಯಂತ್ರಿತಸಂದರ್ಭದಲ್ಲಿ ಉಂಟುಮಾಡಿಕೊಳ್ಳಬಹುದು; ಇದು ಸಾಧ್ಯವಾಗದಾದಾಗ, ಸಹಜವಾಗಿ ಆ ವರ್ತನೆ ನಡೆಯುವಲ್ಲಿಗೆ ಹೋಗಿ ಪರಿಶೀಲನೆಮಾಡಬೇಕು. ನಿದರ್ಶನಕ್ಕೆ ಸಾಮಾಜಿಕ ಮನಃಶಾಸ್ತ್ರದ ದೊಂಬಿವರ್ತನೆ (crowd-behaviour), ಪೂರ್ವಗ್ರಹ (prejudice), ಗುಂಪಿನ ಬಿಕ್ಕಟ್ಟು (group tension) ಮೊದಲಾದ ವಿವರಗಳನ್ನು ಪ್ರಯೋಗಶಾಲೆಯಲ್ಲಿ ತರುವುದು ಕಷ್ಟ. ಅವುಗಳನ್ನು ಆಯಾ ಸಹಜ ಸಂದರ್ಭಗಳಲ್ಲಿಯೇ ಪರಿಶೀಲನ ಮಾಡಬೇಕು. ಬೆಳೆಯುವ ಮಗುವಿನ ಬುದ್ಧಿಶಕ್ತಿ ಹೆಚ್ಚುವುದನ್ನು ಅನುಸಂಧಾನ ಮಾಡಬೇಕಾದರೂ ಸಾಮಾನ್ಯವಾಗಿ ಹೀಗೆಯೇ ಮಾಡುತ್ತಾರೆ. ಮನಃಶಾಸ್ತ್ರದ ಬಹುಮಟ್ಟಿನ ವಿವರ ಈ ಸಂವಿಧಾನದಿಂದಲೇ ಪಡೆದುಕೊಂಡುದು. ಇದನ್ನು ಸಹಜ ಅವೇಕ್ಷಣ (naturalistic observation) ಎನ್ನುತ್ತಾರೆ.

ಆದರೆ ಈ ರೀತಿಯ ಅವೇಕ್ಷಣದಿಂದ ವಿವರಗಳ ಸಂಗ್ರಹ ವಿಪುಲವಾಗಿ ಆಗಬಹುದಾದರೂ ಅದನ್ನು ಖಚಿತ, ನಿರ್ದುಷ್ಟ ಎನ್ನುವಹಾಗಿಲ್ಲ. ಒಬ್ಬ ವಿಜ್ಞಾನಿ ನೋಡಿ

ದುದನ್ನು ಮತ್ತೊಬ್ಬ ವಿಜ್ಞಾನಿ ನೋಡುವುದು ಸಾಧ್ಯವಿಲ್ಲದಿದ್ದರೆ, ಅಥವಾ ಒಮ್ಮೆ ನಡೆದುದನ್ನು ಮತ್ತೆ ನಡೆಸುವುದು ಆಗದಿದ್ದರೆ ಆ ನೋಟಕ್ಕೆ ವೈಜ್ಞಾನಿಕವಾಲ್ಯ ಸಾಲದು. ಹಲವಾರು ಅವೇಕ್ಷಕರು ಸ್ವತಂತ್ರವಾಗಿ ಒಂದು ಸಂಗತಿಯನ್ನು ಪರಿಶೀಲಿಸಲು ಪ್ರಯೋಗಸಂವಿಧಾನವನ್ನು ಬಳಸುತ್ತಾರೆ. ಪ್ರಯೋಗವೂ ಒಂದು ರೀತಿಯ ಅವೇಕ್ಷಣೆಯೇ. ಸಹಜ ಸಂಪರ್ಭದಲ್ಲಿ ಪ್ರಸಂಗವನ್ನು ಪರಿಶೀಲಿಸುವಾಗ, ಸಂದರ್ಭದ ವಿವರಗಳು ಅವೇಕ್ಷಕನ ವಶದಲ್ಲಿರುವುದಿಲ್ಲ. ತನಗೆ ಯಾವ ವಿವರ ಬೇಕೋ ಆ ವಿವರ ವನ್ನಷ್ಟೆ ಅವನು ಪರಿಶೀಲಿಸುವಹಾಗಿಲ್ಲ. ವಿವರಗಳ ಜಾಲದಲ್ಲಿ ಪ್ರಸಂಗದ ನಿಜಸ್ವರೂಪ ಅಷ್ಟು ಖಚಿತವಾಗಲಾರದು; ಕಾರ್ಯ-ಕಾರಣ ಸಂಬಂಧವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟವಾಗುತ್ತದೆ. ಆದರೆ ಪ್ರಯೋಗಶಾಲೆಯಲ್ಲಿ ಅದೇ ಪ್ರಸಂಗವನ್ನು ನಡೆಸುವುದು ಸಾಧ್ಯವಾದರೆ, ವಿವರಗಳನ್ನೆಲ್ಲ ಅವೇಕ್ಷಕನು ಗುರುತಿಸಿ ಅವುಗಳ ಪ್ರಭಾವ ವನ್ನು ಅರಿತುಕೊಳ್ಳಬಹುದು; ಮತ್ತೊಮ್ಮೆ ಪ್ರಸಂಗವನ್ನು ಪ್ರಯೋಗ ಶಾಲೆಯಲ್ಲಿ ಸಿದ್ಧಪಡಿಸುವಾಗ ಈ ವಿವರಗಳನ್ನು ತನಗೆ ಬೇಕಾದಂತೆ ಮೊದಲೇ ನಿಯಂತ್ರಣ ಮಾಡಿಕೊಳ್ಳಬಹುದು.

ಮನಃಶಾಸ್ತ್ರದ ಎಲ್ಲ ವಸ್ತುವನ್ನೂ ಪ್ರಯೋಗದ ಹಿಡಿತದಲ್ಲಿ ತರುವುದು ಅಸಾಧ್ಯವೆಂದು ಒಪ್ಪಿಕೊಳ್ಳಬೇಕು. ಪ್ರಯೋಗ ಶಾಲೆಯಲ್ಲಿ ಮೈದಳೆದ ಪ್ರಸಂಗಗಳು ಎಷ್ಟೆಂದರೂ ಕೃತಕವೇ! ಸಹಜಸಂದರ್ಭದ ಕಾವು ಇಲ್ಲಿರುವುದಿಲ್ಲ. ಸಂದರ್ಭ ನೈಜವಾಗಿಲ್ಲದಿದ್ದರೆ, ಪ್ರವೃತ್ತಿಗಳೂ ಸಹಜವಾಗಿರುವುದಿಲ್ಲ; ಹೀಗಾಗಿ ಅನ್ವೇಷಣೆಯ ಉದ್ದೇಶ ಸಫಲವಾಗುವುದಿಲ್ಲ. ಭೌತಿಕ ವಿಜ್ಞಾನದ ಕ್ಷೇತ್ರಗಳಲ್ಲಿ ವಸ್ತು ಜಡವಾದುದ ರಿಂದ, ಪ್ರಚೋದನೆ ಮತ್ತು ಪ್ರತಿಕ್ರಿಯೆಗಳನ್ನು ಸರಾಗವಾಗಿ ಪರಿಶೀಲನೆ ಮಾಡ ಬಹುದು. ಮನಃಶಾಸ್ತ್ರದಲ್ಲಿ ವಸ್ತು ಸಚೇತನನಾದ ಮನುಷ್ಯ. ಅತ್ಯಂತ ಚಪಲವೆನಿಸಿದ ಅವನ ಮನಸ್ಸು. ಇಲ್ಲಿ ಪರಿಶೀಲನೆ ತಪ್ಪುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ಮನಃಶಾಸ್ತ್ರಜ್ಞರು ತಮ್ಮ ಪ್ರಯೋಗಪದ್ಧತಿಯನ್ನು ಮಾರ್ಪಡಿಸಿಕೊಂಡಿದ್ದಾರೆ. ಅಳವಡಿಸಿ ಕೊಂಡಿದ್ದಾರೆ. ಸಿಟ್ಟು ಬರುವಂಥ ಸಂದರ್ಭಗಳನ್ನು ಪರಿಶೀಲನೆ ಮಾಡುವಾಗ, ಆ ಸಂದರ್ಭಗಳನ್ನು ಪ್ರಯೋಗ ಶಾಲೆಯಲ್ಲಿ ಸಹಜವಾಗಿ ಉಂಟುಮಾಡುವುದು ಕಷ್ಟ; ಆ ಮನುಷ್ಯನಿಗೆ ಇದು ಪ್ರಯೋಗವೆಂಬ ಅರಿವು ಇದ್ದುದಾದರೆ ಇನ್ನೂ ಕಷ್ಟ. ಅವನಿಗೆ ತಿಳಿಯದಂತೆ ಅವನ ದೈಹಿಕ, ಮಾನಸಿಕ ವಿಕಾರಗಳನ್ನು ತಿಳಿದುಕೊಳ್ಳುವ ಯಂತ್ರವ್ಯವಸ್ಥೆ ಯನ್ನು ತುಂಬ ಎಚ್ಚರದಿಂದ ಮಾಡಬೇಕಾಗುತ್ತದೆ. ಪೂರ್ವಗ್ರಹ ಅಥವಾ ದುರಾ ಗ್ರಹಗಳನ್ನು ಅಧ್ಯಯನ ಮಾಡುವಾಗಲೂ ಹೀಗೆಯೇ ಪ್ರಚ್ಛನ್ನ ಪ್ರಯೋಗಗಳನ್ನು ನಡೆಸಬೇಕಾಗುವುದು. ಮನಃಶಾಸ್ತ್ರ ಪ್ರಯೋಗಗಳಲ್ಲಿ ಇದು ಮುಖ್ಯವಾದ ಅಂಶ. ನೇರವಾದ ಪರಿಶೀಲನೆ ಹಲವು ವೇಳೆ ಸಾಧ್ಯವಿಲ್ಲ, ಸಾಧ್ಯವಿದ್ದರೂ ಉಪಯೋಗವಿಲ್ಲ; ಓರೆಯಾಗಿ ಬಂದು, ಬಳಸಿ, ಇಣಿಕಿ ನೋಡಿ ಪರಿಶೀಲನೆ ಮಾಡಬೇಕಾದ ಸಂದರ್ಭಗಳೇ ಹೆಚ್ಚು. ಈ ಅಗತ್ಯವನ್ನು ಮನಗಂಡು ಪ್ರಯೋಗಗಳು ಪರೋಕ್ಷ ಪ್ರಧಾನವಾಗಿವೆ.

## ೨

### ಪ್ರಯೋಗ

ಪ್ರಯೋಗ ಶಾಲೆಯಲ್ಲಿ ಪ್ರಚೋದಕ ಸಂದರ್ಭಗಳನ್ನು ವ್ಯವಸ್ಥೆಮಾಡಿ, ಅದಕ್ಕೆ ಪ್ರತಿಕ್ರಿಯೆ ಹೇಗೆ ಒದಗುತ್ತದೆ ಎಂಬುದನ್ನು ಗಮನಿಸುತ್ತಾರೆ. ಬುದ್ಧಿಶಕ್ತಿಯ ಪರೀಕ್ಷೆ ( intelligence tests ), ವ್ಯಕ್ತಿತ್ವದ ಪರೀಕ್ಷೆ ( personality tests ) ಇವೆಲ್ಲ ಪ್ರಚೋದಕ ಸಂದರ್ಭಗಳೇ ; ಇವು ಪ್ರಯೋಗದ ವ್ಯಾಪ್ತಿಯಲ್ಲೇ ಸೇರುತ್ತವೆ. ಪ್ರಯೋಗಶಾಲೆಯ ಸನ್ನಿವೇಶದಲ್ಲಿ ಪ್ರಚೋದನೆಯ ನೆಲೆಯೇನು, ಪ್ರತಿಕ್ರಿಯೆಯನ್ನು ಅಳೆಯುವುದು ಹೇಗೆ, ಪ್ರಯೋಗಕ್ಕೆ ವಿಷಯನಾದ ವ್ಯಕ್ತಿಯ ಸ್ಥಿತಿಯೇನು ಮೊದಲಾದ ಅಂಶಗಳನ್ನು ಮನಃಶಾಸ್ತ್ರಪ್ರಯೋಗಜ್ಞರು ತಿಳಿದಿರಬೇಕು. ಪ್ರಯೋಗದಲ್ಲಿ ಮಾಪನ, ಎಂದರೆ ಅಳೆಯುವುದು, ಮುಖ್ಯವಾದ ವಿಚಾರ. ಬುದ್ಧಿಶಕ್ತಿಯೋ ದುರಾಗ್ರಹವೋ, ಬಯಕೆಯೋ, ಆತಂಕವೋ ಇದೆ ಎನ್ನುವುದಕ್ಕಿಂತ ಎಷ್ಟಿದೆ, ಯಾವ ಪ್ರಮಾಣದಲ್ಲಿದೆ ಎನ್ನುವುದು ಮುಖ್ಯ. ಇದನ್ನು ತಿಳಿಯಲೆಂದೇ ಪ್ರಯೋಗವನ್ನು ನೈಜ ಸಂದರ್ಭದ ಪ್ರತಿಕೃತಿ ( model ) ಆಗಿ ವ್ಯವಸ್ಥೆ ಮಾಡುತ್ತಾರೆ. ವಿವರಗಳೆಲ್ಲ ಯಾವಯಾವ ಪ್ರಮಾಣದಲ್ಲಿವೆ, ಪರಸ್ಪರ ಸಂಬಂಧ ಎಂಥದು, ಒಂದರ ಮೇಲೆ ಇನ್ನೊಂದರ ಪ್ರಭಾವ ಹೇಗಿರುತ್ತದೆ, ಸ್ಥಾಯಿವಿವರಗಳೂ ( constants ) ಪರಿಣಮ್ಯ ವಿವರಗಳೂ ( variables ) ಯಾವುವು, ಪರಿಣಮ್ಯ ವಿವರಗಳನ್ನು ನಿಯಂತ್ರಣ ಮಾಡುವುದು ಹೇಗೆ ಇವೆಲ್ಲವೂ ಪ್ರಯೋಗಕ್ಕೆ ಮೊದಲೇ ನಿಶ್ಚಿತವಾಗಿರುತ್ತವೆ. ಇಷ್ಟೆಲ್ಲ ಪೂರ್ವಸಿದ್ಧತೆಯಿಲ್ಲದೆ ಪ್ರಯೋಗಕ್ಕೆ ವಿಷಯವಾದ ಸಂಗತಿಯನ್ನು ತದೇಕ ಚಿತ್ತದಿಂದ ಪರಿಶೀಲಿಸುವುದು ಸಾಧ್ಯವಿಲ್ಲ. ಬೆಳಕು, ಗಾಳಿ, ಆಸನ, ಕಾಲ, ಯಂತ್ರ ಇವೆಲ್ಲ ಹೊರಗಣ ಪರಿಣಮ್ಯ ವಿವರಗಳಾದರೆ, ಹಸಿವು, ಬೇಸರ, ಆಯಾಸ, ಆತಂಕ, ಅವಸರ ಇವೆಲ್ಲ ಒಳಗಿನ ಪರಿಣಮ್ಯ ವಿವರಗಳು. ಪ್ರಚೋದನೆಗೆ ಪ್ರತಿಕ್ರಿಯೆ ಇವೆಲ್ಲವನ್ನೂ ಅವಲಂಬಿಸಿರುತ್ತದೆ. ಹೊರಗಿನವನ್ನು ನಿಯಂತ್ರಣ ಮಾಡುವುದು ಅಷ್ಟಾಗಿ ಕಷ್ಟವಾಗದು ; ಆದರೆ ಒಳಗಿನವನ್ನು ನಿಯಂತ್ರಣ ಮಾಡುವುದಿರಲಿ, ನಿರ್ದೇಶ ಮಾಡುವುದೇ ಕಷ್ಟವಾಗುತ್ತದೆ. ಮನಃಶಾಸ್ತ್ರದ ಪ್ರಯೋಗಗಳಲ್ಲಿ ಇದೊಂದು ದೊಡ್ಡ ಸಮಸ್ಯೆ. ಈ ಕಾರಣದಿಂದ, ಒಂದೇ ಪ್ರಯೋಗವನ್ನು ಮತ್ತೆ ಮತ್ತೆ ನಡೆಸಬೇಕಾಗುತ್ತದೆ.

ಪರಿಣಮ್ಯವಿವರಗಳನ್ನು ನಿಯಂತ್ರಣಮಾಡಲೆತ್ನಿಸುವಾಗ, ಕೆಲವನ್ನು ಬೇಕೆಂದೇ ಮಾರ್ಪಡಿಸುತ್ತಾರೆ; ಮನಃಶಾಸ್ತ್ರಜ್ಞನು ತನ್ನ ಉದ್ದೇಶಕ್ಕೆ ಪೂರಕವಾಗುವಂತೆ ತನ್ನ ಅರಿವಿಗೆ ಬಂದ ಅಂಶಗಳನ್ನು ಮಾರ್ಪಡಿಸುತ್ತಾನೆ, ಸಂಸ್ಕರಿಸುತ್ತಾನೆ. ಇದೇ ಅಂಶದಿಂದಲೇ ಪ್ರತಿಕ್ರಿಯೆ ಸಿದ್ಧವಾಯಿತೇ ಎಂದು ನಿಶ್ಚಯಿಸುವುದು ಅವನ ಉದ್ದೇಶ. ಈ ವಿವರವನ್ನು ಮಾರ್ಪಡಿಸಿದಾಗ ಪ್ರತಿಕ್ರಿಯೆಯೂ ಮಾರ್ಪಟ್ಟರೆ

ಸಂಶಯ ದೃಢವಾಯಿತಷ್ಟೆ. ಹೀಗೆ ನಿಯಂತ್ರಿತವಾಗುವ ಅಥವಾ ಪೂರ್ವನಿರ್ದಿಷ್ಟ ವಾದ ವಿವರಗಳಿಗೆ ಸ್ವತಂತ್ರ ಪರಿಣಮ್ಯ ವಿವರಗಳು (independent variables) ಎಂದು ಹೆಸರು. ಎರಡು ವರ್ಷದ ಮಗು ಬಿಡಿಸಲಾರದ ಸಮಸ್ಯೆಯನ್ನು ಅದೇ ಮಗು ನಾಲ್ಕು ವರ್ಷವಾದಾಗ ಬಿಡಿಸಬಹುದು. ಇಲ್ಲಿ ವಯಸ್ಸು ಒಂದು ಪರಿಣಮ್ಯ ವಿವರ ; ಆದರೆ ಅದನ್ನು ನಿಯಂತ್ರಣ ಮಾಡುವುದು ಹೇಗೆ ? ವಿವರ ನಿರ್ದಿಷ್ಟವಾದುದು ಎಂಬುದಷ್ಟೇ ಸಾಕು. ಸಾಮಾನ್ಯವಾಗಿ ಪ್ರಯೋಗಗಳಲ್ಲಿ ಒಂದೇ ಸ್ವತಂತ್ರ ವಿವರ ವನ್ನಿಟ್ಟುಕೊಂಡು ಪರಿಶೀಲನೆ ಮಾಡುತ್ತಾರೆ.

ಈ ವಿವರದ ಆಧಾರದ ಮೇಲೆ ಪರಿಶೀಲನೆಯಿಂದ, ಹಲವಾರು ಇತರ ವಿವರ ಗಳು ಹೊರಬೀಳಬಹುದು. ಪ್ರಯೋಗದಲ್ಲಿ ನಿರ್ದಿಷ್ಟವಾದ, ನಿಯಂತ್ರಿತವಾದ ವಿವರವನ್ನವಲಂಬಿಸಿಯೇ ಈ ವಿವರಗಳು ಇರುವುದರಿಂದ ಇವುಗಳಿಗೆ ಪರತಂತ್ರ ಪರಿಣಮ್ಯ ವಿವರಗಳು (dependent variables) ಎಂದು ಹೆಸರು. ಇವನ್ನು ನಿರ್ದೇಶಿಸುವುದರಿಂದ ಸ್ಥಾಯಿವಿವರಗಳು ಸ್ಪಷ್ಟವಾಗುತ್ತವೆ. ಭಯಾನಕವಾದ ಸಂದರ್ಭ ದಲ್ಲಿ ಮುಖಭಂಗಿಗಳನ್ನು ಪರಿಶೀಲನೆ ಮಾಡುವಾಗ ಹೃದಯಕ್ರಿಯೆ, ರಕ್ತಚಲನೆ ಮೊದಲಾದ ದೈಹಿಕ ವಿವರಗಳನ್ನೂ ಗಮನಿಸಬೇಕಾಗುತ್ತದೆ; ಇವೆಲ್ಲ ಪರತಂತ್ರ ವಿವರಗಳು. ಒಬ್ಬ ವ್ಯಕ್ತಿಯ ವರ್ತನೆಯ ಮೇಲೆ ಹೊರ ಆವರಣದ ಪ್ರಭಾವ ಎಷ್ಟಿರುತ್ತದೆ ಎನ್ನುವುದನ್ನು ಪ್ರಯೋಗ ತಿಳಿಸಬೇಕಾದುದರಿಂದ ಮನಃಶಾಸ್ತ್ರದ ಪ್ರಯೋಗಗಳು ಸಾಮಾನ್ಯವಾಗಿ ಜಟಿಲವಾಗಿರುತ್ತವೆ. ವರ್ತನೆಯು ಅಂತರ ವಿವರ ಗಳನ್ನು ಪರೋಕ್ಷವಾಗಿಯೂ ಬಾಹ್ಯವಿವರಗಳನ್ನು ಪ್ರತ್ಯಕ್ಷವಾಗಿಯೂ ಅವಲಂಬಿಸಿರು ತ್ತದೆಯಷ್ಟೆ. ಈ ವಿವರಗಳನ್ನೆಲ್ಲ ಪ್ರಯೋಗವು ಒಳಗೊಳ್ಳಬೇಕು. ಈ ಕಾರಣದಿಂದ, ಮನಃಶಾಸ್ತ್ರ ಪ್ರಯೋಗಗಳನ್ನು ವ್ಯವಸ್ಥೆಮಾಡುವುದು ಕಷ್ಟದ ಕೆಲಸ; ಅದಕ್ಕೆ ವಿಪುಲವಾದ ಅನುಭವವೂ, ಪಕ್ವವಾದ ಕೌಶಲವೂ ಅಗತ್ಯ.

ಪ್ರಯೋಗಕ್ಕೆ ಒಗ್ಗುವಂಥ ವರ್ತನೆಗಳನ್ನು ಮಾತ್ರವೇ ಈಗಿನ ಮನಃಶಾಸ್ತ್ರ ಜ್ಞರು ಗ್ರಾಹ್ಯವೆಂದು ಪರಿಗಣಿಸುತ್ತಾರೆ. ಆತ್ಮ, ಸಂವಿತ್, ಮೊದಲಾದ ತತ್ತ್ವ ಗಳನ್ನು ಪ್ರಯೋಗ ಶಾಲೆಯಲ್ಲಿ ಮೇಲೆ ಹೇಳಿದ ಸಂವಿಧಾನಗಳನ್ನು ಬಳಸಿ ಪರಿಶೀಲಿ ಸುವುದಾಗದಷ್ಟೆ. ಈ ದೃಷ್ಟಿಯಿಂದ ಮನಃಶಾಸ್ತ್ರದ ವಿಷಯದ ವ್ಯಾಪ್ತಿ ಸ್ವಲ್ಪ ಮಟ್ಟಿಗೆ ಕುಗ್ಗಿದೆ ಎಂದರೆ ತಪ್ಪಲ್ಲ. ಆಲೋಚನೆ, ಭಾವನೆ, ಮೊದಲಾದ ಅಂತರ ವಿವರಗಳನ್ನೂ ಪ್ರಯೋಗಯೋಗ್ಯವಾಗಿ ಮಾಡುವವರೆಗೆ ಅವುಗಳನ್ನು ಪರಿಶೀಲಿಸ ಬಾರದೆಂದು ಕೆಲವರ ಹಟ. ಇದು ಅತಿರೇಕದ ಮಾತು. ವಸ್ತುವಿಗೆ ತಕ್ಕಂತೆ ಪ್ರಯೋಗ ವನ್ನು ಅಳವಡಿಸಿಕೊಳ್ಳುವ ಅಗತ್ಯವನ್ನು ಮನಃಶಾಸ್ತ್ರ ಕಂಡುಕೊಂಡಿದೆ. ವಿಜ್ಞಾನ ಇರುವುದು ವಸ್ತುವಿನಲ್ಲಲ್ಲ, ಸಂವಿಧಾನದಲ್ಲಿ. ನಿದರ್ಶನಕ್ಕೆ, ಅಂತರ ವಿವರಗಳನ್ನು ತಿಳಿಯಲು ಮನಃಶಾಸ್ತ್ರವು ಪ್ರಯೋಗಾನಂತರ ನಿರೂಪಣಾಕ್ರಮವನ್ನು ಬಳಸಿ

ಕೊಳ್ಳುತ್ತದೆ. ನೇರವಾಗಿ ಬೇರೆಯವರು ತಿಳಿಯಲಾರದ ಚಿಂತನಕ್ರಮ, ಆಲೋಚನೆ, ಭಯ, ಆಶಯ, ಆತಂಕ ಮೊದಲಾದ ಮಾನಸಿಕ ವಿವರಗಳನ್ನು ಆ ವ್ಯಕ್ತಿಯೇ ತನಗೆ ಅವು ಒದಗಿದಂತೆ ಸಾಧ್ಯವಾದಷ್ಟೂ ನಿರ್ದಿಷ್ಟವಾಗಿ ನಿರೂಪಿಸಬೇಕೆನ್ನುವ ಕ್ರಮ ವಿದೆ (verbal reports). ಪ್ರಯೋಗಕಾಲದಲ್ಲಿ ವ್ಯಕ್ತವಾದ ಅಂಶಗಳಿಗೂ ಈ ನಿರೂಪಣಾಂಶಗಳಿಗೂ ಸಮನ್ವಯಮಾಡಬೇಕಾದುದೂ ಅಗತ್ಯವೇ. ನಿರೂಪಣೆಯಲ್ಲಿ ಬಂದುದೆಲ್ಲ ನಿಜವೆಂದೇ ಬಗೆಯಬಾರದಷ್ಟೆ.

ಪ್ರಯೋಗಾತ್ಮಕವಾದ ಸಂವಿಧಾನದಲ್ಲಿ ಪರೀಕ್ಷೆ (testing), ನಿರೂಪಣೆ (verbal report), ಯಾಂತ್ರಿಕ ನಿಯಂತ್ರಣ (instrumental control), ಮತ್ತು ಸೋಪಾಧಿಕ ಪ್ರತಿಕ್ಷೇಪ (conditioned reflex) ಎನ್ನುವ ನಾಲ್ಕು ಅಂಗಗಳನ್ನು ವರ್ತನವಾದಿಗಳು ಹಿಡಿದು ಅವುಗಳನ್ನು ಬೆಳೆಸಿದ್ದಾರೆ. ಮೊದಲನೆಯ ಮೂರರ ವಿವರಣೆ ಆಗಲೇ ಬಂದಿದೆ; ನಾಲ್ಕನೆಯದು ರಷ್ಯನ್ ವಿಜ್ಞಾನಿ ಐವಾನ್ ಪಾವ್ ಲೋವ್ (Ivan Pavlov) ಎನ್ನುವವನು ದೈಹಿಕ ಕ್ರಿಯೆಗಳನ್ನು ಅಧ್ಯಯನ ಮಾಡ ಲೆಂದು ಸಿದ್ಧಗೊಳಿಸಿದ ಸಂವಿಧಾನ. ಅದರ ಪ್ರಸ್ತಾಪ ಮುಂದೆ ಬರುತ್ತದೆ. ಅಂತೂ ಈ ಧೋರಣೆಯಿಂದ ಮನಃಶಾಸ್ತ್ರದಲ್ಲಿ ವೈಜ್ಞಾನಿಕಸಂವಿಧಾನಗಳು ಬೇರೂರಿದುವು.

## ೩

## ಸಂಖ್ಯಾನಶಾಸ್ತ್ರ

ಪ್ರಯೋಗದಿಂದ ಪಡೆದುಕೊಂಡ ವಿವರಗಳು ಅಂಕಿ-ಅಂಶಗಳಷ್ಟೆ. ಹಾಗೆಯೇ ಅವು ಯಾವ ಅರ್ಥವನ್ನೂ ಸೂಚಿಸುವುದಿಲ್ಲ. ಪರಿಶೀಲನೆ ನಡೆಸಿದ ಸಂಗತಿಗಳ ತಾತ್ಪರ್ಯ ಕೇವಲ ಪ್ರಯೋಗದಿಂದಲೇ ಸ್ಪಷ್ಟವಾಗುವುದಿಲ್ಲ, ಪ್ರಯೋಗಲಬ್ಧವಾದ ವಿವರಗಳಿಗೆ ಶಾಸ್ತ್ರೀಯವಾದ ಸಂಸ್ಕಾರ ನಡೆಸಬೇಕಾದ ಅಗತ್ಯವಿದೆ. ವಿವರಗಳ ನಡುವೆ ಇರುವ ಸಂಬಂಧ, ಪ್ರಮಾಣವೈವಿಧ್ಯ, ಕಾರ್ಯಕಾರಣನಿರೂಪಣೆ, ಮುಖ್ಯ–ಗೌಣ ಅಂಶಗಳು, ಇವುಗಳನ್ನೆಲ್ಲ ಅರಿಯಬೇಕಾದರೆ ಪ್ರಯೋಗಲಬ್ಧವಾದುದನ್ನು ವಿಶ್ಲೇಷಣ (analysis) ಮಾಡುತ್ತಾರೆ, ಅವುಗಳನ್ನು ತೂಗುತ್ತಾರೆ (evaluation). ಹೀಗೆ ಮಾಡಲು ಸಂಖ್ಯಾನಶಾಸ್ತ್ರ (Statistics) ಬಳಕೆಗೆ ಬರುತ್ತದೆ. ಸಂಖ್ಯಾನಶಾಸ್ತ್ರವು ಗಣಿತಶಾಸ್ತ್ರದ ಒಂದು ವಿಭಾಗ; ಎಲ್ಲಿ ಖಚಿತವಾದ ಅನುಮಾನ ಸಾಧ್ಯವಿಲ್ಲವೋ ಅಲ್ಲಿ ಸಂಭಾವ್ಯ (Probability) ದ ಧಾಟಿಯನ್ನು ಹಿಡಿದು ವ್ಯವಹರಿಸುವುದಕ್ಕಾಗಿ ಈ ವಿಭಾಗವನ್ನು ವ್ಯವಸ್ಥೆಮಾಡಿದ್ದಾರೆ. ಪ್ರಸಂಗದ ವಿವರಗಳನ್ನು ಅಂಕಿಗಳಾಗಿ ಮಾರ್ಪಡಿಸಿ ಅಂಕಿಗಳನ್ನು ಸಜ್ಜುಗೊಳಿಸಿ ಅವುಗಳ ತಾತ್ಪರ್ಯಗಳನ್ನು ಹೊರತೆಗೆಯಲು ಹಲವಾರು ಪದ್ಧತಿಗಳನ್ನು ಕಲ್ಪಿಸಿಕೊಂಡಿದ್ದಾರೆ. ಮನಃಶಾಸ್ತ್ರವು ಈ ಸಂಖ್ಯಾನಪದ್ಧತಿಗಳನ್ನು ವಿಶೇಷವಾಗಿ ಬಳಸುತ್ತದೆ.

ವೈಯಕ್ತಿಕ ವೈವಿಧ್ಯಗಳ ಬಗ್ಗೆ ಸಂಶೋಧನೆ ನಡೆಯುತ್ತಿದ್ದಾಗ ಈ ಪದ್ಧತಿಗಳ ಪ್ರಯೋಜನ ಬೆಳಕಿಗೆ ಬಂದಿತು. ಅಂದಿನಿಂದಲೂ ಸಂಖ್ಯಾನಶಾಸ್ತ್ರ ಮನಃಶಾಸ್ತ್ರ ಸಂಶೋಧನೆಗಳಿಗೆ ಊರುಗೋಲಾಗಿ ನಿಂತಿದೆ; ಪ್ರಯೋಗಕ್ಕೆ ಇದು ಅವಶ್ಯಪರಿಕರ ವಾಗಿದೆ. ಪ್ರಯೋಗಲಬ್ಧವಾದ ವಿವರಗಳನ್ನು ಸಂಸ್ಕರಿಸುವಾಗ ಮಾತ್ರ ಇದರ ಪ್ರಯೋಜನವಲ್ಲ; ಪ್ರಯೋಗವನ್ನು ವ್ಯವಸ್ಥೆಮಾಡುವಾಗಲೂ (design of experiment) ಇದು ಉಪಯುಕ್ತವಾಗಿದೆ. ಯಾವ ಸ್ವತಂತ್ರ ಪರಿಣಮ್ಯ ವಿವರವನ್ನು ಅಧ್ಯಯನ ಮಾಡಬೇಕು, ಯಾವ ಯಾವ ಗುಂಪುಗಳನ್ನು (samples) ಪರಿಶೀಲನೆಗೆ ಆಯ್ದುಕೊಳ್ಳಬೇಕು, ಯದೃಚ್ಛಾವರಣ (random selection) ಹೇಗಿರಬೇಕು, ಪರೀಕ್ಷೆ ಯಥಾರ್ಥವಾಗಿರುವುದು ಹೇಗೆ, ಸಮರ್ಪಕವಾಗಿರುವುದು ಹೇಗೆ, ಯಾವ ಪದ್ಧತಿ ಯನ್ನು ಅನುಸರಿಸಿ ವಿವರಗಳನ್ನು ಪಡೆದರೆ ತಾತ್ಪರ್ಯ ತಟ್ಟನೆ ತಿಳಿಯುತ್ತದೆ— ಇವೆಲ್ಲ ಸಂಖ್ಯಾನಶಾಸ್ತ್ರದ ಬಲದಿಂದಲೇ ಸ್ಪಷ್ಟವಾಗಬೇಕು. ಹೀಗೆ ಪೂರ್ವನಿರ್ದೇಶ ಮಾಡದೆ ಪ್ರಯೋಗ ಒಪ್ಪವಾಗದು. ಪ್ರಯೋಗದಿಂದ ಹೊರಬರುವ ವಿವರಗಳನ್ನು ಹೇಗೆ ಸಂಸ್ಕರಿಸಬೇಕು ಎನ್ನುವುದನ್ನು ಮೊದಲೇ ನಿಶ್ಚಯಿಸದಿದ್ದರೆ ಪ್ರಯೋಗ ವಿಫಲ ವಾಗುತ್ತದೆ. ಪ್ರಯೋಗಕ್ಕೆ ಗೊತ್ತುಗುರಿಗಳನ್ನು ಒದಗಿಸಿಕೊಟ್ಟು, ಮಾರ್ಗದರ್ಶನ ಮಾಡುವುದೂ ಸಂಖ್ಯಾನಶಾಸ್ತ್ರದ ಕೆಲಸವೇ ಎನ್ನಬಹುದು. ಸಂಶೋಧನ ಪದ್ಧತಿ ಗಳು ಮತ್ತು ಪ್ರಯೋಗವ್ಯವಸ್ಥೆ ಎಂದು ಈಚೆಗೆ ನಿರ್ದಿಷ್ಟ ಶಾಸ್ತ್ರಭಾಗವೇ ಮೈದಳೆ ದಿದೆ; ಇದರಲ್ಲಿ ಬಹುಮಟ್ಟಿಗೆ ಸಂಖ್ಯಾನಶಾಸ್ತ್ರದ ಗಾಳಿಯೇ ಬೀಸುತ್ತದೆ.

ಪ್ರಯೋಗಸಂದರ್ಭಗಳಲ್ಲಿ ಮತ್ತು ನಿಯಂತ್ರಿತಸಂದರ್ಭಗಳಲ್ಲಿ ವಿವರಗಳನ್ನು ಸಂಗ್ರಹಿಸಿದಾಗ ಅವುಗಳಿಗೆ ಸಂಖ್ಯಾನಶಾಸ್ತ್ರದ ಸಂಸ್ಕಾರವಾಗಲೇಬೇಕು. ಒಬ್ಬನೇ ವ್ಯಕ್ತಿ ಪ್ರಯೋಗವಿಷಯವಾದಾಗಲೂ ಹಲವು ಬಾರಿ ಸಂಗ್ರಹಿಸಿದ ವಿವರಗಳಿಗೆ ಮಧ್ಯವರ್ತಿ ಮಾಪನವನ್ನು ಮಾಡಬೇಕು; ಇಲ್ಲವಾದರೆ ಪ್ರತಿಬಾರಿಯೂ ಸಂದರ್ಭ ಶುದ್ಧಿಯಿರುತ್ತದೆ ಅಷ್ಟೆ, ವ್ಯಕ್ತಿಯ ಮೂಲಭೂತವಾದ ನೆಲೆ ಅರ್ಥವಾಗುವುದಿಲ್ಲ. ಗುಂಪಿನ ಬಹುಮಂದಿಯ ವರ್ತನೆಯನ್ನು ಅಥವಾ ಮನೋವೃತ್ತಿಯನ್ನು ಪರಿ ಶೀಲನೆಮಾಡುವಾಗಲಂತೂ ಗುಂಪು ಒಟ್ಟಾರೆ ಹೇಗೆ ವರ್ತಿಸುತ್ತದೆ ಎಂದು ಕಂಡು ಕೊಳ್ಳಲು ವ್ಯಕ್ತಿ ವಿವರಗಳನ್ನೆಲ್ಲ ಸಂಸ್ಕರಿಸಿ ಗುಂಪಿನಲ್ಲಿ 'ಸಪಿಂಡೀಕರಣ' ಮಾಡ ಬೇಕಾಗುತ್ತದೆ. ಇದು ಸಂಖ್ಯಾನಶಾಸ್ತ್ರದಿಂದಲೇ ಆಗತಕ್ಕದ್ದು.

ಪ್ರಯೋಗದ ವಿಷಯ ವ್ಯಾಪಕವಾಗಿ, ವ್ಯಕ್ತಿಗಳು ಬಹುಸಂಖ್ಯಾಕರಾಗಿ ವಿವರ ಗಳು ವಿಪುಲವಾಗಿದ್ದಾಗ ವ್ಯಕ್ತಿವಿಶ್ಲೇಷಣ ಮುಖ್ಯವಲ್ಲ: ಇಡೀ ವರ್ಗ ಹೇಗೆ ವರ್ತಿಸು ತ್ತದೆ, ಅವರ ಅಭಿಪ್ರಾಯವೇನು, ನಿಲುವೇನು, ನೆಲೆಯೇನು ಎನ್ನುವುದು ಮುಖ್ಯ. ಇಂಥ ಸಂದರ್ಭಗಳಲ್ಲಿ ಸಂಖ್ಯಾನಶಾಸ್ತ್ರ ಪದ್ಧತಿಗಳು ಅನಿವಾರ್ಯವಾಗುತ್ತದೆ. ಪ್ರಚೋ ದಕ-ಪ್ರತಿಕ್ರಿಯೆಗಳ ಸಂಬಂಧವೇ ಮನಃಶಾಸ್ತ್ರದ ಕೇಂದ್ರ ಸಮಸ್ಯೆಯಲ್ಲವೆ? ಪ್ರಯೋಗ

ದಲ್ಲಿ ಪ್ರೇರಕಸಾಮಾಗ್ರಿಗಳೆಲ್ಲ ಪೂರ್ವನಿಶ್ಚಿತವಾದುವು; ಆದರೆ ಪ್ರತಿಕ್ರಿಯೆಗಳು ವಿವಿಧವಾಗಿರಬಹುದು, ಬಹಳ ಇರಬಹುದು. ಒಂದು ಪ್ರತಿಕ್ರಿಯೆಗೂ ಅದೇ ಪ್ರಚೋದಕಕ್ಕೆ ಬರುವ ಇನ್ನೊಂದು ಪ್ರತಿಕ್ರಿಯೆಗೂ ಪರಸ್ಪರ ಸಂಬಂಧ (correlation) ಗಮನಾರ್ಹವಾದುದು. ಇದು ಕೆಲವೊಮ್ಮೆ ಅನ್ಯೋನ್ಯಾಶ್ರಯಸಂಬಂಧವಾಗಿರುತ್ತದೆ; ಕೆಲವು ಸಾಹಚರ್ಯನಿಯಮವನ್ನು ಅನುಸರಿಸುತ್ತವೆ; ಕೆಲವು ಮೂಲಭೂತ ಆಧಾರಗಳನ್ನು ಪ್ರತಿಬಿಂಬಿಸುತ್ತವೆ. ಬುದ್ಧಿಶಕ್ತಿಯ ವಿಚಾರವಾಗಿ ಸಂಶೋಧನೆ ಸಾಮಾನ್ಯಘಟಕ (General Factor), ವಿಶಿಷ್ಟಘಟಕಗಳು (specific factors) ಎಂಬುದನ್ನು ಕಂಡುಹಿಡಿದದ್ದು ಸಂಖ್ಯಾನಶಾಸ್ತ್ರದ ಬಲದಿಂದಲೇ. ಘಟಕವಿಶ್ಲೇಷಣ (Factor analysis) ಈಗ ಪ್ರತ್ಯೇಕಶಾಸ್ತ್ರವಾಗಿಯೇ ಬೆಳೆದುಬಿಟ್ಟಿದೆ. ಅಂತೂ ಪ್ರತಿಕ್ರಿಯೆಗಳನ್ನು ಅಳೆದು, ತೂಗಿ, ವಿವರಗಳನ್ನು ಬೇರ್ಪಡಿಸಿ, ಅವುಗಳ ನಡುವೆ ಇರುವ ನೆಂಟನ್ನು ಹುಡುಕಿ, ಅಡಗಿರುವ ಮೂಲಸೂತ್ರವನ್ನು ನಿರ್ದೇಶಿಸುವುದು ಸಂಖ್ಯಾನಶಾಸ್ತ್ರದ ಕೆಲಸ. ಇದರ ಪದ್ಧತಿಗಳು ಮನಃಶಾಸ್ತ್ರಕ್ಕೆ ತುಂಬ ನೆರವಾಗಿವೆ.

೪

**ಅಂತರಾವಲೋಕನ**

ಪ್ರಾಚೀನಕಾಲದಲ್ಲಿ ಮನಃಶಾಸ್ತ್ರದ ಮುಖ್ಯಸಂವಿಧಾನ ಅವೇಕ್ಷಣವೇ ಆಗಿದ್ದಿತು ಪ್ರಯೋಗವೂ ಅವೇಕ್ಷಣದ ಒಂದು ಮುಖವೇ ಎಂಬುದನ್ನು ಕಂಡಿದ್ದೇವೆ. ಆದರೆ ಮನಃಶಾಸ್ತ್ರಕ್ಕೇ ಸೀಮಿತವಾದ, ವಿಶಿಷ್ಟವಾದ ಒಂದು ಸಂವಿಧಾನವೆಂದರೆ 'ಅಂತರಾವಲೋಕನ' (Introspection). ಇದೂ ಅವೇಕ್ಷಣದ ಇನ್ನೊಂದು ಮುಖ: 'ಒಳಗೆ ನೋಡಿಕೊಳ್ಳುವುದು' ಎಂದು ಈ ಮಾತಿನ ಅರ್ಥ. ಸಾಮಾನ್ಯವಾಗಿ ಇಂದ್ರಿಯಗಳೂ ಮನಸ್ಸೂ ಹೊರಗಿನ ವಸ್ತುಗಳನ್ನು ಗ್ರಹಿಸುತ್ತವೆ; ಆದರೆ ನಮ್ಮಲ್ಲಿ ನಡೆಯುವ ಮಾನಸಿಕವ್ಯಾಪಾರವನ್ನು ನಾವೇ ಪರಿಶೀಲಿಸಿಕೊಂಡರೆ ಅದು ಅಂತರಾವಲೋಕನ, ಅಥವಾ ಸ್ವ-ಅವೇಕ್ಷಣ, ಮನಸ್ಸು ತನ್ನ ವಿವರಗಳನ್ನು ತಾನೇ ಪರಿಶೀಲಿಸುತ್ತದೆ. ಸಾಮಾನ್ಯವಾಗಿ ಕೆಲವು ಸಂದರ್ಭಗಳಲ್ಲಿ ನಮ್ಮ ಭಾವನೆಗಳನ್ನು ನಾವೇ ಪರೀಕ್ಷಿಸಿಕೊಳ್ಳುತ್ತೇವೆ; ನಮ್ಮ ತಪ್ಪನ್ನು ನಾವೇ ಆಲೋಚಿಸಿಕೊಳ್ಳುತ್ತೇವೆ; ನಮ್ಮ ಸುಖ-ದುಃಖಗಳನ್ನು ನಾವೇ ಎರಡನೆಯವರಂತೆ ಅನುಭವಿಸಿಕೊಳ್ಳುತ್ತೇವೆ; ವೈದ್ಯನ ಮುಂದೆ ನಮ್ಮ ವೇದನೆಗಳನ್ನು, ಆತಂಕಗಳನ್ನು ತೋಡಿಕೊಳ್ಳುತ್ತೇವೆ. ಆದರೆ ಇವೆಲ್ಲ ಅಂತರಾವಲೋಕನವಲ್ಲ. ಅಂತರಾವಲೋಕನವೆನ್ನುವುದು ಒಂದು ವೈಜ್ಞಾನಿಕಸಂವಿಧಾನ; ಅದಕ್ಕೆ ಅಧಿಕಾರಬೇಕು, ಯೋಗ್ಯತೆ ಬೇಕು, ಶಿಕ್ಷಣ ಬೇಕು, ಕೌಶಲ ಬೇಕು. ನಮ್ಮ ಒಳಗೆ ನಡೆಯುವ ಮಾನಸಿಕವಿವರಗಳನ್ನು ಅವು ನಡೆಯುತ್ತಿರುವಂತೆಯೇ, ಆಗಲೇ, ಅವುಗಳಿಂದ ದೂರನಿಂತು, ಪರಿಶೀಲನೆಮಾಡುವುದು ಕಷ್ಟಸಾಧ್ಯ. ಹೊರಗೆ ಹರಿಯುವ ಮನಸನ್ನು ಒಳಗೆ ತಿರುಗಿಸುವುದೂ, ಸ್ಥೂಲವಸ್ತುಗಳನ್ನೂ ಪ್ರಸಂಗಗಳನ್ನೂ ಪರಿಶೀಲಿಸಿ ಮೈವುಂಡ

ಮನಸ್ಸನ್ನು ತನ್ನ ಸೂಕ್ಷ್ಮವ್ಯಾಪಾರದ ಕಡೆ ಹರಿಯಬಿಡುವುದು ಒಂದು ಸಿದ್ಧಿಯೇ. ವಿಷಯಿಯೇ ವಿಷಯವಾಗಿ ಪರಿಣಮಿಸುವ ಈ ಸಂದರ್ಭ ಕ್ಲಿಷ್ಟವಾದುದೇ.

ಆದರೆ ನಮ್ಮಲ್ಲಿ ನಡೆಯುವ ಮಾನಸಿಕವ್ಯಾಪಾರವನ್ನು ನಾವೇ ತಿಳಿಯಬಲ್ಲೆವಲ್ಲದೆ ಎರಡನೆಯವರು ತಿಳಿಯಲಾರರು. ಆ ಮಾನಸಕ್ರಿಯೆಯನ್ನು ಮಾತಿನಲ್ಲಿ ಆಡಿದರೆ, ಮುಖದಲ್ಲಿ ತೋರಿಸಿದರೆ ಇತರರಿಗೆ ಅನುಮಾನದಿಂದ ಅರ್ಥವಾದೀತು, ಇದು ಪರೋಕ್ಷಜ್ಞಾನವಷ್ಟೆ. ನೇರವಾಗಿ ಅವುಗಳನ್ನು ಗ್ರಹಿಸಬಲ್ಲವರು ನಾವೇ; ನಮಗೆ ಮಾತ್ರ ಅವು ಪ್ರತ್ಯಕ್ಷ. ಮನಃಶಾಸ್ತ್ರದ ವಸ್ತು ಮಾನಸಿಕವ್ಯಾಪಾರವೇ ಆದುದರಿಂದ ಮನಃಶಾಸ್ತ್ರಜ್ಞನು ತನ್ನೊಳಗೆ ತಾನೇ ನೋಡಿಕೊಳ್ಳಬೇಕಾಗುತ್ತದೆ. ಮನಸ್ಸಿನ ವಿವರಗಳನ್ನು ಸಾಕ್ಷಾತ್ತಾಗಿ, ಪ್ರತ್ಯಕ್ಷವಾಗಿ ಅವನೇ ಕಂಡುಕೊಳ್ಳಬಹುದು. ಈ ಕಾರಣ ದಿಂದಲೇ ಮನಃಶಾಸ್ತ್ರದ ಇತಿಹಾಸದಲ್ಲಿ ಆಂತರಾವಲೋಕನಕ್ಕೆ ಹಿರಿಮೆಯ ಪಾತ್ರವಿದೆ. ಒಂದಲ್ಲ ಒಂದು ರೀತಿಯಲ್ಲಿ ಎಲ್ಲ ಮನಃಶಾಸ್ತ್ರಸಂಶೋಧನೆಗಳೂ. ಪ್ರಯೋಗಗಳೂ, ಈ ಪದ್ಧತಿಯನ್ನು ಇಂದಿಗೂ ಅನುಸರಿಸುತ್ತವೆ.

ಸ್ಟೌಟ್ ಎನ್ನುವ ಮನಃಶಾಸ್ತ್ರಜ್ಞ ಆಂತರಾವಲೋಕನದಲ್ಲಿ ಮೂರು ಅವಸ್ಥೆ ಗಳನ್ನು ನಿರ್ದೇಶಿಸಿದ್ದಾನೆ. ಮೊದಲನೆಯದು ವಿಷಯಿಯೇ ವಿಷಯವಾಗಿ ಪರಿವರ್ತನ ಗೊಳ್ಳುವುದು. ಬಿರುಗಾಳಿಯನ್ನು ಅನುಭವಿಸುತ್ತಿರುವಾಗ ಇದ್ದಕ್ಕಿದ್ದಂತೆ ಬಿರು ಗಾಳಿಯನ್ನು ನಾವು ಅನುಭವಿಸುತ್ತಿದ್ದೇವೆ ಎಂಬ ಅರಿವಾಗುತ್ತದೆ; ಅನುಭವದ ಮಧ್ಯದಲ್ಲೇ ಒಳಗಿನವನ್ನು ಹೊರಗಿನದರಂತೆ ನೋಡಲಾರಂಭಿಸುತ್ತೇವೆ. ಇದನ್ನು ಅಂತರಪ್ರತ್ಯಕ್ಷ ಎನ್ನಬಹುದು. ಎರಡನೆಯದಾಗಿ, ನಮ್ಮ ಒಳಗಿನದನ್ನು ನಾವು ಬರಿದೇ ನೋಡಿಕೊಳ್ಳುವುದಲ್ಲದೆ, ಅವುಗಳನ್ನು ಕುರಿತು ಆಲೋಚನೆಮಾಡುತ್ತೇವೆ, ವಿಮರ್ಶೆ ಮಾಡುತ್ತೇವೆ, ನಾವೇ ಸಮಸ್ಯೆಗಳನ್ನು ಒಡ್ಡಿಕೊಂಡು ನಾವೇ ಅವನ್ನು ಪರಿಹರಿಸಿ ಕೊಳ್ಳುತ್ತೇವೆ. ಇದನ್ನು 'ಆತ್ಮವಿಮರ್ಶೆ' ಎನ್ನಬಹುದು. ಮೂರನೆಯದಾಗಿ, ಆಂತರಾವಲೋಕನವನ್ನು ವೈಜ್ಞಾನಿಕಸಂವಿಧಾನದಂತೆ ಬಳಸುತ್ತೇವೆ. ಮನಃಶಾಸ್ತ್ರದ ವಿಚಾರವಾಗಿ ಕುತೂಹಲದಿಂದ ಶಾಸ್ತ್ರೀಯಪ್ರಶ್ನೆಗಳನ್ನು ಎತ್ತಿಕೊಂಡು ಅವುಗಳ ಪರಿಹಾರಕ್ಕೆ ನೆರವಾಗುವಂತೆ ನಮ್ಮ ಮಾನಸಿಕವಿವರಗಳನ್ನೇ ಎಚ್ಚರದಿಂದ ಪರೀಕ್ಷೆ ಮಾಡಿಕೊಳ್ಳುತ್ತೇವೆ, ಪರಿಶೀಲಿಸಿಕೊಳ್ಳುತ್ತೇವೆ. ಇಲ್ಲಿ ಆತ್ಮಾಭಿನಿವೇಶವಾಗಲೀ, ಪೂರ್ವಗ್ರಹವಾಗಲೀ, ಅಭಿಮಾನವಾಗಲೀ ಬಾರದಂತೆ ಜಾಗರೂಕರಾಗಿರುವುದು ಮುಖ್ಯ. ತಟಸ್ಥನಂತೆ, ಉದಾಸೀನನಂತೆ, ಹೊರಗಿನವನಂತೆ ತನ್ನನ್ನೇ ತಾನು ಕಂಡು ಕೊಳ್ಳುವುದು, ಕೇವಲ ಶಾಸ್ತ್ರನಿಷ್ಠೆಯಿಂದ ಜಿಜ್ಞಾಸೆಯಿಂದ ಆಂತರಾವಲೋಕನ ಮಾಡುವುದು ಈ ಮೂರನೆಯ ನೆಲೆಯಲ್ಲಿ ಮಾತ್ರ.

## ಅಂತರಾವಲೋಕನದ ಆತಂಕ

ಆದರೆ ಹೀಗೆ ಅಂತರಾವಲೋಕನ ನಿಜವಾಗಿ ಸಾಧ್ಯವೇ, ಸಹಜವೇ, ವಿಶ್ವಾಸಾರ್ಹವೇ ಎನ್ನುವ ಆತಂಕವನ್ನು ಮನಃಶಾಸ್ತ್ರಜ್ಞರೇ ವ್ಯಕ್ತಪಡಿಸಿದ್ದಾರೆ. ಮನಸ್ಸಿನ ಸ್ವಭಾವ ಇಂದ್ರಿಯವಿಷಯವಾದುದನ್ನು ಮಾತ್ರ ಗ್ರಹಿಸುವುದು ; ಯಾವಾಗಲೂ ಮನಸ್ಸು ಇಂದ್ರಿಯಗಳ ಅನುಬಂಧಿ. ತನ್ನನ್ನು ತಾನೇ ಗ್ರಹಿಸುವುದು ಅದರ ಸ್ವಭಾವವಲ್ಲ. ಕಣ್ಣು ತನ್ನ ವಿವರಗಳನ್ನು ತಾನೇ ಕಂಡುಕೊಳ್ಳಬಲ್ಲುದೆ? ಹಾಗೆಯೆ ಮನಸ್ಸೂ. ಮನಸ್ಸು ತನ್ನನ್ನೇ ತಾನು ಅವಲೋಕಿಸಿಕೊಳ್ಳುವುದು ಸಾಧ್ಯವಿಲ್ಲ. ಒಂದುವೇಳೆ, ಮನಸ್ಸು ತನ್ನ ವಿವರಗಳ ಬಗ್ಗೆ ಪರೀಕ್ಷೆ ಮಾಡತೊಡಗಿದರೆ ಅದು ಅಂತರಾವಲೋಕನವಲ್ಲ, ಪಶ್ಚಾದವಲೋಕನ (retrospection). ಮನೋವ್ಯಾಪಾರ ನಡೆಯುವಾಗಲೇ ಅದನ್ನು ನೋಡುವುದು ಸಾಧ್ಯವಿಲ್ಲ ; ಮನಸ್ಸು ನೋಡಲು ಆರಂಭಿಸಿದಾಗ ಮೊದಲಿನ ವ್ಯಾಪಾರ ಮುಗಿದು ಹೊಸ ಅವಲೋಕನ-ವ್ಯಾಪಾರ ಮೊದಲಾಗುತ್ತದೆ; ಅದು ನೋಡುವುದು ನಡೆಯುತ್ತಿರುವ ವ್ಯಾಪಾರವನ್ನಲ್ಲ, ಮುಗಿದುಹೋದ ವ್ಯಾಪಾರವನ್ನು. ಮೇಲಾಗಿ, ಮನಸ್ಸು ತಾನೇ ತನ್ನನ್ನು ವಿಷಯವನ್ನಾಗಿ ಪರಿಗಣಿಸಿ ತಟಸ್ಥವಾಗಿ ಪರಿಶೀಲನೆ ಮಾಡುವುದು ಸಹಜವೂ ಅಲ್ಲ ; ಪ್ರಯತ್ನಿಸಿದರೂ ಅದು ಕೃತ್ರಿಮವಾಗಿಬಿಡುತ್ತದೆ. ಇದರಿಂದ ಒದಗಿದ ವಿವರಗಳು ನೈಜವಲ್ಲ. ಸಾಧ್ಯವಾದರೂ, ಅಂತರಾವಲೋಕನವೆನ್ನುವುದು ಬಿಂಬದ ಪ್ರತಿಬಿಂಬವಷ್ಟೆ; ಎರಡರ ನಡುವೆ ಪ್ರಾತಿಭಾಸಿಕವಾದ ವಿವರಗಳೆಷ್ಟೋ ! ಇದೂ ಅಲ್ಲದೆ, ವ್ಯಕ್ತಿ ತನ್ನನ್ನು ತಾನು ಪರಿಶೀಲಿಸಿಕೊಳ್ಳುವಾಗ ತನಗೆ ಪ್ರತಿಕೂಲವೆನಿಸಿದ ವಿವರಗಳು ಹೊರಬಿದ್ದರೆ ಅವನ್ನು ಅಭಿಮಾನವಿಲ್ಲದೆ ಶುದ್ಧ ವಿಜ್ಞಾನಿಯಂತೆ ಪರಿಶೀಲಿಸುವುದಾಗಲೀ ನಿರೂಪಿಸುವುದಾಗಲೀ ಕಷ್ಟ. ಏನಿಲ್ಲವೆಂದರೂ, ತನ್ನ ಮನೋವೃತ್ತಿಗಳನ್ನು ಗ್ರಾಹ್ಯವಾಗಿ, ಪ್ರಶಸ್ತವಾಗಿ ಚಿತ್ರಿಸಿಕೊಳ್ಳುವ ಕಾತರ ಎಲ್ಲರಿಗೂ ಇರುತ್ತದೆ. ಎರಡನೆಯವನ ಕಣ್ಣು ತಪ್ಪಿಸಿ ಭ್ರಾಂತಿಯನ್ನುಂಟುಮಾಡಬೇಕೆಂಬ ಕುತ್ಸಿತ ಬುದ್ಧಿ ಇಲ್ಲದಿರಬಹುದು ; ತನ್ನನ್ನು ತಾನೇ ನಂಬಿಸಿಕೊಂಡು, ತನ್ನ ದೃಷ್ಟಿಯಲ್ಲಿ ತಾನು ಉತ್ತಮನೆಂದು ಕಾಣಿಸಿಕೊಳ್ಳ ಬಯಸುವುದು ಸಹಜ. ಹೀಗಿರುವಾಗ ಅಂತರಾವಲೋಕನದಿಂದ ಬಂದ ವಿವರಗಳು ಎಷ್ಟರಮಟ್ಟಿಗೆ ವಿಶ್ವಾಸಾರ್ಹ ?

ಈ ಆಕ್ಷೇಪಗಳೆಲ್ಲ ನಿಜವಾದುವೇ. ಮಾನಸ ಕ್ರಿಯೆಗಳು ತುಂಬ ಚಂಚಲ, ತೋರಿಯಡಗುವ ನೀರು ಗುಳ್ಳೆಗಳಂತೆ ! ಯಾವ ಮನೋವ್ಯಾಪಾರವೂ ಎರಡು ಕ್ಷಣ ನಿಲ್ಲುವುದಿಲ್ಲ. ವಿಷಯದಲ್ಲಿ ಸ್ಥಿರತೆ ಇಲ್ಲದಿದ್ದರೆ ಪರಿಶೀಲನೆ ಹೇಗೆ ಸಾಧ್ಯ ? ಅಂತರಾವಲೋಕನದಿಂದ 'ನೋಡುವ ಮನಸ್ಸು' 'ಕಾಣುವ ಮನಸ್ಸು' ಎಂದು ಮನಸ್ಸನ್ನು ಇಬ್ಭಾಗ ಮಾಡುವುದೂ ಸರಿಯಲ್ಲ. ಕೋಪದಲ್ಲಿದ್ದಾಗ ಯಾರಾದರೂ ತನ್ನ ಕೋಪವನ್ನು ತಾನೇ ನೋಡಿಕೊಳ್ಳುವುದು ಸಾಧ್ಯವೆ? ಅಥವಾ ತನ್ನ ಕೋಪ

ವನ್ನು ತಾನೇ ಪರಿಶೀಲನೆಮಾಡುತ್ತಿದ್ದಾಗ ಕೋಪ ಉಳಿಯುವುದೋ ? ಭಯ, ದ್ವೇಷ, ಪ್ರೀತಿ, ಕ್ರೋಧ, ಮಾತ್ಸರ್ಯ ಮೊದಲಾದ ಮಾನಸ ವ್ಯಾಪಾರಗಳಲ್ಲಿ ಅಂತರಾವಲೋಕನ ಸಾರ್ಥಕವಾಗುವುದಿಲ್ಲ. ಆದರೆ ಇಷ್ಟೇ ಕಾರಣದಿಂದ ಇದನ್ನು ನಿಷ್ಪ್ರಯೋಜಕವೆಂದು ತಳ್ಳಿಬಿಡಬಾರದು. ಮನಃಶಾಸ್ತ್ರದ ಅತಿಮುಖ್ಯ ವಿವರಗಳನ್ನು ಪಡೆಯಲು ಇದಲ್ಲದೆ ಬೇರೊಂದು ಸಾಧನವೇ ಇರದು. ಎಷ್ಟು ನಿಷ್ಕೃಷ್ಟವಾದ ಪ್ರಯೋಗವಾದರೂ ಅಂತರಾವಲೋಕನದ ಪಾತ್ರ ಇದ್ದೇ ಇರುತ್ತದೆ,

ಮೇಲೆ ಹೇಳಿದ ಆಕ್ಷೇಪಗಳನ್ನು ಸಾವಧಾನವಾಗಿ ವಿಮರ್ಶಿಸಿದ ಟಿಚ್‌ನರ್ ಎನ್ನುವ ಮನೋವಿಜ್ಞಾನಿ, ಅಂತರಾವಲೋಕವನ್ನು ಶಾಸ್ತ್ರೀಯಸಂವಿಧಾನದಂತೆ ಬಳಸುವುದನ್ನು ಅಭ್ಯಾಸ ಮಾಡಬೇಕು, ಆಗ ಅದು ಸಾರ್ಥಕವಾಗುತ್ತದೆ ಎನ್ನುವ ಸಮಾಧಾನವನ್ನು ಸೂಚಿಸಿದ್ದಾನೆ. ಸಾಮಾನ್ಯಜನರಿಗೆ ಇದು ಸಿದ್ಧಿಸುವುದಿಲ್ಲ. ಆದರೆ ಜಿಜ್ಞಾಸುಗಳಾದವರು, ಶಾಸ್ತ್ರನಿಷ್ಠರಾದವರು ಪ್ರಯತ್ನಪಟ್ಟು ಅಭ್ಯಾಸದಿಂದ ಇದನ್ನು ಕೈಗೂಡಿಸಿಕೊಳ್ಳಬಹುದು. ಅಂತರಾವಲೋಕನ ಅಭ್ಯಾಸವಾಗಿಬಿಟ್ಟರೆ, ಮನಸ್ಸು ತನ್ನ ವ್ಯಾಪಾರಗಳನ್ನು ಅವಕ್ಕೆ ಅಡ್ಡಿ ಬರದಂತೆ ಪರಿಶೀಲಿಸುವುದೂ ಸಾಧ್ಯ, ಪರಿಶೀಲಿಸಿದ ವಿವರಗಳನ್ನು ನಿರೂಪಿಸುವುದೂ ಸಾಧ್ಯ. ಕಣ್ಣು ನೋಡುತ್ತಿರುವಾಗಲೇ ನೋಡಿದುದನ್ನು ಕೈ ಬರೆದುಕೊಳ್ಳುವುದಲ್ಲವೆ ? ಹಾಗೆಯೇ ಅಂತರಾವಲೋಕನ-ನಿರೂಪಣೆಗಳೂ ( introspective reports ) ಸಾಧ್ಯ. ಒಂದು ವೇಳೆ, ಅಂತರಾವಲೋಕನ ನಿಜವಾಗಿ ಪಶ್ಚಾದವಲೋಕನವಾದರೆ ನಷ್ಟವೇನಿಲ್ಲ. ಮುಗಿದ ಮನೋವೃತ್ತಿಯನ್ನು ನೆನಪಿಗೆ ತಂದುಕೊಂಡಾಗ ಅದು ಮತ್ತೆ ಜಾಗ್ರತಸ್ಥಿತಿಗೇರುತ್ತದೆ ; ಸ್ಮೃತಿಯನ್ನವಲಂಬಿಸಿಯೇ ಪರಿಶೀಲನೆ ನಡೆದರೂ ಅದು 'ಪುನರಾಂತರಾವಲೋಕನ' ( reintrospection ) ವಾಗುತ್ತದೆ ; ಇದರಿಂದ ಪ್ರಯೋಜನವಿಲ್ಲದೆ ಇಲ್ಲ. ಮುಗಿದ ಒಡನೆಯೇ ಮನೋವೃತ್ತಿ ಮತ್ತೆ ಮೂಡಿಬಂದರೆ ಪರಿಶೀಲನೆ ಇನ್ನಷ್ಟು ನಿರ್ಲಿಪ್ತವಾಗಿ ನಡೆಯಬಹುದು. ವೇದನೆಯನ್ನು ಅನುಭವಿಸಿ ಅದರಿಂದ ಹೊರಬಂದ ರೋಗಿ ಈ ವೇದನೆಯನ್ನು ಚೆನ್ನಾಗಿ ಪರಿಶೀಲಿಸಬಲ್ಲ ; ವೈದ್ಯನಿಗೆ ತನ್ನ ವೇದನೆಯ ಬಗ್ಗೆ ಸಮರ್ಪಕವಾದಚಿತ್ರವನ್ನು ಒದಗಿಸಬಲ್ಲ. ವೇದನೆಯನ್ನು ಅನುಭವಿಸುತ್ತಿರುವಾಗ ಇದು ಸಾಧ್ಯವಿಲ್ಲದೆ ಹೋಗಬಹುದು. ಇಂಥ ಅಂತರಾವಲೋಕನಗಳಿಂದಲೇ ವೈದ್ಯರು ಕೆಲಸ ಮಾಡುವುದು ; ವೈದ್ಯಶಾಸ್ತ್ರ ಬೆಳೆದಿರುವುದೂ ಇದರಿಂದಲೇ. ಈ ದೃಷ್ಟಿಯಿಂದ. ಆಕ್ಷೇಪಗಳು ಎಷ್ಟಿದ್ದರೂ, ಅಂತರಾವಲೋಕನವನ್ನು ಮನಃಶಾಸ್ತ್ರ ಬಳಸುತ್ತಲೇ ಬಂದಿದೆ. ಪ್ರಯೋಗದಲ್ಲಿಯೂ ಇದನ್ನು ಅಳವಡಿಸಿಕೊಂಡಿದ್ದಾರೆ.

ಜ

## ಇತರ ಸಂವಿಧಾನಗಳು

ಮಗು ಬೆಳೆಯುವಾಗ ಒದಗುವ ಅದ್ಭುತ ವ್ಯತ್ಯಾಸಗಳನ್ನು ಗಮನಿಸಿದ ಮನಃಶಾಸ್ತ್ರಜ್ಞರು ವ್ಯಕ್ತಿಯನ್ನು ಪ್ರೌಢಾವಸ್ಥೆಯಲ್ಲಿ ಮಾತ್ರ ಪರಿಶೀಲಿಸಿದರೆ ಸಾಲದು,

ಪೂರ್ವದ ಸ್ಥಿತಿಗತಿಗಳನ್ನೂ ವಿಚಾರಮಾಡಬೇಕೆಂದು ನಂಬಿದ್ದಾರೆ. ವ್ಯಕ್ತಿಯ ಮನಸ್ಸು, ವರ್ತನಶೈಲಿ, ವ್ಯಕ್ತಿತ್ವ ಇವುಗಳನ್ನು ಸಮರ್ಪಕವಾಗಿ ಅರಿಯಬೇಕಾದರೆ ಆ ವ್ಯಕ್ತಿ ಬೆಳೆದುಬಂದ ರೀತಿಯನ್ನೂ ಅರಿಯಬೇಕು; ಅವನ ಹಿನ್ನೆಲೆ, ಸಂದರ್ಭ, ವಂಶ, ದೈಹಿಕ ಬೆಳವಣಿಗೆ, ಶೈಶವಾವಸ್ಥೆಯ ಅನುಭವಗಳು, ಘಟನೆಗಳು ಎಲ್ಲವನ್ನೂ ಗಮನಿಸಬೇಕು. ವ್ಯಕ್ತಿ ಬೆಳೆಯುತ್ತಿರುವಾಗ ನಡೆದ ಅಸಂಖ್ಯಾತ ವರ್ತನೆಗಳಲ್ಲಿ ಮುಖ್ಯವಾದುವನ್ನು ಆಯ್ದು ಅವನ್ನು ಅಧ್ಯಯನ ಮಾಡಿದಾಗ ವ್ಯಕ್ತಿಯ ಸ್ವಭಾವ ಅರ್ಥವಾಗುತ್ತದೆ. ಇದು ಜೀವವಿಕಾಸದ ಪ್ರಣಾಳಿಕೆಯನ್ನನುಸರಿಸಿ ಬಂತ ಸಂವಿಧಾನ, ಮಗು ಮೊದಲವರ್ಷಗಳಲ್ಲಿ ಆಡಿದ ಮಾತು, ಆಡಿದ ಆಟ, ಅನುಭವಿಸಿದ ಪ್ರಸಂಗಗಳು ಇವೆಲ್ಲವನ್ನೂ ತಾಯಿ 'ಡೈರಿ'ಯ ರೂಪದಲ್ಲಿ ಬರೆದಿಟ್ಟರೆ, ಅನುಕ್ರಮವಾಗಿ ವ್ಯಕ್ತಿಯ ಸ್ವಭಾವ ಹೇಗೆ ಮೈದಳೆಯಿತು ಎನ್ನುವುದು ತಿಳಿಯುತ್ತದೆ. ನೀಚವರ್ಗದ ಪ್ರಾಣಿಗಳ, ಬೆಳೆಯುತ್ತಿರುವ ಮಗುವಿನ ಅಧ್ಯಯನ ಈ ಸಂವಿಧಾನಕ್ಕೆ ನೆರವಾಗುತ್ತದೆ. ವುಡ್‌ವರ್ಥ್ ಎನ್ನುವ ಮನಃಶಾಸ್ತ್ರಜ್ಞ ಈ ಸಂವಿಧಾನವನ್ನು 'ವಿಕಸನ ಸಂವಿಧಾನ' (developmental method) ಎಂದು ಕರೆದಿದ್ದಾನೆ.

ವ್ಯಕ್ತಿಯು ದಾರಿತಪ್ಪಿ ಅಪರಾಧಿಯಾದರೆ, ರೋಗಿಯಾದರೆ, ಅವನ ವ್ಯಕ್ತಿತ್ವ ಶಿಥಿಲವಾದರೆ ಅವನ ವರ್ತನೆ ವಿಪರೀತವಾಗುತ್ತದೆ. ಆಗ ಈ ವರ್ತನೆಗೆ ಕಾರಣ, ಸಹಕಾರಿವಿವರ, ರೋಗದ ಬಗೆ, ಅಪರಾಧದ ಉಪಾಧಿ ಮೊದಲಾದುವನ್ನು ತಿಳಿಯಬೇಕಾದರೆ ಮನಃಶಾಸ್ತ್ರವು ವೈದ್ಯಕೀಯ ಸಂವಿಧಾನ (clinical method) ವನ್ನು ಬಳಸುತ್ತದೆ. ಈ ಸಂವಿಧಾನವು ಮೇಲೆ ಹೇಳಿದ ಬೆಳವಣಿಗೆ-ಪದ್ಧತಿಯನ್ನೇ ಅವಲಂಬಿಸಿದುದು. ಇಲ್ಲಿ ಬೆಳವಣಿಗೆ ಕ್ರಮವನ್ನು ಪರೋಕ್ಷವಾಗಿ ಕಂಡುಹಿಡಿಯುತ್ತಾರೆ ಅಷ್ಟೆ. ರೋಗಿ ಅಥವಾ ಅಪರಾಧಿ ತನಗೆ ತಿಳಿದಿರುವ, ತನ್ನ ನೆನಪಿನಲ್ಲಿ ಉಳಿದಿರುವ ಶೈಶವ, ಬಾಲ್ಯ, ತಾರುಣ್ಯದ ಘಟನೆಗಳನ್ನೂ ಅನುಭವಗಳನ್ನೂ ವೈದ್ಯನಿಗೆ ಅಥವಾ ಮನಃಶಾಸ್ತ್ರಜ್ಞನಿಗೆ ತಿಳಿಯಹೇಳುತ್ತಾನೆ. ರೋಗಿಯ ಅಥವಾ ಅಪರಾಧಿಯ ಸಹವಾಸಿಗಳಿಂದಲೂ ಮನೆಯವರಿಂದಲೂ ಸಹೋದ್ಯೋಗಿಗಳಿಂದಲೂ ವೈದ್ಯ (ಅಥವಾ ಮನಃಶಾಸ್ತ್ರಜ್ಞ) ವಿವರಗಳನ್ನು ಸಂಗ್ರಹಿಸುತ್ತಾನೆ; ದಾಖಲೆಗಳಿದ್ದರೆ ಅವನ್ನೂ ಪರಿಶೀಲಿಸುತ್ತಾನೆ; ಕೆಲವು ಪೂರ್ವನಿರ್ದಿಷ್ಟ ಪ್ರಶ್ನಾವಳಿಗಳನ್ನು ಬಳಸಿ ಮುಖ್ಯವಾದ ವಿವರಗಳನ್ನು ಪಡೆಯುತ್ತಾನೆ. ಇವೆಲ್ಲ ಆದನಂತರ ಈ ರೋಗಿ ಅಥವಾ ಅಪರಾಧಿ ಬೆಳೆದ ಬಗೆ ಹೇಗೆ, ಅವನ ಬಾಳುವೆಯಲ್ಲಿ ರೋಗದ ಉಪಾಧಿ ಯಾವುದು, ಅಪರಾಧಕ್ಕೆ ಪ್ರೇರಕಸಾಮಾಗ್ರಿ ಯಾವುದು, ಅವನ ವ್ಯಕ್ತಿತ್ವಕ್ಕೂ ಈ ವೈಪರೀತ್ಯಕ್ಕೂ ಇರುವ ಕಾರ್ಯಕಾರಣಸಂಬಂಧ ಏನು ಎಂಬುದನ್ನು ನಿರ್ಧಾರಮಾಡಲಾಗುತ್ತದೆ. ಈ ವಿಶ್ಲೇಷಣವು ಚಿಕಿತ್ಸೆಗೆ ಪೂರ್ವಸಿದ್ಧತೆಯಾಗಿ ನಡೆಯುತ್ತದೆ. ಹೀಗೆ ಮನೋರೋಗ, ಬಾಲ್ಯಾಪರಾಧ, ಅಪರಾಧ ಮೊದಲಾದ ವಿಪರೀತವರ್ತನೆಗಳನ್ನು ಅಧ್ಯಯನ ಮಾಡುವಾಗ ಮನಃಶಾಸ್ತ್ರಜ್ಞರು ಬಳಸುವ ಸಂವಿಧಾನ ವ್ಯಕ್ತಿಚರಿತ್ರೆಯ ಸಂವಿಧಾನ

(case history method) ಎನಿಸಿಕೊಳ್ಳುತ್ತದೆ. ಮನೋವಿಶ್ಲೇಷಣದಲ್ಲಿ ಮನೋವಿಕಾರಗಳನ್ನು ನಿರ್ದೇಶಿಸುವಾಗ ವಿಶೇಷವಾಗಿ ಈ ಸಂವಿಧಾನವನ್ನು ಬಳಸುತ್ತಾರೆ.

ಈ ಸಂವಿಧಾನಕ್ಕೆ ಸಹಕಾರಿಯಾಗಿ ಕೆಲವು ಪರೀಕ್ಷೆಗಳನ್ನೂ (tests), ಪಟ್ಟಿಕೆಗಳನ್ನೂ (schedules) ಪ್ರಶ್ನಾವಳಿಗಳನ್ನೂ (questionnaires) ವಿಶೇಷವಾಗಿ ಬಳಸುತ್ತಾರೆ. ಮೇಲಿನ ವ್ಯಕ್ತಿಚರಿತ್ರೆಯಿಂದ ತಿಳಿಯಲಾರದ ಕೆಲವು ವಿವರಗಳೂ, ವ್ಯಕ್ತಿಯ ನೆನಪಿನಲ್ಲಿರದೆ ಸುಪ್ತಚೇತನಕ್ಕೆ ಜಾರಿಕೊಂಡ ವಿವರಗಳೂ ಈ ಸಹಕಾರಿಸಾಮಗ್ರಿಯ ಮೂಲಕ ಸ್ಪಷ್ಟವಾಗುತ್ತವೆ. ವೈದ್ಯಕೀಯ ಮನಃಶಾಸ್ತ್ರವು ಇಂಥ ಕೆಲವು ಸಾಮಗ್ರಿಗಳನ್ನು ಕ್ರಮಪಡಿಸಿ ಸಿದ್ಧಪಡಿಸಿಕೊಂಡಿದೆ. ಇವುಗಳಲ್ಲಿ ರೋರ್‌ಷಾಕ್ ಮಸಿಚಿತ್ರ, ವಿಷಯ ಸಂಜ್ಞಾನಪರೀಕ್ಷೆ (Thematic Apperception test), ವಾಕ್ಯಪರಿಪೂರಣಪರೀಕ್ಷೆ (Sentence Completion Test), ವ್ಯಕ್ತಿತ್ವ ಪಟ್ಟಿಕೆ (Personality Inventory), ಮರ ಬರೆಯುವ ಪರೀಕ್ಷೆ (Draw-A-Tree Test) ಮೊದಲಾದುವು ಪ್ರಸಿದ್ಧವಾಗಿವೆ.

## ಪರಿಚ್ಛೇದ ಮೂರು

# ಶರೀರರಚನೆ ಮತ್ತು ಶರೀರಪ್ರವೃತ್ತಿಗಳು

೧

**ವ್ಯಕ್ತಿಯಲ್ಲಿ ವ್ಯವಸ್ಥೆ :**

ಆವರಣಕ್ಕೂ ವ್ಯಕ್ತಿಗೂ ಇರುವ ಸಂಬಂಧದಲ್ಲಿ ಪ್ರಚೋದನ ಪ್ರತಿಕ್ರಿಯೆಗಳ ಪರಸ್ಪರ ತುಯ್ದಾಟವಿದೆ. ಆವರಣ ಪ್ರೇರಕವಾದರೆ ವ್ಯಕ್ತಿಯಿಂದ ಪ್ರತಿಕ್ರಿಯೆ ನಡೆಯುತ್ತದೆ; ಒಬ್ಬ ವ್ಯಕ್ತಿ ಪ್ರೇರಕನಾದರೆ ಇನ್ನೊಬ್ಬ (ಅಥವಾ ಗುಂಪು) ಪ್ರತಿಕ್ರಿಯೆ ನಡೆಸುತ್ತಾನೆ. ಇದು ಸತತವಾಗಿ ನಡೆಯುತ್ತಿರುವುದರಿಂದಲೇ ಜೀವನ ಸಾಗುತ್ತದೆ. ಆವರಣದಿಂದ ಪ್ರಚೋದನೆಗಳನ್ನು ಪಡೆದು ಅವಕ್ಕೆ ತಕ್ಕಂತೆ ಪ್ರತಿಕ್ರಿಯೆ ನಡೆಸಬೇಕಾದರೆ ಗ್ರಹಣಶಕ್ತಿ, ಕ್ರಿಯಾಶಕ್ತಿ ಎರಡೂ ವ್ಯಕ್ತಿಗಿರಬೇಕು. ಪ್ರಚೋದನೆಯನ್ನು ಗ್ರಹಿಸಿ, ಅರ್ಥಮಾಡಿಕೊಂಡು ಅನುಕೂಲವಾದ ಕೆಲಸವನ್ನು ಮಾಡುವ ಸೌಲಭ್ಯ ವ್ಯಕ್ತಿಗುಂಟು. ಹೀಗೆ ಪ್ರಚೋದನ ಪ್ರತಿಕ್ರಿಯೆಗಳಿಗೆ ಅಧಿಷ್ಠಾನ ರೂಪವಾದುದು ಮನುಷ್ಯನ ಶರೀರ. ಮಾನಸಿಕಪ್ರವೃತ್ತಿಗಳಿಗೆ ಶರೀರವೇ ಆಲಂಬನ. ಈ ಕಾರಣದಿಂದ ಮನಃಶಾಸ್ತ್ರದ ವ್ಯಾಪ್ತಿಯಲ್ಲಿ ಶರೀರಶಾಸ್ತ್ರದ ವಿಚಾರವೂ ಅಗತ್ಯವಾಗಿ ಬರುತ್ತದೆ, ಆದರೆ ಅಗತ್ಯವಾದಷ್ಟು ಮಾತ್ರ.

ಪ್ರಚೋದನೆಯೆಂದರೆ ಹೊರಜಗತ್ತಿನಿಂದ ಎದ್ದುಬಂದ ಶಕ್ತಿ ನಮ್ಮ ಕಡೆ ಹರಿದು, ಇಂದ್ರಿಯಗಳನ್ನು ಮುಟ್ಟಿ, ನಮ್ಮನ್ನು ಎಚ್ಚರಗೊಳಿಸಿ, ಆ ಕಡೆ ಗಮನ

ವಿಡುವಂತೆ ನಿರ್ಬಂಧ ಮಾಡುವ ವ್ಯಾಪಾರ ವಿಶೇಷ. ಇದರಿಂದ ಪ್ರಬುದ್ಧನಾದ, ಉತ್ತೇಜಿತನಾದ ಮನುಷ್ಯ ಪ್ರತಿಕ್ರಿಯೆ ನಡೆಸದಿದ್ದರೆ ಅವನಲ್ಲಿ ಏನೋ ಆತಂಕ ವಿರುತ್ತದೆ. ಪ್ರಚೋದನೆಗೆ ಅಗತ್ಯವಾಗಿ ಪ್ರತಿಕ್ರಿಯೆ ಇರಲೇ ಬೇಕು, ಇದು ಹೋದಾಣಿಕೆಯ ಮಾತು. ಆವರಣದೊಂದಿಗೆ ಜೀವ ಸಾಮರಸ್ಯದಿಂದ ಉಳಿಯ ಬೇಕೆಂದರೆ ಪ್ರಚೋದನೆಗೆ ತಕ್ಕ ಪ್ರತಿಕ್ರಿಯೆ ಇರಲೇ ಬೇಕು. ಆವರಣಕ್ಕೂ ಜೀವಿಗೂ ಇರುವ ಪರಸ್ಪರ ಸಂಬಂಧ ಈ ಮೂಲಕವಾಗಿಯೇ. ಯಾವ ಪ್ರಚೋದನೆಗೆ ಎಂಥ ಪ್ರತಿಕ್ರಿಯೆ ಇರಬೇಕೆಂದೂ ಕುಶಲನಾದ ಜೀವಿ ನಿರ್ಧರಿಸಬೇಕಾಗುತ್ತದೆ. ಕೆಳ ವರ್ಗದ ಪ್ರಾಣಿಗಳಲ್ಲಿ ಈ ನಿರ್ಧಾರದ ಅಗತ್ಯವಿಲ್ಲ. ಮೇಲುವರ್ಗದ ಜೀವಿಗಳಲ್ಲಿ ಉಂಟು, ಅದರಲ್ಲಿಯೂ ಮನುಷ್ಯನಲ್ಲಿ ಹೆಚ್ಚಾಗಿಯೇ ಉಂಟು. ಅಗತ್ಯಕ್ಕೆ ತಕ್ಕಂತೆ ಸೌಕರ್ಯವೂ ಇರುತ್ತದೆ. ಆದುದರಿಂದಲೇ ಮೇಲುವರ್ಗದ ಪ್ರಾಣಿಗಳ, ತತ್ರಾಪಿ ಮನುಷ್ಯನ, ಶರೀರ ಅಷ್ಟು ಜಟಿಲವಾಗಿರುವುದು, ಸೂಕ್ಷ್ಮವಾಗಿರುವುದು, ಕುಶಲವಾಗಿರು ವುದು. ಶರೀರದ ರಚನೆ ಮತ್ತು ಶಾರೀರ ಪ್ರವೃತ್ತಿಗಳು ಪ್ರಚೋದನೆಯ ಗ್ರಹಣ ಅದರ ಅರ್ಥನಿಷ್ಪತ್ತಿ, ಪ್ರತಿಕ್ರಿಯೆಯ ನಿರ್ಧಾರ, ಪ್ರತಿಕ್ರಿಯೆಯ ಪ್ರಸಂಗ ಇವುಗಳ ದೃಷ್ಟಿಯಿಂದಲೇ ವ್ಯವಸ್ಥಿತವಾಗಿವೆ.

ಮನಃಶಾಸ್ತ್ರದ ದೃಷ್ಟಿಯಿಂದ ಮುಖ್ಯವಾದ ದೈಹಿಕ ವಿವರವೆಂದರೆ ನರಮಂಡಲ (Nervous system). ಈ ವಿವರದಲ್ಲಿ ನರ, ಮಸ್ತಿಷ್ಕ (brain), ಕಶೇರುಕ (Spinal cord) ಮೂರೂ ಸೇರುತ್ತವೆ; ಅವುಗಳ ಸೂಕ್ಷ್ಮರಚನೆಗಳೂ ಕ್ರಿಯೆಗಳೂ ಸೇರುತ್ತವೆ. ಈ ವಿವರವನ್ನು ಬಿಟ್ಟರೆ, ಮಾಂಸಖಂಡ, ಗ್ರಂಥಿ, ರಕ್ತಕಣ, ಹೃದಯ, ಶ್ವಾಸಕೋಶ ಮೊದಲಾದುವೂ ನಮ್ಮ ವರ್ತನೆಗೆ ನೆರವಾಗುವ ವಿವರಗಳೇ. ಇವನ್ನೆಲ್ಲ ಅರಿತರೇ ವರ್ತನೆ ಸ್ಪಷ್ಟವಾಗಿ ಅರ್ಥವಾಗುವುದು. ಆದರೆ ನರಮಂಡಲದ ಜ್ಞಾನ ತುಂಬ ಅಗತ್ಯ, ಇದರ ದೃಷ್ಟಿಯಿಂದ ಉಳಿದ ವಿವರಗಳು ಗೌಣವೆಂದರೂ ತಪ್ಪಲ್ಲ.

ನರಮಂಡಲದಲ್ಲಿ ಕೇಂದ್ರೀಯ ವ್ಯವಸ್ಥೆ (Central system), ಪರಿಸರ ವ್ಯವಸ್ಥೆ (peripheral system) ಎಂದು ಎರಡು ವಿಭಾಗಗಳನ್ನು ಮಾಡುತ್ತಾರೆ. ಕೇಂದ್ರೀಯ ವ್ಯವಸ್ಥೆಯಲ್ಲಿ ಮಿದುಳು ಮತ್ತು ಬೆನ್ನುಮೂಳೆ ಸೇರುತ್ತವೆ; ಪರಿಸರವ್ಯವಸ್ಥೆಯಲ್ಲಿ ಕ್ರಿಯಾವಾಹಿ, ಜ್ಞಾನವಾಹಿ ನರಸಮುದಾಯಗಳು ಸೇರುತ್ತವೆ. ಪ್ರತಿಕ್ರಿಯೆಗೆ ನೇರ ವಾಗಿ ಈ ನರಸಮುದಾಯಗಳು ಕಾರಣ. ನರಗಳ ಆತ್ಯಂತಿಕಸ್ಥಿತಿಯಾದ ಜೀವಕಣ (Cell)ದಲ್ಲಿ ಮೂರು ಬಗೆಗಳು—ಜ್ಞಾನವಾಹಿ (receptor), ಕ್ರಿಯಾವಾಹಿ (effector), ವ್ಯವಸ್ಥಾಪಕ (adjustor). ಜ್ಞಾನವಾಹಿ ನರಗಳು ದರ್ಶನ, ಶ್ರವಣ, ಘ್ರಾಣನ ಮೊದಲಾದ ಜ್ಞಾನೇಂದ್ರಿಯವೃತ್ತಿಗಳಿಗೆ ಸಂಬಂಧಿಸಿದುವು. ದೇಹದಲ್ಲಿ ಅವುಗಳ ಸ್ಥಾನ ಇಂದ್ರಿಯದಲ್ಲಿ ನಿರ್ದಿಷ್ಟವಾಗಿವೆ ; ಆ ನರಗಳ ಕ್ರಿಯೆಯೂ ವಿವಿಕ್ತ, ನಿರ್ದಿಷ್ಟ. ನೋಡಲು ನೆರವಾಗುವ ನರಗಳು ಕಣ್ಣಿಗೆ ಹೊಂದಿಕೊಂಡೇ ಇರುತ್ತವೆ; ಕೇಳಲು ಅನುಕೂಲ

ವಾಗುವ ನರಗಳು ಕಿವಿಗೆ ಸೇರಿದಂತೆಯೇ ಇರುತ್ತವೆ. ಒಂದೊಂದು ಜ್ಞಾನವಾಹಿನರಕ್ಕೂ ಒಂದು ಬಗೆಯ ಭೌತಿಕ ಶಕ್ತಿಪಾತವನ್ನು ಪಡೆದುಕೊಳ್ಳುವ ಸಾಮರ್ಥ್ಯವಿರುತ್ತದೆ. ಈ ಸಾಮರ್ಥ್ಯವಿರುವುದರಿಂದಲೇ ಜೀವಿ ಹೊರಗಿನ ಜಗತ್ತಿನಿಂದ ವಿಭಿನ್ನವಾದ ವೇದನೆಗಳನ್ನು ಪಡೆಯುವುದು ಸಾಧ್ಯ. ಜ್ಞಾನವಾಹಿನರಸಮುದಾಯಗಳು ನಾಲ್ಕುಬಗೆಯವು: ಉಷ್ಣಾಂಶಗ್ರಾಹಿ (ಚರ್ಮ), ಶಬ್ದ-ಸ್ಪರ್ಶಗ್ರಾಹಿ (ಕಿವಿ ಮತ್ತು ಚರ್ಮ), ರಾಸಾಯನಶಕ್ತಿಗ್ರಾಹಿ (ನಾಲಿಗೆ ಮತ್ತು ಮೂಗು), ಮತ್ತು ದೀಪ್ತಿಗ್ರಾಹಿ (ಕಣ್ಣು). ಇವುಗಳ ವೈಶಿಷ್ಟ್ಯದಿಂದಲೇ ಜ್ಞಾನೇಂದ್ರಿಯಗಳು ಉಂಟಾದುವು. ಹೊರಗಣ ಜಗತ್ತಿನ ವಿದ್ಯಮಾನಗಳನ್ನು ಮನುಷ್ಯ ತಿಳಿದುಕೊಳ್ಳಲು ಇವು ನೆರವಾಗುತ್ತವೆ. ಕೆಲವು ಜ್ಞಾನವಾಹಿನರಗಳು ಹೊರಮೈಮೇಲೆ ಹರಡಿಕೊಂಡಿರುತ್ತವೆ; ಕಣ್ಣಿನ ದೀಪ್ತಿಗ್ರಾಹಿನರಗಳು ಇಂಥವು, ಕಣ್ಣಿನಲ್ಲಿ ಹರಡಿಕೊಂಡಿವೆ ಇವು. ಇಂಥವನ್ನು ಬಾಹ್ಯಜ್ಞಾನವಾಹಿಗಳು (exteroceptors) ಎನ್ನುತ್ತಾರೆ. ಇನ್ನು ಕೆಲವು ಜೀರ್ಣಕೋಶ ಮುಂತಾದ ಅಂತರರಚನೆಯಲ್ಲಿ ಅಡಗಿರುತ್ತವೆ; ಇವು ಅಂತರಜ್ಞಾನವಾಹಿಗಳು (interoceptors) ಮತ್ತೆ ಕೆಲವು ಮಾಂಸಖಂಡಗಳಲ್ಲಿ ಬೆಳೆಯುತ್ತವೆ; ದೇಹಕ್ಕೆ ತನ್ನ ವಿಚಾರವಾಗಿಯೇ ತಿಳಿವನ್ನು ತಂದುಕೊಡುವ ಈ ನರಗಳನ್ನು ಮಾಂಸಖಂಡಸ್ಥಿತೇಂದ್ರಿಯ (proprioceptors) ಎನ್ನುತಾರೆ.

ಕ್ರಿಯಾವಾಹಿನರಸಮುದಾಯಗಳೆಂದರೆ ಮಾಂಸಖಂಡಗಳು ಮತ್ತು ಗ್ರಂಥಿಗಳು. (glands). ಮೇಲಿನ ಜ್ಞಾನವಾಹಿನರಗಳಿಂದ ಹೊರಜಗತ್ತಿನ ಬಗ್ಗೆ ಮನುಷ್ಯ ವಿವರಗಳನ್ನು ಸಂಗ್ರಹಿಸಿದರೆ, ಕ್ರಿಯಾವಾಹಿನರಗಳು ಮನುಷ್ಯ ಈ ಪ್ರಚೋದನೆಗಳಿಗೆ ತಕ್ಕಂತೆ ಕೆಲಸಮಾಡಲು ನೆರವಾಗುತ್ತವೆ. ಮಾಂಸಖಂಡಗಳಿಂದ ಕೈ, ಕಾಲು, ಬಾಯಿ ಮೊದಲಾದ ಅವಯವಗಳು ಸಮರ್ಥವಾಗುತ್ತವೆ; ಓಡಿಯಾಡುವುದು, ಹಿಡಿಯುವುದು, ಮಲಗುವುದು, ನಿಲ್ಲುವುದು, ಮಾತನಾಡುವುದು ಇವೆಲ್ಲವೂ ಕ್ರಿಯಾವಾಹಿನರಗಳಿಂದ ಉಂಟಾಗುವುವೇ. ಗ್ರಂಥಿಗಳಿಂದ ನೇರವಾಗಿ ಹೀಗೆ ಯಾವ ಕೆಲಸವೂ ಆಗುವುದಿಲ್ಲವಾದರೂ, ಅವುಗಳ ಸ್ರಾವದಿಂದ ಮನುಷ್ಯನ ಒಳಗಿನ ಆವರಣ ಸಮರ್ಥವಾಗಿ, ಸಮರ್ಪಕವಾಗಿ ಇರಲು ನೆರವಾಗುತ್ತದೆ. ಮನುಷ್ಯನ ಹೊರಗೆ ಗಾಳಿ, ಬೆಳಕು, ಜನ, ಹವಾ, ಮುಗಿಲು, ನೆಲ ಇವೆಲ್ಲ ಸೇರಿದ ಆವರಣವಿದ್ದಂತೆಯೇ ಒಳಗೆ ದೈಹಿಕ-ಮಾನಸಿಕ ಆವರಣವಿರುತ್ತದೆ; ಪ್ರತಿವ್ಯಕ್ತಿಗೂ ವಿಶಿಷ್ಟವಾದುದು ಅದು. ಈ ಒಳ ಆವರಣಕ್ಕೂ ಹೊಂದಾಣಿಕೆ ಅಗತ್ಯ. ಈ ಹೊಂದಾಣಿಕೆಯನ್ನು ಗ್ರಂಥಿಗಳು ಮಾಡುತ್ತವೆ.

ಗ್ರಂಥಿಗಳಲ್ಲಿ ಎರಡು ಬಗೆ – ಸನಾಳ (duct glands) ವಿನಾಳ (ductless glands) ಎಂದು. ಸನಾಳಗ್ರಂಥಿಗಳು ತಮ್ಮ ಸ್ರಾವವನ್ನು ದೇಹಾಂಗದೊಳಗೆ ಹುದುಗಿರುವ ನಾಳಗಳ ಮೂಲಕ ಸುರಿಸುತ್ತವೆ. ಬಾಯಿಯಿಂದ ಜೊಲ್ಲು

ಸುರಿಯುವುದು, ಕಣ್ಣಿನಿಂದ ನೀರು ಹರಿಯುವುದು, ಮೈಯಿಂದ ಬೆವರು ಚಿಮ್ಮುವುದು ಇವೆಲ್ಲ ಸನಾಳ ಗ್ರಂಥಿಗಳ ಸ್ರಾವಗಳೇ. ವಿನಾಳಗ್ರಂಥಿಗಳು ನಾಳಗಳ ನೆರವಿಲ್ಲದೆ ತಮ್ಮ ಸ್ರಾವಗಳನ್ನು ನೇರವಾಗಿ ರಕ್ತದೊಳಗೆ ಹರಿಸಬಲ್ಲುವು. ಈ ಸ್ರಾವಗಳನ್ನು ಹಾರ್ಮೋನುಗಳು ಎನ್ನುತ್ತಾರೆ. ರಕ್ತದಿಂದಲೇ ಸಾಮಗ್ರಿಯನ್ನು ಪಡೆದುಕೊಂಡು ಗ್ರಂಥಿಗಳು ದೇಹದ ಬೆಳವಣಿಗೆಗೆ, ಪೋಷಣೆಗೆ, ಆರೋಗ್ಯಕ್ಕೆ, ವ್ಯಕ್ತಿತ್ವಕ್ಕೆ ಅಗತ್ಯ ವಾದ ರಸಗಳನ್ನು ಉತ್ಪಾದನೆ ಮಾಡಿ ಅವನ್ನು ಮತ್ತೆ ರಕ್ತದೊಳಗೇ ಚೆಲ್ಲುತ್ತವೆ. ರಕ್ತದ ಮೂಲಕ ಇಡೀ ದೇಹದಲ್ಲಿ ಇದರ ಸಂಚಾರವಾಗುತ್ತದೆ. ವಿನಾಳಗ್ರಂಥಿಗಳಿಂದ ಉಂಟಾದ ಸ್ರಾವಗಳು ಹೊರಗೆ ಬರದೆ ಒಳಗೇ ಕೆಲಸಮಾಡುವುದರಿಂದ ಅವನ್ನು ಅಂತಃಸ್ರಾವ (endocrine) ಎಂದೂ, ಸನಾಳಗ್ರಂಥಿಗಳ ಸ್ರಾವಗಳು ದೇಹದ ಹೊರಗೆ ಬರುವುದರಿಂದ ಅವನ್ನು ಬಹಿಃಸ್ರಾವ (exocrine) ಎಂದೂ, ಕರೆಯು ವುದುಂಟು.

೨

## ವಿನಾಳಗ್ರಂಥಿಗಳು

ವಿನಾಳಗ್ರಂಥಿಗಳ ಸಮರ್ಪಕ ಸ್ರಾವದಿಂದ ಆರೋಗ್ಯ, ಬೌದ್ಧಿಕವಿಕಾಸ, ದೈಹಿಕ ಬೆಳವಣಿಗೆ, ಸುಖವಾದ ವ್ಯಕ್ತಿತ್ವ. ಕೌಶಲ ಮೊದಲಾದವು ಒದಗುತ್ತವೆ; ಅವುಗಳ ಸ್ರಾವದಲ್ಲಿ ಏರುಪೇರಾದರೆ ಅನಾರೋಗ್ಯ, ಮಂಕು, ದೈಹಿಕಬೆಳವಣಿಗೆಯಲ್ಲಿ ಅಸ್ತವ್ಯಸ ಸ್ಥಿತಿ, ವ್ಯಕ್ತಿತ್ವದಲ್ಲಿ ವಕ್ರತೆ, ಜಡಸ್ವಭಾವ ಇವು ಒದಗುತ್ತವೆ. ವಿನಾಳಗ್ರಂಥಿಗಳ ಸ್ರಾವ ಹೆಚ್ಚಾದರೂ ಕಮ್ಮಿಯಾದರೂ ತೊಂದರೆಯೇ; ಇದು ಚಿಕಿತ್ಸೆಗೆ ಬಗ್ಗ ತಕ್ಕದ್ದು. ವಿನಾಳಗ್ರಂಥಿಗಳಲ್ಲಿ ಪಿಟ್ಯೂಟರಿ, ಥೈರಾಯ್ಡ್, ಪ್ಯಾರಾಥೈರಾಯ್ಡ್, ಅಡ್ರೀನಲ್, ಗೊನಾಡ್, ಥೈಮಸ್, ಪಾನ್‌ಕ್ರಿಯಾಟಿಕ್, ಪಿನಿಯಲ್ ಇವು ಪ್ರಸಿದ್ಧ ವಾಗಿವೆ. ಮಿದುಳಿನ ಕೆಳಭಾಗದಲ್ಲಿ ಪಿಟ್ಯೂಟರಿಗ್ರಂಥಿ, ಕತ್ತಿನ ಕೆಳಭಾಗದಲ್ಲಿ ಗಾಳಿನಾಳದ ಮುಂದೆ ಥೈರಾಯ್ಡ್, ಅದರ ಒಳಗೇ ಪ್ಯಾರಾಥೈರಾಯ್ಡ್, ಜಠರ ಕೋಶದ ಪಕ್ಕದಲ್ಲಿ ಜೋಡಿ ಅಡ್ರೀನಲ್. ಲಿಂಗದ ಬಳಿ ಗೋನಾಡ್, ಎದೆಮೂಳೆಯ ಹಿಂಬದಿಯಲ್ಲಿ ಥೈಮಸ್, ಹೊಟ್ಟೆಯ ಹಿಂದೆ ಪಾನ್‌ಕ್ರಿಯಾಟಿಕ್, ಮಿದುಳಿನ ಹಿಂಭಾಗದಲ್ಲಿ ಪಿನಿಯಲ್–ಹೀಗೆ ಗ್ರಂಥಿಗಳು ದೇಹದಲ್ಲಿ ವ್ಯವಸ್ಥಿತವಾಗಿವೆ. ಒಂದೊಂದು ಗ್ರಂಥಿಯ ಸ್ರಾವಕ್ಕೂ ಒಂದೊಂದು ಹೆಸರುಂಟು. ಪಿಟ್ಯೂಟರಿಯ ಸ್ರಾವ ಟ್ರಾಪಿಕ್ ಹಾರ್ಮೋನ್, ಥೈರಾಯ್ಡಿನ ಸ್ರಾವ ಥೈರಾಕ್ಸಿನ್, ಅಡ್ರೀನಲ್ ನಿಂದ ಅಡ್ರಿನಾಲಿನ್ ಮತ್ತು ಕಾರ್ಟಿಸೊನ್ ಎನ್ನುವ ಸ್ರಾವಗಳು, ಇತ್ಯಾದಿ. ಈ ವಿನಾಳಗ್ರಂಥಿಗಳು ಪರಸ್ಪರಸಂಬದ್ಧವಾದುವು; ಒಂದರಲ್ಲಿ ವಿಕಾರ ಒದಗಿದರೆ ಉಳಿದವೂ ವಿಕೃತವಾಗುವ ಸಂಭವವುಂಟು. ಮನುಷ್ಯನ ಆಕಾರ, ಮನೋವೃತ್ತಿ ಸ್ವಭಾವ, ಪ್ರವೃತ್ತಿಗಳು, ಬುದ್ಧಿಶಕ್ತಿ ಎಲ್ಲವೂ ಈ ಗ್ರಂಥಿಗಳನ್ನು ಆಶ್ರಯಿಸಿಯೇ




ಚಿತ್ರ ೧
ನಿನಾಳ ಗ್ರಂಥಿಗಳು




ಚಿತ್ರ ೧

ಕೇಂದ್ರೀಯ ನರಮಂಡಲ

ಇವೆ. "ನಾವು ನಮ್ಮ ವಿನಾಳಗ್ರಂಥಿಗಳಿಗೆ ದಾಸರು, ನಮಗೆ ಬೇರೆ ಗತಿಯೇ ಇಲ್ಲ" ಎಂದು ವಿಜ್ಞಾನಿಗಳು ಇದರ ಮಹಾತ್ಮ್ಯೆಯನ್ನು ವಿವರಿಸಿದ್ದಾರೆ.

ವಿನಾಳಗ್ರಂಥಿಗಳಲ್ಲಿ ತುಂಬ ಪ್ರಭಾವಶಾಲಿಯಾದುದು ಪಿಟ್ಯೂಟರಿ. ಇದರ ಸ್ರಾವವು ಉಳಿದ ವಿನಾಳಗ್ರಂಥಿಗಳ ಕೆಲಸವು ಸರಾಗವಾಗಿ ನಡೆಯಲು ನೆರವಾಗುವುದೆಂದು ಕೆಲವರ ಅಭಿಪ್ರಾಯ; ಈ ಕಾರಣದಿಂದ ಇದನ್ನು 'ಗ್ರಂಥಿರಾಜ' (master gland) ಎಂದು ಬಣ್ಣಿಸುತ್ತಾರೆ. ಇದರ ಸ್ರಾವ ದೈಹಿಕ ಬೆಳವಣಿಗೆಯನ್ನು ನೇರವಾಗಿ ನಿರ್ಧರಿಸುತ್ತದೆ. ಸ್ರಾವ ಕಮ್ಮಿಯಾದರೆ ಕುಬ್ಜರೂ, ಸ್ರಾವ ಅತಿಯಾದರೆ ದೈತ್ಯರೂ ಆಗುವುದುಂಟು. ಸರ್ಕಸ್ಸಿನಲ್ಲಿ ವಾಮನಾವತಾರಿಗಳೂ ತ್ರಿವಿಕ್ರಮರೂ ಇರುವುದಿಲ್ಲವೆ? ಇವರ ಆಕಾರಕ್ಕೆ ಪಿಟ್ಯೂಟರಿಗ್ರಂಥಿಯೇ ಕಾರಣ. ಲಿಂಗಪ್ರವೃತ್ತಿಗೂ, ಮೂತ್ರಸ್ರಾವಕ್ಕೂ ಇವೇ ಗ್ರಂಥಿಯಿಂದ ನೆರವಾಗುತ್ತದೆ. ಈ ಗ್ರಂಥಿಯ ಒಂದು ಭಾಗದಿಂದ ಹೊರಹೊಮ್ಮುವ 'ಅಡ್ರೀನೋಕಾರ್ಟಿಕೋಟ್ರೋಪಿಕ್ ಹಾರ್ಮೋನ್' (ACTH) ಎನ್ನುವ ಸ್ರಾವ ಅಡ್ರೀನಲ್ ಗ್ರಂಥಿಯನ್ನು ಪ್ರಚೋದಿಸುತ್ತದೆ. ಇದು ಜೀವಕ್ಕೆ ತುಂಬ ಅಗತ್ಯವಾದುದು.

ಅಡ್ರೀನಲ್ ಗ್ರಂಥಿಗಳು ಜಠರ ಕೋಶದ ಎರಡೂ ಪಕ್ಕಗಳಲ್ಲಿ ಇರುತ್ತವೆ. ಒಂದೊಂದು ಅಡ್ರೀನಲ್ ಗ್ರಂಥಿಯಲ್ಲೂ ಎರಡು ಭಾಗಗಳು–ಹೊರಗಿನ ತೊಗಟೆ (cortex), ಒಳಗಿನ ಮಜ್ಜ (medulla). ತೊಗಟೆಯಿಂದ ಹರಿಯುವ ಸ್ರಾವ ಕಾರ್ಟಿನ್; ಮಜ್ಜದಿಂದ ಹರಿಯುವುದು ಅಡ್ರಿನಾಲಿನ್. ರಕ್ತದಲ್ಲಿರುವ ಸಕ್ಕರೆ ಅಂಶಕ್ಕೂ ದೇಹದಲ್ಲಿರುವ ನೀರು, ಸೋಡಿಯಂ ಇವುಗಳ ಅಂಶಕ್ಕೂ ಕಾರ್ಟಿನ್‌ಗೂ ನಿಕಟಸಂಬಂಧವುಂಟು. ಕಾರ್ಟಿನ್ ಸ್ರಾವ ಕಮ್ಮಿಯಾದರೆ ವ್ಯಕ್ತಿತ್ವವೇ ಬದಲಾಗುತ್ತದೆ. ಮನುಷ್ಯ ನಿರ್ವೀರ್ಯನಾಗಿ, ನಿರುತ್ಸುಕನಾಗಿ, ದುರ್ಬಲನಾಗಿಬಿಡುತ್ತಾನೆ. ಹೆಚ್ಚಾದರೆ ಹೆಂಗಸಿಗೂ ಗಂಡಸಿನ ಲಕ್ಷಣ ಬರುತ್ತದೆ. ಮನಃಶಾಸ್ತ್ರ ದೃಷ್ಟಿಯಿಂದ ಅಡ್ರಿನಾಲಿನ್ ತುಂಬ ಸ್ವಾರಸ್ಯವಾದುದು. ಕೋಪ, ಭಯ ಮೊದಲಾದ ಸಂದರ್ಭಗಳಲ್ಲಿ ಈ ಸ್ರಾವ ಹೆಚ್ಚಾಗಿ ಸುರಿಯುತ್ತದೆ; ಭಾವಗಳ ಅಭಿವ್ಯಕ್ತಿಗೂ, ಈ ಸಮಯದಲ್ಲಿ ವಿಶೇಷವಾದ ಧೈರ್ಯ, ಶೌರ್ಯ, ಕ್ರಿಯಾಶೀಲತೆ ಇವುಗಳಿಗೂ ಈ ಅತಿಸ್ರಾವ ಕಾರಣ. ಈ ಸ್ರಾವ ಹೆಚ್ಚಾದರೆ ರಕ್ತದ ಒತ್ತಡ ಏರುತ್ತದೆ, ರಕ್ತದಲ್ಲಿ ಕಾವು ಹೆಚ್ಚುತ್ತದೆ, ಉಳಿದಂತೆ ದೈಹಿಕ ವಿಕಾರಗಳೂ ಕಾಣಿಸಿಕೊಳ್ಳುತ್ತವೆ. ಭಯದಲ್ಲಿ ಓಡುವ ಶಕ್ತಿ, ಕೋಪದಲ್ಲಿ ಆರ್ಭಟ ಮಾಡಿ ಅನರ್ಥಗಳನ್ನು ಉಂಟುಮಾಡುವ ಶಕ್ತಿ, ಆತಂಕದಲ್ಲಿ ಶಕ್ತಿಮೀರಿ ಕೆಲಸಮಾಡುವ ಉತ್ಸಾಹ ಇವಕ್ಕೆಲ್ಲ ಈ ಸ್ರಾವವೇ ಕಾರಣ. ಉತ್ಕಟಾವಸ್ಥೆಯಲ್ಲಿ, ವಿಷಮಸಂದರ್ಭದಲ್ಲಿ, ಸಂಕಟ ಪ್ರಸಂಗದಲ್ಲಿ ನಮ್ಮ ನೆರವಿಗೆ ಬರುವುದು ಇದೇ ಸ್ರಾವ.

ಥೈರಾಯ್ಡ್ ಗ್ರಂಥಿಯ ಸ್ರಾವ ಥೈರಾಕ್ಸಿನ್ ಎನಿಸಿಕೊಳ್ಳುತ್ತದೆ. ದೇಹದ ಪೋಷಣೆಗೆ ಅಗತ್ಯವಾದ ಎಲ್ಲ ರಸಗಳೂ ಈ ಸ್ರಾವದಲ್ಲಿ ಸೇರಿವೆಯೆಂದು ಹೇಳುತ್ತಾರೆ.

ದೇಹವು ಪ್ರತಿ ಕ್ಷಣದಲ್ಲಿಯೂ ಬೆಳೆಯುತ್ತ, ಅಳಿಯುತ್ತ ಇರುತ್ತದೆ; ಜೀವಕಣಗಳು ಹುಟ್ಟುತ್ತಿರುತ್ತವೆ, ಜೀವಕಣಗಳು ಸಾಯುತ್ತಿರುತ್ತವೆ. ಈ ನಿರ್ಮಾಣ-ಕ್ಷಯ ಎರಡೂ ವಿರುದ್ಧ ಕ್ರಿಯೆಗಳಾದರೂ ಒಂದೇ ಶರೀರಪ್ರವೃತ್ತಿಯ ಅವಶ್ಯ ಅಂಗಗಳು, ಎರಡೂ ಸಮನಾಗಿ ನಡೆದರೇ ಬದುಕು; ಈ ಪ್ರವೃತ್ತಿಗೆ 'ಮೆಟಬಾಲಿಸಂ' ಎಂದು ಹೆಸರು. ಇದು ನಡೆಯಲು ಥೈರಾಕ್ಸಿನ್ ನೆರವಾಗುತ್ತದೆ. ಈ ಸ್ರಾವ ಸಾಕಷ್ಟು ಇಲ್ಲದಿದ್ದರೆ ಬೆಳವಣಿಗೆ ಕುಗ್ಗುತ್ತದೆ, ಮಾಂಸ ಖಂಡಗಳು ದುರ್ಬಲವಾಗುತ್ತವೆ, ಮಿದುಳು ಸರಿಯಾಗಿ ಬೆಳೆಯುವುದಿಲ್ಲ. ವಯಸ್ಸಾಗಿದ್ದರೂ ತೀರ ಕುಳ್ಳಾಗಿದ್ದು, ಮಂಕು ಮಂಕಾಗಿರುವ ಮನುಷ್ಯರನ್ನು ಕಾಣಬಹುದು; ಇದು ಕ್ರೆಟಿನಿಸಂ ಎಂಬ ರೋಗ. ಇದಕ್ಕೂ ಥೈರಾಕ್ಸಿನ್ ಸ್ರಾವ ಕಮ್ಮಿಯಾಗಿರುವುದು ಕಾರಣ. ಈ ಸ್ರಾವ ಸಾಕಷ್ಟಿಲ್ಲದಿದ್ದರೆ ಮನುಷ್ಯ ಅಲಸಿಕನಾಗಿ, ಯಾವ ಕೆಲಸಕ್ಕೂ ಉತ್ಸಾಹವಿಲ್ಲದೆ, ಸಪ್ಪೆಯಾಗಿರುತ್ತಾನೆ. ಆದರೆ ಥೈರಾಕ್ಸಿನ್ನಿನ ಅತಿ ಸ್ರಾವದಿಂದ ಮನುಷ್ಯನಿಗೆ ಕಾತರ, ಉತ್ಕಂಠೆ, ಬಿಕ್ಕಟ್ಟು, ಒತ್ತಡ ಇವು ಒದಗುತ್ತವೆ; ಏನು ಮಾಡಬೇಕೆಂದು ತಿಳಿಯದೆ ಅಡ್ಡಾಡುತ್ತಾನೆ, ಬೇಗ ಸಿಟ್ಟಿಗೇಳುತ್ತಾನೆ, ಅವನ ಚಿತ್ತ ಸ್ಥಿರವಾಗಿರುವುದಿಲ್ಲ. ಈ ಸ್ರಾವ ಹೆಚ್ಚುಕಮ್ಮಿಯಾದರೆ ಅದನ್ನು ಸರಿಪಡಿಸುವುದು ವೈದ್ಯರಿಗೆ ಸಾಧ್ಯ. ಕಮ್ಮಿಯಾದಾಗ ಥೈರಾಕ್ಸಿನ್ನನ್ನು ಕೃತಕವಾಗಿ ಕೊಡುತ್ತಾರೆ; ಹೆಚ್ಚಾದಾಗ ಈ ಗ್ರಂಥಿಗೆ ಶಸ್ತ್ರ ಚಿಕಿತ್ಸೆ ಮಾಡುತ್ತಾರೆ, ಇಲ್ಲವೇ ರೇಡಿಯಂ ಪ್ರಯೋಗ ಮಾಡುತ್ತಾರೆ.

ಗೋನಾಡ್ ಗ್ರಂಥಿಗಳು ಲೈಂಗಿಕಜೀವನಕ್ಕೆ ಸಂಬಂಧಿಸಿದ್ದು. ಇವು ಸನಾಳ, ವಿನಾಳ ಎರಡೂ ಬಗೆಯಲ್ಲಿವೆ. ವಿನಾಳಸ್ಥಿತಿಯಲ್ಲಿ ಕಾಮರಸಸ್ರಾವ ಇದರಿಂದ ಉಂಟಾಗುತ್ತದೆ. ಪುರುಷರಲ್ಲಿ ಶಿಶ್ನವೂ ಸ್ತ್ರೀಯರಲ್ಲಿ ಯೋನಿಯೂ ಈ ಗ್ರಂಥಿಗಳ ಕಾರ್ಯಕ್ಷೇತ್ರ. ಗಂಡಸಿಗೆ ಗಡ್ಡ–ಮೀಸೆ, ದೃಢಕಾಯ ಮೊದಲಾದವೂ ಹೆಂಗಸಿಗೆ ಸ್ತನ, ಮಾರ್ದವ, ಲಾವಣ್ಯ ಮೊದಲಾದುವೂ ಈ ಸ್ರಾವದಿಂದಲೇ ಒದಗುತ್ತವೆ. ಕಾಮವಿಕಾರಕ್ಕೆ ಈ ಸ್ರಾವವೇ ಕಾರಣ. ಸ್ರಾವದಲ್ಲಿ ಅಸ್ತವ್ಯಸ್ತವಾದರೆ ಹೆಂಗಸಿಗೆ ದೃಢಕಾಯ, ಗಡ್ಡ-ಮೀಸೆ ಬರಬಹುದು, ಅವಳ ಧ್ವನಿ ಗಡುಸಾಗಬಹುದು, ಮನೋವೃತ್ತಿಯೂ ಮಾರ್ಪಡಬಹುದು; ಗಂಡಸು ಹೆಂಗಸಿನ ಸ್ವಭಾವವನ್ನು ತಳೆದಾನು. ಥೈಮಸ್ ಗ್ರಂಥಿಯ ಸ್ರಾವವೂ ಕಾಮವಿಕಾರಕ್ಕೆ ಸಂಬಂಧಪಟ್ಟದ್ದೇ.

ಉಳಿದ ಗ್ರಂಥಿಗಳು ಮನಃಶಾಸ್ತ್ರದ ದೃಷ್ಟಿಯಲ್ಲಿ ಮುಖ್ಯವೆನಿಸಿಲ್ಲ. ಪ್ಯಾನ್‌ಕ್ರಿಯಾಟಿಕ್ ಗ್ರಂಥಿಯು ತಿಂದ ಆಹಾರ ಜೀರ್ಣವಾಗಲು ನೆರವಾಗುತ್ತದೆ; ಇನ್‌ಸುಲಿನ್ ಎಂಬ ಸ್ರಾವದಿಂದ ದೇಹದಲ್ಲಿನ ಸಕ್ಕರೆ ರಕ್ತದಲ್ಲಿಯೇ ಸೇರದಂತೆ ಮಾಡಿ ಉಳಿದ ಮಾಂಸಾವಯವಗಳಿಗೂ ದಕ್ಕುವಂತೆ ವ್ಯವಸ್ಥೆ ಮಾಡುತ್ತದೆ. ನರಮಂಡಲವು ಮಿತಿಮೀರಿ ಉದ್ರೇಕ ಗೊಳ್ಳುವುದನ್ನು ಪ್ಯಾರಾಥೈರಾಯ್ಡ್ ತಪ್ಪಿಸುತ್ತದೆ. ಪೀನಿಯಲ್ ಗ್ರಂಥಿಯ ಪ್ರಯೋಜನವೇನೆಂಬುದು ಈವರೆಗೆ ತಿಳಿದುಬಂದಿಲ್ಲ.

ಅಂತೂ ಈ ಗ್ರಂಥಿಗಳು ಮನುಷ್ಯನ ವ್ಯಕ್ತಿತ್ವವನ್ನು ರೂಪಿಸಲು ನೆರವಾಗುತ್ತವೆ. ಗ್ರಂಥಿಗಳ ವಿಕಾರದಿಂದ ವರ್ತನೆಯಲ್ಲಿ ಏರುಪೇರು ಕಾಣುತ್ತದೆ, ವ್ಯಕ್ತಿತ್ವ ಕುಂಠಿತ ವಾಗುತ್ತದೆ, ಮನೋವೃತ್ತಿ ಮಾರ್ಪಡುತ್ತದೆ, ಸಾಮರ್ಥ್ಯ ಕುಗ್ಗುತ್ತದೆ. ಆದರೆ ಹೀಗೆ ಆದಾಗೆಲ್ಲ ಗ್ರಂಥಿಗಳ ವಿಕಾರವೇ ಕಾರಣ ಎನ್ನಲಾಗುವುದಿಲ್ಲ; ಬೇರೆ ಕಾರಣಗಳೂ ಹಲವಾರು ಇರಬಹುದು.

೩

## ಕೇಂದ್ರ ನರಮಂಡಲ

ಹೊರಗಿನಿಂದ ಪ್ರಚೋದನೆಯನ್ನು ಪಡೆದು, ಸೂಕ್ತವಾದ ಪ್ರತಿಕ್ರಿಯೆಯನ್ನು ಮಾಡಲು ದೇಹದಲ್ಲಿ ವ್ಯವಸ್ಥೆಯಿರಬೇಕಾದುದು ಮುಖ್ಯ. ಈ ವ್ಯವಸ್ಥೆ ಕೇಂದ್ರ ನರಮಂಡಲದ ಮೂಲಕ ನಡೆಯುತ್ತದೆ. ಕೇಂದ್ರ ನರಮಂಡಲವೆಂದರೆ ಮಸ್ತಿಷ್ಕ ಮತ್ತು ಕಶೇರುಕ. ಬಾಹ್ಯಜಗತ್ತಿನ ಪ್ರಚೋದನೆಯ ಫಲವಾಗಿ ದೇಹದಲ್ಲಿ ಒದಗಿದ ಜ್ಞಾನವಾಹಿ ಪ್ರವೃತ್ತಿ ಇಲ್ಲಿಯೇ ಪರ್ಯವಸಾನವಾಗಿ, ಕ್ರಿಯಾವಾಹಿ ಪ್ರವೃತ್ತಿಗಳು ಇಲ್ಲಿಂದಲೇ ಆರಂಭವಾಗುತ್ತವೆ (ಚಿತ್ರ-೨). ಜ್ಞಾನದ ತಾತ್ಪರ್ಯ ಇಲ್ಲಿಯೇ ಫಲಿತವಾಗಿ, ಕ್ರಿಯೆಗೆ ನಿರ್ಧಾರವೂ ಇಲ್ಲಿಯೇ ಆಗುತ್ತದೆ. ಕೈ, ಕಾಲು, ಮಾತು ಇವು ಹಿಡಿಯಲು, ಓಡಾಡಲು, ಮಾತನಾಡಲು ಅಪ್ಪಣೆ ದೊರಕುವುದು ಇಲ್ಲಿಂದಲೇ. ದೇಹದ ಅಗತ್ಯವನ್ನರಿತು ತಾವಾಗಿ ಜರಗುವ ಪ್ರತಿಕ್ಷೇಪ ಕ್ರಿಯೆಗಳೂ, ನಾವಾಗಿ ಬುದ್ಧಿ ಪೂರ್ವಕವಾಗಿ ನಿರ್ಧರಿಸಿದ ಕೆಲಸಗಳೂ ಇಲ್ಲಿಂದಲೇ ಮೊದಲಾಗುತ್ತವೆ. ಜ್ಞಾನೇಂದ್ರಿಯ ಗಳ ಸಂದೇಶವನ್ನು ಸ್ವೀಕರಿಸುವುದು, ಕರ್ಮೇಂದ್ರಿಯಗಳಿಗೆ ಆದೇಶವನ್ನಿತ್ತು ಮಾರ್ಗ ದರ್ಶನಮಾಡುವುದು ಇದೇ ಪ್ರಚೋದನೆ-ಪ್ರತಿಕ್ರಿಯೆಗಳ ನಡುವೆ ಇರುವ ವ್ಯವಸ್ಥೆ.

ಈ ವ್ಯವಸ್ಥೆಯಲ್ಲಿ ಮೂಲಭೂತ ವಿವರವೆಂದರೆ ನರ. ನರಕ್ಕೆ ಒಂದು ಸರಳ ರಚನೆಯುಂಟು, ನರಪ್ರವಾಹವೂ ಉಂಟು. ನರಗಳ ವ್ಯವಸ್ಥೆಯಲ್ಲಿ ಕೇಂದ್ರೀಯ (central) ಮತ್ತು ಪರಿಸರ (peripheral) ಎಂದು ಎರಡು ಬಗೆಗಳೆಂದು ಮೊದಲೇ ತಿಳಿದೆವಲ್ಲವೆ ? ಒಳಗೆ ಬರುವ ಮತ್ತು ಹೊರಗೆ ಹೋಗುವ ಕೆಲಸದಲ್ಲಿ ಸನ್ನದ್ಧವಾದ ನರಪ್ರವಾಹಗಳು ಪರಿಸರನರಮಂಡಲದ ಮುಖ್ಯವಿವರ. ಇಲ್ಲಿ ಒಳಗೆ ಬರುವ ಅಭಿಗಮನರಗಳು (affarent nerves) ಜ್ಞಾನೇಂದ್ರಿಯ ದಿಂದ ಹೊರಟ ಸಂದೇಶವನ್ನು ಮಸ್ತಿಷ್ಕ ಅಥವಾ ಕಶೇರುಕಕ್ಕೆ ಮುಟ್ಟಿಸುತ್ತವೆ; ಹೊರಗೆ ಬರುವ ಪ್ರತಿಗಮನರಗಳು (efferent nerves) ಮಸ್ತಿಷ್ಕದಿಂದ ಅಥವಾ ಕಶೇರುಕದಿಂದ ಆದೇಶವನ್ನು ಕರ್ಮೇಂದ್ರಿಯಗಳಿಗೆ ಒಯ್ಯುತ್ತವೆ. ಮೊದಲನೆಯ ನರಗಳನ್ನು ಐಂದ್ರಿಯ (sensory) ಎಂದೂ ಎರಡನೆಯವನ್ನು ಕಾರ್ಮಿಕ (motor) ಎಂದೂ ನಿರ್ದೇಶಿಸುವ ವಾಡಿಕೆಯಿದೆ. ಮೆದುಳು ಮತ್ತು ಬೆನ್ನು ಮೂಳೆ ಇವುಗಳಿಂದ ಹೊರಗಿರುವ ಎಲ್ಲ ನರ ಸಮುದಾಯಗಳೂ ಪರಿಸರ ನರಮಂಡಲದಲ್ಲಿ ಸೇರುತ್ತವೆ.

ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳಿಗೂ ಕೇಂದ್ರೀಯ ನರಮಂಡಲಕ್ಕೂ ಸಂಬಂಧವನ್ನು ಕಲ್ಪಿಸುವುದೇ ಪರಿಸರ ವ್ಯವಸ್ಥೆಯ ಉದ್ದೇಶ.

ಕೇಂದ್ರೀಯ ನರಮಂಡಲವು ಕಪಾಲ ಮತ್ತು ಬೆನ್ನುಹುರಿಯೆನಿಸಿಕೊಳ್ಳುವ ಮೂಳೆಗಳಲ್ಲಿ ಅಡಗಿದೆ. ಕಪಾಲವು ಮಸ್ತಿಷ್ಕವನ್ನು ಎಂದರೆ ಮೆದುಳನ್ನು ಒಳಗಿರಿಸಿ ಕೊಂಡಿರುವ ಪಟ್ಟಿಗೆ. ಬೆನ್ನುಹುರಿ ಕಪಾಲದ ಕೆಳಭಾಗದಲ್ಲಿ ಜೋತುಬಿದ್ದಿರುವ ಹಗ್ಗದಂತಿದೆ ; ಒಂದರಮೇಲೊಂದಿಟ್ಟು ಬೇರೆಬೇರೆ ಮೂಳೆಗಳಿಂದ ಮಾಡಿರುವ ಈ ಹಗ್ಗದ ಮಧ್ಯೆ ಕಶೇರುಕ ಹರಿಯುತ್ತದೆ. ಬೆನ್ನು ಮೂಳೆಗಳ ನಡುವೆ ಕಶೇರುಕನರಗಳು ಹುರಿಯೊಳಗೆ ಸೇರುತ್ತವೆ. ಪ್ರತಿಯೊಂದು ನರಕ್ಕೂ ಬೆನ್ನಿನಕಡೆ ಹೋಗುವ ಹಿಂಬದಿ ಬೇರು (dorsal root) ಮತ್ತು ಹೊಟ್ಟೆಯಕಡೆ ಬರುವ ಮುಂಬದಿ ಬೇರು (ventral root) ಇರುತ್ತವೆ. ಹಿಂಬದಿಯದು ಜ್ಞಾನವಾಹಿಗೆ ಸಂಬಂಧಪಟ್ಟದ್ದು ; ಮುಂಬದಿಯದು ಕ್ರಿಯಾವಾಹಿಗೆ ಸಂಬಂಧಪಟ್ಟದ್ದು. ಹಿಂಬದಿಯ ಕಶೇರುಕ ನರಗಳು ಕಡಿದು ಹೋದರೆ ಆಯಾ ಭಾಗದಿಂದ ಯಾವ ಸಂವೇದನೆಯೂ ಒದಗಲಾರದು, ಆ ಭಾಗ ಜಡವಾಗಿಬಿಡುತ್ತದೆ. ಮುಂಬದಿಯ ನರಗಳು ಶಿಥಿಲವಾದರೆ, ಅದಕ್ಕೆ ಸಂಬಂಧಪಟ್ಟ ಶರೀರಭಾಗ ಕ್ರಿಯಾಹೀನವಾಗಿಬಿಡುತ್ತದೆ ; ಪಾರ್ಶ್ವವಾಯು (ಲಕ್ವ) ಎನ್ನುವ ರೋಗ ಹೀಗೆಯೇ ಒದಗುವುದು.

ಕಶೇರುಕದ ವ್ಯವಸ್ಥೆಯನ್ನು ಪರಿಶೀಲಿಸಿದರೆ ಅದರ ಕೆಲಸ ಜ್ಞಾನೇಂದ್ರಿಯದಿಂದ ಸಂದೇಶವನ್ನು ಮಸ್ತಿಷ್ಕಕ್ಕೂ ಮಸ್ತಿಷ್ಕದಿಂದ ಆದೇಶವನ್ನು ಮಾಂಸಖಂಡಗಳಿಗೂ ಮುಟ್ಟಿಸುವುದೇ ಎನ್ನುವುದು ಸ್ಪಷ್ಟವಾಗುತ್ತದೆ. ಸಂದೇಶವಾಹಕ ನರವ್ಯವಸ್ಥೆ ಇದರ ಮುಖ್ಯ ಲಕ್ಷಣ. ಕಶೇರುಕವು ಮಸ್ತಿಷ್ಕಕ್ಕೆ ಪೂರಕವಾಗಿಯೇ ಕೆಲಸ ಮಾಡುತ್ತದೆ ; ಈ ಕಾರಣದಿಂದಲೇ ಎರಡನ್ನೂ ಒಟ್ಟಿಗೆ ಸೇರಿಸಿ ಕೇಂದ್ರೀಯ ನರಮಂಡಲವೆನ್ನುವುದು. ಮಸ್ತಿಷ್ಕದ ಆದೇಶವನ್ನು ಅನುಸರಿಸದೆ ನಡೆಯುವ ಪ್ರತಿಕ್ಷೇಪವ್ಯಾಪಾರಗಳು (reflex action) ಕಶೇರುಕದ ನೆಲೆಯಲ್ಲಿಯೇ ನಡೆಯುತ್ತವೆ.

೪

## ಮಸ್ತಿಷ್ಕ

ಕಶೇರುಕದ ಶಿರೋಭಾಗದಲ್ಲಿ ಮಸ್ತಿಷ್ಕವಿದೆ. ಮಸ್ತಿಷ್ಕ ತುಂಬ ಸುವ್ಯವಸ್ಥಿತವಾದರೂ, ಜಟಿಲವಾದ, ಸೂಕ್ಷ್ಮವಾದ ಅಂಗ. ಮಸ್ತಿಷ್ಕ ಅಥವಾ ಮೆದುಳನ್ನು ಮುಮ್ಮೆದುಳು, ನಡುಮೆದುಳು, ಹಿಮ್ಮೆದುಳು ಎಂದು ವಿಭಾಗಮಾಡುವ ವಾಡಿಕೆಯಿದೆ. ದೇಹ ವಿಜ್ಞಾನಿಗಳು ಮಸ್ತಿಷ್ಕವನ್ನು ಮೆಡ್ಯುಲ, ಸೆರಿಬೆಲಂ, ಮಧ್ಯಮಸ್ತಿಷ್ಕ. ಥ್ಯಾಲಮಸ್, ಸೆರಿಬ್ರಮ್ ಎಂದು ವಿಭಾಗಮಾಡುತ್ತಾರೆ. (ಚಿತ್ರ-೩) ಕಶೇರುಕದ ಮೇಲುತುದಿ ದಂಟಿನಂತೆ ದಪ್ಪವಾಗಿ ಮಸ್ತಿಷ್ಕಕ್ಕೆ ಕೆಳಹಿಡಿಯಂತೆ ಇರುವ ಭಾಗ ಮೆಡ್ಯುಲ ಎನಿಸಿಕೊಳ್ಳುತ್ತದೆ. ಕಶೇರುಕದ ಒಳಗೆ ಹೋಗದ ನರಗಳೆಲ್ಲ ಕೇಂದ್ರೀಯನರಮಂಡಲಕ್ಕೆ ಈ ಮೆಡ್ಯುಲ






ಚಿತ್ರ ೩




ಚಿತ್ರ ೪ (೧)




ಚಿತ್ರ ೪ (೨)
ಮಸ್ತಿಷ್ಕದ ಭಾಗಗಳು ಮತ್ತು ಅಂಗಗಳು

ಮೂಲಕವೇ ನೇರವಾಗಿ ಸೇರುತ್ತವೆ; ಇವಕ್ಕೆ ಶಿರೋನರಗಳು (cranial nerves) ಎಂದು ಹೆಸರು. ಮಸ್ತಿಷ್ಕಕ್ಕೆ ಸಂದೇಶಗಳನ್ನೊಯ್ಯುವುದು, ಅದರಿಂದ ಆದೇಶಗಳನ್ನು ಪಡೆದು ಕ್ರಿಯಾಂಗಗಳಿಗೆ ಕಳುಹಿಸುವುದು ಈ ಭಾಗದ ಕೆಲಸ. ಹೃದಯಕ್ರಿಯೆ, ಶ್ವಾಸೋಚ್ಛ್ವಾಸ ಇವನ್ನೂ ಈ ಭಾಗ ನೋಡಿಕೊಳ್ಳುತ್ತದೆ. ಮೆಡ್ಯುಲಕ್ಕೆ ಘಾಸಿಯಾದರೆ ಮನುಷ್ಯ ಬದುಕಲಾರ.

ಸೆರಿಬೆಲಂ ಎನ್ನುವ ಭಾಗ ಮೆಡ್ಯುಲದ ಮೇಲ್ಭಾಗದಲ್ಲಿದೆ. ಸೆರಿಬೆಲಂ ಎನ್ನುವ ಮಾತಿಗೆ ಚಿಕ್ಕಮೆದುಳು ಎಂದರ್ಥ. ಇದು ಮೆಡ್ಯುಲದೊಂದಿಗೆ ತುಂಬ ಹೊಂದಿಕೊಂಡಿದೆ. ಕಶೇರುಕದಿಂದ ಮೇಲೆ ಹೋಗುವ, ಕೆಳಕ್ಕೆ ಬರುವ ನರವಾಹಿನಿಗಳೂ ಇದರಲ್ಲಿವೆ. ದೇಹದ ಹಲವಾರು ಭಾಗಗಳಲ್ಲಿ ನಡೆಯುವ ಪ್ರತಿಕ್ಷೇಪಕ್ರಿಯೆಗಳ ಹೊಂದಾಣಿಕೆ ಸೇರಿಬೆಲಂನಿಂದಲೇ ಒದಗುತ್ತದೆ. ಮಾತನಾಡುವಾಗ, ಬರೆಯುವಾಗ, ನಡೆಯುವಾಗ, ಈಜುವಾಗ ಈ ಮಸ್ತಿಷ್ಕಭಾಗ ಕೆಲಸಮಾಡುತ್ತದೆ; ಆದುದರಿಂದಲೇ ನಾವು ಆಯತಪ್ಪದೆ ಇರುತ್ತೇವೆ. ಸೆರಿಬೆಲಂ ಸಮರ್ಥವಾಗಿರುವುದರಿಂದಲೇ ನೃತ್ಯ, ಗಾನ, ಪಂದ್ಯ ಮೊದಲಾದವು ಸಾಧ್ಯವಾಗಿವೆ. ಸಾಮಾನ್ಯವಾಗಿ ನಮ್ಮ ಸುವ್ಯವಸ್ಥಿತ ಕೆಲಸಗಳಿಗೆಲ್ಲ ಈ ಭಾಗವೇ ಕಾರಣ.

ಮಧ್ಯಮಸ್ತಿಷ್ಕ (midbrain) ಎನ್ನುವ ಭಾಗ ಕ್ರಿಯಾತ್ಮಕ ಪ್ರತಿಕ್ಷೇಪಗಳಿಗೆ ಕಾರಣವೆಂದು ಹೇಳುತ್ತಾರೆ. ಥ್ಯಾಲಮಸ್ ಎನ್ನುವುದು ಮಸ್ತಿಷ್ಕದ 'ರಿಲೇಸ್ಟೇಷನ್'; ಸಂದೇಶವಾಹಕನರಗಳು ಮಸ್ತಿಷ್ಕದ ಉಚ್ಚಭಾಗವಾದ ಸೆರಿಬ್ರಂನ ನಿಯತ ಪ್ರದೇಶಕ್ಕೆ ಮುಟ್ಟಿ ಅಲ್ಲಿ ಮುದ್ರಿತವಾದರೇ ಜ್ಞಾನ ನಿರ್ದಿಷ್ಟವಾಗುವುದು; ಕ್ರಿಯೆ ಸಾಧ್ಯವಾಗುವುದು. ಈ ಕೆಲಸ ಥ್ಯಾಲಮಸ್‌ನಿಂದಲೇ ನಡೆಯುತ್ತದೆ. ಕೆಳವರ್ಗದ ಪ್ರಾಣಿಗಳಲ್ಲಿ ಇದೇ ಇಂದ್ರಿಯಸಂವೇದಕ ಅಂಗ; ನಮ್ಮಲ್ಲಿ ಸೆರಿಬ್ರಮ್ ಮಾಡುವ ಕೆಲಸ ಈ ಪ್ರಾಣಿಗಳಲ್ಲಿ ಥ್ಯಾಲಮಸ್ ಮಾಡುತ್ತದೆ.

ಸೆರಿಬ್ರಮ್ ಎನ್ನುವುದು ಮನುಷ್ಯವರ್ಗದಲ್ಲಿ ವಿಶೇಷವಾಗಿ ಬೆಳೆದಿರುವ ಮಸ್ತಿಷ್ಕ ಭಾಗ. ಕಪಾಲದ ಒಳಗೆ ಮಸ್ತಿಷ್ಕದ ಬಹುಭಾಗವೆಲ್ಲ ಈ ಭಾಗವೇ; ಇದರಷ್ಟು ವಿಶಾಲವಾದ ಮಸ್ತಿಷ್ಕಭಾಗ ಮತ್ತೊಂದಿಲ್ಲ. ಕಪಾಲದ ನಿಯತಸ್ಥಳದಲ್ಲಿ ಇಷ್ಟುವ್ಯಾಪ್ತವಾದ ಭಾಗ ಇರುವುದೇ ಒಂದು ಅದ್ಭುತ. ಇದರಿಂದಲೇ ಮನುಷ್ಯನ ಮಾನಸಶಕ್ತಿ ಇಷ್ಟು ಹೆಚ್ಚಾಗಿರುವುದು. ಸೆರಿಬ್ರಮ್‌ನಲ್ಲಿ ಎರಡು ಭಾಗಗಳಿವೆ; ಇವಕ್ಕೆ ಶಿರೋಗೋಳಗಳು (cerebral hemispheres) ಎಂದು ಹೆಸರು. ಬಲ ಭಾಗದ ಶಿರೋಗೋಳ ದೇಹದ ಎಡಭಾಗವನ್ನೂ, ಎಡಶಿರೋಗೋಳ ದೇಹದ ಬಲಭಾಗವನ್ನೂ ನೋಡಿಕೊಳ್ಳುತ್ತವೆ. ಎರಡೂ ಗೋಳಗಳ ನಡುವೆ ಇರುವ 'ಕಾರ್ಪಸ್ ಕಲೋಸಂ' ಎನ್ನುವ ನರತಂತುಗಳ ಸೇತುವೆ ಬಿಳಿವಸ್ತು (white matter) ವಿಗೆ ಆಕಾರ. ಗೋಳಗಳ ಹೊರಭಾಗದಲ್ಲಿ ಬೂದುವಸ್ತು (grey matter)

ಹರಡಿರುತ್ತದೆ; ಇದನ್ನು ಮೆದುಳಿನ ಹೊದಿಕೆ (cerebral cortex) ಎನ್ನುತ್ತಾರೆ. ಈ ಹೊದಿಕೆಗೆ ಹಲವು ಮಡಿಕೆಗಳಿವೆ, ಮಡಿಕೆಗಳ ನಡುವೆ ಆಳವಾದ ಕಮರಿಗಳಂತಿರುವ 'ಗೈರಿ' ಗಳಿರುತ್ತವೆ. ಮನುಷ್ಯನ ಬುದ್ಧಿಶಕ್ತಿ ಈ 'ಗೈರಿ' ಗಳಿಂದಲೇ ಉಂಟಾದುದು. ಮಡಿಕೆಗಳು ಹೆಚ್ಚಿದ್ದಷ್ಟೂ ಬುದ್ಧಿಶಕ್ತಿ ಹೆಚ್ಚು. [ ಚಿತ್ರ–೪ (೧) ]

ಸೆರಿಬ್ರಮ್‌ನಲ್ಲಿ ನಾಲ್ಕು ಕ್ಷೇತ್ರ (lobes) ಗಳನ್ನು ನಿರ್ದೇಶಿಸುತ್ತಾರೆ. ಒಂದೊಂದೂ ಒಂದೊಂದು ಇಂದ್ರಿಯಸಂವೇದನೆಗೆ ಅಥವಾ ಕ್ರಿಯೆಗೆ ನಿಯತವಾದುದು. ಹಣೆಯ ಹಿಂಬದಿಯಲ್ಲಿರುವ ಮುಖಕ್ಷೇತ್ರದಲ್ಲಿ (frontal lobe) ಎಲ್ಲ ದೈಹಿಕಕ್ರಿಯೆಗಳೂ ನಿರ್ದಿಷ್ಟವಾಗುತ್ತವೆ. ಪರೀಟಲ್ ಕ್ಷೇತ್ರ ಸ್ಪರ್ಶ ಮತ್ತು ಮಾಂಸ ಖಂಡಗಳ ಸಂವೇದನೆಗೆ ಸಂಬಂಧಿಸಿದುದು. ಆಕ್ಸಿಪಿಟಲ್‌ಕ್ಷೇತ್ರ ದರ್ಶನಕ್ಕೆ ಸೀಮಿತವಾದುದು. ಟೆಂಪೊರಲ್‌ಕ್ಷೇತ್ರ ಶ್ರವಣಕ್ಕೆ ಸಂಬಂಧಿಸಿದುದು; ಇದೇ ಕ್ಷೇತ್ರದ ಕೆಳಭಾಗದಲ್ಲಿ ರಸನ ಮತ್ತು ಘ್ರಾಣನಗಳ ಕೇಂದ್ರವಿದೆ. ಕೇಂದ್ರೀಯ ನರಮಂಡಳದ ಅತ್ಯುಚ್ಚನೆಲೆಯಾದ ಸೆರಿಬ್ರಂನಲ್ಲಿ ಹಲವಾರುಬಗೆಯ ನರಕಣಗಳಿವೆ, ಅವುಗಳಸಂಬಂಧವೂ ಅಚ್ಚುಕಟ್ಟಾಗಿದೆ. ಇಡೀ ಸೆರಿಬ್ರಮ್‌ನ ಉದ್ದೇಶ ಒಂದೇ, ಪ್ರಯೋಜನ ಒಂದೇ, ಕ್ರಿಯಾ ವಿಧಾನ ಒಂದೇ. ಆದರೂ ಬೇರೆಬೇರೆ ಭಾಗಗಳಲ್ಲಿ ಬೇರೆಬೇರೆ ಬಗೆಯ ನರಕಣವ್ಯವಸ್ಥೆ ಕಾಣಬರುತ್ತದೆ. ಆದುದರಿಂದಲೇ ಒಂದೊಂದು ಭಾಗದಲ್ಲಿ ಒಂದೊಂದು ವಿಶಿಷ್ಟ, ನಿರ್ದಿಷ್ಟ ಕೆಲಸ ನಡೆಯುತ್ತದೆ. ಆದರೆ ಮಸ್ತಿಷ್ಕದ ಕೆಲಸದಲ್ಲಿ ವೈವಿಧ್ಯವಿಲ್ಲ, ಅನೇಕತೆಯಿಲ್ಲ. ಮಸ್ತಿಷ್ಕವು ಒಟ್ಟಾಗಿಯೇ ವ್ಯವಹರಿಸುತ್ತದೆ. [ ಚಿತ್ರ–೪ (೨) ]









ವಾನರಮಸ್ತಿಷ್ಕ                                                                 ನರಮಸ್ತಿಷ್ಕ

ಚಿತ್ರ ೪ (೩)

ಮನುಷ್ಯಜೀವನದಲ್ಲಿ ಮೆದಳು ಮುಖ್ಯವಾದ ಸಾಧನೆ. ಜೀವವಿಕಾಸದಲ್ಲಿ ಇದು ಅನುಕ್ರಮವಾಗಿ ಬೆಳೆಯುತ್ತ ಬಂದಿದೆ. ದೇಹದ ತೂಕಕ್ಕೆ ಮಸ್ತಿಷ್ಕದ ತೂಕ ಬರುಬರುತ್ತ ಹೆಚ್ಚುತ್ತಿದೆ. ತಿಮಿಂಗಲದ ಮೈತೂಕಕ್ಕೆ ಸರಿಯಾಗಲು ಅದರ ಮಸ್ತಿಷ್ಕವನ್ನು ೧೦,೦೦೦ ದಷ್ಟು ಹಾಕಬೇಕು ; ಸಿಂಹದ ತೂಕಕ್ಕೆ ಅದರ ಮಸ್ತಿಷ್ಕವನ್ನು ೫೫೦ ಬಾರಿ ಹಾಕಿದರೆ ಸರಿಯಾದೀತು ; ಆನೆಯ ಮೈತೂಕದಷ್ಟು ಅದರ ಮಸ್ತಿಷ್ಕ ತೂಗಬೇಕಾದರೆ ೯೪೦ ಮಸ್ತಿಷ್ಕಗಳನ್ನು ಒದಗಿಸಬೇಕು ; ವಾನರದ ಮಸ್ತಿಷ್ಕ ೬೦ ಬಾರಿ ಹಾಕಿದರೆ ಅಸರ ಮೈತೂಕ ಸಮನಾದೀತು. ಆದರೆ ಮನುಷ್ಯನ ಮೈತೂಕದಷ್ಟು ತೂಗಲು ಅವನ ಮಸ್ತಿಷ್ಕಗಳನ್ನು ೪೦ ಹಾಕಿದರೆ ಸಾಕು. ಮನುಷ್ಯ ಆವರಣದೊಂದಿಗೆ ಹೊಂದಿಕೊಳ್ಳಲು ಸೆಣಸಾಡಲು ಮಸ್ತಿಷ್ಕದ ಬಲವೇ ಬಲ.

ಪರಿಚ್ಛೇದ ನಾಲ್ಕು

# ಪ್ರವರ್ತನೆ: ಬಯಕೆಗಳು, ಅಗತ್ಯಗಳು

೧

**ಪ್ರವರ್ತನೆಯೆಂದರೇನು ?**

ಪ್ರವರ್ತನೆಯೆಂದರೆ ವರ್ತನೆಯನ್ನು ಪ್ರಚೋದಿಸುವ ಶಕ್ತಿ. ನಾವು ಯಾವುದೇ ಕೆಲಸವನ್ನು ಮಾಡಲಿ, ಯಾವುದೇ ಮಾತನ್ನಾಡಲಿ ಅದಕ್ಕೆ ಹಿನ್ನೆಲೆಯಾಗಿ ಶರೀರದ ರಚನೆ ಮತ್ತು ಶಾರೀರ ಪ್ರವೃತ್ತಿಗಳಿರುತ್ತವೆ ಎಂಬುದನ್ನು ಹಿಂದಿನ ಪರಿಚ್ಛೇದದಲ್ಲಿ ತಿಳಿದಿದ್ದೇವೆ. ಕೆಲಸಕ್ಕೆ ಪೂರ್ವಭಾವಿಯಾಗಿ ಶರೀರವ್ಯವಸ್ಥೆಯಿರಬೇಕು. ಕೇಂದ್ರೀಯ ನರಮಂಡಲವಿದೆಯಾಗಿ, ಮನುಷ್ಯ ಅತ್ಯಂತ ಕ್ಲಿಷ್ಟವೆನಿಸಿದ, ಜಟಿಲವೆನಿಸಿದ, ಕುಶಲವೆನಿಸಿದ ಕೆಲಸಗಳನ್ನೂ ಮಾಡುವುದು ಸಾಧ್ಯ. ಆದರೆ ಕೆಲಸಕ್ಕೆ ಶರೀರ ರಚನೆಯಿಂದ ಒದಗುವಶಕ್ತಿ ಮತ್ತು ಸಿದ್ಧತೆ ಇಷ್ಟೇ ಸಾಕು ಎಂದು ಬಗೆಯಬಾರದು. ಕೆಲಸ ಹೇಗೆ ನಡೆಯುವುದು ಸಾಧ್ಯ ಎನ್ನುವುದು ಅಷ್ಟೇ ಈ ಜಿಜ್ಞಾಸೆಯಿಂದ ಸ್ಪಷ್ಟವಾಗುತ್ತದೆ. ಆದರೆ ಕೆಲಸ ಏಕೆ ನಡೆಯುತ್ತದೆ ಎನ್ನುವ ಪ್ರಶ್ನೆಗೆ ಶರೀರದ ರಚನೆ ಅಥವಾ ಅದರಿಂದ ಒದಗುವ ಶಕ್ತಿ ಉತ್ತರವಲ್ಲ. ಓಡುತ್ತಿರುವ ನಾಯಿ ಈಹೊತ್ತೇ ಏಕೆ ಓಡುತ್ತಿದೆ, ಈ ದಿಕ್ಕಿನಲ್ಲೇ ಏಕೆ ಓಡುತ್ತಿದೆ, ಅದರ ಗುರಿ ಏನಿದ್ದೀತು, ಅಥವಾ ಯಾವುದರಿಂದ ಓಡುತ್ತಿದೆ ? ಈ ಮನುಷ್ಯ ಹೀಗೇಕೆ ನಡೆದುಕೊಳ್ಳುತ್ತಾನೆ, ಹೀಗೇಕೆ ಮಾತನಾಡುತ್ತಾನೆ? ಈ ಮೊದಲಾದ ಪ್ರಶ್ನೆಗಳಿಗೆ ಉತ್ತರ ಕೊಡಲು ಮನಃಶಾಸ್ತ್ರ ಹವಣಿಸುತ್ತದೆ. ಒಂದು

ಪ್ರಾಣಿಯಿಂದ ಕೆಲಸ ಒಂದು ಬಗೆ ನಡೆದರೆ ಅದರ ಕಾರಣವೇನು ? ಅದಕ್ಕೆ ಅನುಕೂಲವಾದ ಶಕ್ತಿ, ಪ್ರೇರಣೆ, ಪ್ರಚೋದನೆ ಯಾವುವು ? ಕೆಲಸದಿಂದ ಸಾಧಿಸಬೇಕಾದ ಲಕ್ಷ್ಯ ಯಾವುದು ?

ಭೌತಿಕ ಶಾಸ್ತ್ರಗಳಲ್ಲಿ ಕ್ರಿಯಾವಾದ (dynamism) ವೊಂದನ್ನು ನಿರೂಪಿಸುತ್ತಾರಷ್ಟೆ. ಭೌತಿಕ ವಸ್ತುಗಳಲ್ಲಿ ಚಲನೆ ಕಂಡರೆ ಅದಕ್ಕೆ ಹಿನ್ನೆಲೆಯ ಶಕ್ತಿ (force), ಅಥವಾ ಸ್ಫೂರ್ತಿ (energy) ಯನ್ನು ನಿರ್ದೇಶಿಸುವುದು ಈ ವಾದದ ಉದ್ದೇಶ. ಭೌತಿಕ ವಸ್ತುಗಳು ತಾವಾಗಿ ಚಲಿಸುವುದಿಲ್ಲ; ಆದರೆ ಅವುಗಳಲ್ಲಿ ಚಲನೆ ಕಾಣುವುದುಂಟು. ಮೇಲೆಸೆದ ಕಲ್ಲು ಕೆಳಗೆ ಬೀಳುತ್ತದೆ, ನೀರು ಹರಿಯುತ್ತದೆ, ಗಡಿಯಾರ ನಡೆಯುತ್ತದೆ, ಹೊಗೆಬಂಡಿ ಓಡುತ್ತದೆ, ಬಾಂಬು ಸಿಡಿಯುತ್ತದೆ. ಸ್ವಯಂಪ್ರೇರಣೆಯಿಂದ ಈ ಕೆಲಸಗಳೆಲ್ಲ ನಡೆಯಲಾರವಷ್ಟೆ. ಆಯಾ ಕೆಲಸಕ್ಕೆ ತಕ್ಕ, ಅಗತ್ಯವಾದ ಶಕ್ತಿ, ಪ್ರೇರಣೆ ಎಲ್ಲಿಂದ ಬಂದಿತು ? ಶಕ್ತಿಯೊಂದನ್ನು ಉತ್ಪಾದನೆಮಾಡಿ ಅದರಿಂದ ಕೆಲಸಮಾಡಿಸುವ ಸಂವಿಧಾನ ಯಾವುದು, ಶಕ್ತಿಯು ಕ್ರಿಯಾತ್ಮಕವಾಗಿ ಮಾರ್ಪಡಲು ನಿಯಮಗಳು ಯಾವುವು, ಈ ತಂತ್ರದ ನೆಲೆ ಏನು ಇವೆಲ್ಲವನ್ನೂ ಕ್ರಿಯಾವಾದ ಅಧ್ಯಯನ ಮಾಡುತ್ತದೆ. ಇದರ ತರ್ಕವನ್ನೇ ಜೀವವಿಜ್ಞಾನಿಗಳೂ ಒಪ್ಪಿಕೊಂಡಿದ್ದಾರೆ.

ಕ್ರಿಯಾವಾದದ ಪ್ರಣಾಳಿಕೆಗಳಲ್ಲಿ ಯಾವ ವಸ್ತುವಾಗಲೀ ಇದ್ದೆಡೆಯೇ ಇರುತ್ತದೆ; ಹೊರಗಿನ ಶಕ್ತಿಯೊಂದು ಈ ಇರುವಿಕೆಗೆ ಅಡ್ಡಬಂದರೆ ಆಗ ಮಾತ್ರ, ಶಕ್ತಿಯಿಂದ ಪ್ರೇರಿತವಾದಷ್ಟು ಮಾತ್ರ, ಚಲಿಸುತ್ತದೆ ಎನ್ನುವುವು ಪ್ರಮುಖವಾದುವು. ವಸ್ತುವಿನ ಸಹಜಸ್ಥಿತಿ ವಿಶ್ರಾಮ; ಅದಕ್ಕೆ ಭಂಗಬಂದಾಗಲೇ ವಸ್ತುವಿನಲ್ಲಿ ಚಲನೆ ತೋರುವುದು. ಶಕ್ತಿಯ ಕೆಲಸ ವಿಶ್ರಾಮವನ್ನು ಭಂಗಗೊಳಿಸುವುದೇ. ಇದು ಪ್ರಾಣಿಗಳಿಗೂ ಅನ್ವಯಿಸುವ ಮಾತೆನ್ನುವುದು ಸ್ಪಷ್ಟವಾಗಿದೆ. ಪ್ರಾಣಿಯೂ ಭೌತಿಕ ತತ್ತ್ವಗಳ ವ್ಯವಸ್ಥೆಯೇ ಅಲ್ಲವೆ? ಆದರೆ ಅದರ ವಿಶ್ರಾಮವನ್ನು ಭಂಗಗೊಳಿಸುವ ಶಕ್ತಿತತ್ತ್ವ ಬೇರೆ. ಭೌತಿಕವಸ್ತುಗಳು ಜಡ; ಅವು ಬಿಟ್ಟಲ್ಲಿಯೇ ಬೀಳುತ್ತವೆ, ಬಿದ್ದಲ್ಲಿಯೇ ಇರುತ್ತವೆ, ನೂಕಿದ ಕಡೆ ಸರಿಯುತ್ತವೆ. ಅವುಗಳ ಸಂಚಲನೆಗೆ ಅಗತ್ಯವಾದ ಶಕ್ತಿ ಹೊರಗಿನಿಂದ ಬರಬೇಕಷ್ಟೆ. ಕ್ರಿಯೆ ಹಾರುವ ಕಲ್ಲಿನಲ್ಲೇ ಕಂಡರೂ ಅದನ್ನು ಬೀಸುವ ಮನುಷ್ಯ ಶಕ್ತಿಯನ್ನು ಒದಗಿಸುತ್ತಾನೆ. ಗಡಿಯಾರ ತಾನೇ ನಡೆದಂತೆ ಕಂಡರೂ ಯಾಂತ್ರಿಕವ್ಯವಸ್ಥೆಯಿಂದ ನಿರುದ್ಧಶಕ್ತಿಯನ್ನು ಗಡಿಯಾರ ಮಾಡುವವನು ಒದಗಿಸುತ್ತಾನೆ. ಇವೆಲ್ಲ ಬಹಿಃಶಕ್ತಿಗಳು. ಶಕ್ತಿಯಿರುವಷ್ಟು ಕಾಲ ಕ್ರಿಯೆ ; ಶಕ್ತಿ ನಿಂತರೆ ಕ್ರಿಯೆಯೂ ನಿಲ್ಲುತ್ತದೆ.

ಆದರೆ ಓಡುವ ನಾಯಿಗೆ ಈ ನಿಯಮವಿಲ್ಲ. ಅದು ಓಡಲು ಹೊರಗಿನ ಪ್ರೇರಣೆಯೊಂದೇ ಕಾರಣ ಎನ್ನುವ ಹಾಗಿಲ್ಲ ; ಅಥವಾ ಹೊರಗಿನ ಪ್ರೇರಣೆಯಿದ್ದರೂ ಪ್ರೇರಕಶಕ್ತಿಯಿರುವಷ್ಟೇ ಓಟ ಎನ್ನಲಾಗದು. ಜೀವಿಗಳಿಗೆಲ್ಲ

ಅಂತಃಶಕ್ತಿಯ ವ್ಯವಸ್ಥೆಯುಂಟು. ಅವುಗಳ ಚಲನೆಗಳಿಗೆ ಬಹಿಃಪ್ರೇರಣೆಗಿಂತ ಅಂತ ಪ್ರೇರಣೆಯ ಪ್ರಭಾವ ಹೆಚ್ಚಿನದು. ಈ ಅಂತಃಶಕ್ತಿಯ ಮರ್ಮವೇನು ? ಶರೀರ ರಚನೆಯಲ್ಲಿ ಮತ್ತು ಶಾರೀರ ಪ್ರವೃತ್ತಿಗಳಲ್ಲಿ ಶಕ್ತಿಯನ್ನು ಉತ್ಪಾದನೆಮಾಡುವ ಸೌಲಭ್ಯವಿದೆ. ಹಸಿವಾದರೆ ಪ್ರಾಣಿ ಆಹಾರ ಹುಡುಕುತ್ತ ಅಲೆದಾಡುತ್ತದೆ, ಇದ್ದೆಡೆ ಇರುವುದಿಲ್ಲ; ಆಹಾರ ದೊರೆಯುವವರೆಗೆ ಈ ಕೆಲಸ ನಿಲ್ಲುವುದಿಲ್ಲ. ಕೆಲಸಮಾಡಿ ಬಳಲಿದಾಗ ಹಸಿವಾಗುತ್ತದೆಯಷ್ಟೆ; ಹಸಿವೆಯೆಂದರೆ ಅನುಭವಿಸಲು ಅಸಹ್ಯವಾದುದು; ಇದರ ದುಃಖದಿಂದ ಪಾರಾಗಲು, ಎಂದರೆ ಹಸಿವೆಯನ್ನು ಪರಿಹರಿಸಿಕೊಳ್ಳಲು, ಪ್ರಾಣಿ ಆಹಾರವನ್ನು ಹುಡುಕುತ್ತದೆ. ಆಹಾರ ಶರೀರವನ್ನು ಸೇರಿದರೆ ಪ್ರಾಣಿ ಮತ್ತೆ ಸಮಾಧಾನಗೊಂಡೀತು. ಆಹಾರಕ್ಕೆ ಅಲೆದಾಡುವುದು ಶಕ್ತಿಯಿಲ್ಲದೆ ಹೇಗೆ ಆಗುತ್ತದೆ ? ಯಾವ ಕೆಲಸವೂ ಶಕ್ತಿಯಿಲ್ಲದೆ ನಡೆಯಲಾರದು. ಈ ಶಕ್ತಿಯು ಜೀವಿಯ ಒಳಗಿಂದಲೇ ಉಂಟಾದುದು. ಕೆಲಸಕ್ಕೆ ಪ್ರೇರಣೆ ಒಳಗಿಂದಲೇ ಒದಗಿದುದು. ಹೀಗೆಯೇ ಪ್ರಾಣಿಜೀವನದಲ್ಲಿ ನೂರಾರು ಕ್ರಿಯೆಗಳು ಅಂತಃ ಪ್ರೇರಣೆಯಿಂದ ನಡೆಯುತ್ತವೆ. ಮನುಷ್ಯ ಇದಕ್ಕೆ ಅಪವಾದವಲ್ಲ. ಮನುಷ್ಯನ ಅಂತಃಪ್ರೇರಣೆಯ ಮೂಲತತ್ತ್ವ ಏನು, ಆದರ ವಿವರಗಳು ಯಾವುವು, ವರ್ತನೆಯನ್ನು ಒಳಗಿನ ಶಕ್ತಿ ಹೇಗೆ ಪ್ರಚೋದಿಸುತ್ತದೆ, ಈ ಮೊದಲಾದ ಸಮಸ್ಯೆಗಳಿಗೆ ಮನಃಶಾಸ್ತ್ರ ಉತ್ತರವನ್ನು ಒದಗಿಸಲು ಯತ್ನಿಸಿ ಪ್ರವರ್ತನೆಯ ಸಿದ್ಧಾಂತವನ್ನು ನಿರೂಪಿಸುತ್ತದೆ.

೨

## ಪ್ರಚೋದನೆ

ಪ್ರವರ್ತನೆ ಎನ್ನುವ ಮಾತಿಗೆ ಕೆಲಸವನ್ನು ಪ್ರಚೋದಿಸುವುದು, ಕೆಲಸಕ್ಕೆ ಅಗತ್ಯವಾದ ಶಕ್ತಿಯನ್ನು ಒದಗಿಸುವುದು, ಗುರಿಯ ಕಡೆ ಕೆಲಸಸಾಗಲು ಅನುಕೂಲವಾಗುವಂತೆ ಸಂಕಲ್ಪವನ್ನೂ ಸಾಮರ್ಥ್ಯವನ್ನೂ ಸಿದ್ಧಗೊಳಿಸುವುದು ಎಂದರ್ಥ. ಕೆಲವು ಕೆಲಸಗಳಿಗೆ ಬಾಹ್ಯಪ್ರಚೋದನೆಯಿರುತ್ತದೆ, ಆದರೆ ಮನಃಶಾಸ್ತ್ರದಲ್ಲಿ ಅಂತಃ ಪ್ರಚೋದನೆಗೇ ಪ್ರಾಮುಖ್ಯ. ಬಾಹ್ಯಪ್ರಚೋದನೆಯಿದ್ದರೂ ಒಳಗಿನ ವಿವರಗಳಿಂದ ಕೆಲಸದ ರೀತಿನೀತಿ, ಗೊತ್ತುಗುರಿ ಮಾರ್ಪಡುತ್ತವೆ; ಹೊರಗಿನ ಪ್ರೇರಣೆಯನ್ನು ಸಮರ್ಥಿಸುವ, ಅಥವಾ ಅದಕ್ಕೆ ಅಡ್ಡಿತರುವ, ವಿವರಗಳು ಒಳಗಿದ್ದರೆ ಅವುಗಳ ಪ್ರಭಾವವೇ ಹೆಚ್ಚಾಗಿರುತ್ತದೆ. ಆದುದರಿಂದ ಮನಃಶಾಸ್ತ್ರವು ಈ ಒಳಗಿನ ವಿವರಗಳನ್ನೇ ಪ್ರವರ್ತನೆಯ ಮುಖ್ಯಪರಿಕರಗಳೆಂದು ಬಗೆದಿದೆ.

ಜೀವಿಯು ಬದುಕಿರುವಾಗ ಅದರ ಒಂದೊಂದು ಕೆಲಸವೂ ಒಳಗಿನ ವಿವರಗಳಿಂದ ಪ್ರಚೋದಿತವಾಗಿರುತ್ತದೆ. ನೀವು ಸೂತ್ರದ ಬೊಂಬೆಯಾಟವನ್ನು ನೋಡಿದ್ದೀರಷ್ಟೆ. ಬೊಂಬೆ ಕುಣಿದಾಡುತ್ತದೆ, ನಾಟಕವಾಡುತ್ತದೆ; ಆದರೆ ದಾರಗಳು ಸರಿಯಾಗಿ ಎಳೆದಾಡಿದರೇ ಈ ಆಟ ನಡೆಯುವುದು. ಜೀವಿಯ ಶರೀರವೂ

ಬೊಂಬೆಯಂತೆಯೇ. ಶರೀರದ ಕೆಲಸಗಳು ಹೊರಗಿನ, ಒಳಗಿನ ಅಗತ್ಯಗಳನ್ನನು ಸರಿಸಿ ನಡೆಯಬೇಕೆಂದರೆ ಅದಕ್ಕೂ ದಾರಗಳ ವ್ಯವಸ್ಥೆಬೇಕು. ಶರೀರದೊಳಗಿನ ದಾರಗಳು ಪ್ರಚೋದಕ ಸಾಮಾಗ್ರಿಗಳು (motives). ನೀಚವರ್ಗದ ಪ್ರಾಣಿಗಳಲ್ಲಿ ಪ್ರವರ್ತನೆ, ಎಂದರೆ ಪ್ರಚೋದಿಕ ಸಾಮಾಗ್ರಿಗಳು ಶರೀರವನ್ನು ಉತ್ತೇಜಿಸಿ ಕೆಲಸ ನಡೆಯುವಂತೆ ಮಾಡುವುದು, ಅರಿವಿಲ್ಲದೆ ತಾನಾಗಿ ನಡೆದುಹೋಗುತ್ತದೆ: ತ್ರೋಪಿಸಮ್, ಪ್ರತಿಕ್ಷೇಪ (ರಿಫ್ಲೆಕ್ಸ್) ಇವು ನಿದರ್ಶನಗಳು. ಗಿಡ ಬೆಳಕಿನೆಡೆ ಬಾಗಿದಾಗ, ಜಿರಳೆಯ ಇಡೀದೇಹ ಬೆಳಕಿನಿಂದ ಕತ್ತಲೆಯಕಡೆ ತಿರುಗಿದಾಗ ಅದು ಟ್ರೋಪಿಸಮ್; ಗಿಡ ಬೇಕೆಂದು ಬಯಸಿ ಬಾಗುವುದಿಲ್ಲ, ಜಿರಳೆ ಇಷ್ಟಪಟ್ಟು ತಿರುಗುವುದಿಲ್ಲ, ಅವುಗಳ ಅರಿವಿಲ್ಲದೆಯೇ ಹಾಗಾಗುತ್ತದೆ. ನರಮಂಡಲದ ವ್ಯವಸ್ಥೆ ಸುಮಾರಾಗಿ ಇರುವ ಜೀವಿಗಳಲ್ಲಿ ಪ್ರತಿಕ್ಷೇಪವೇ ನಿಯಮ. (ನರಮಂಡಲದ ವ್ಯವಸ್ಥೆ ಅಚ್ಚುಕಟ್ಟಾಗಿರುವ ನಮ್ಮಲ್ಲಿಯೂ ಹಲವಾರು ಪ್ರತಿಕ್ಷೇಪಗಳುಂಟು; ಕಣ್ಣವೆ ಆಡುವುದು, ಮೊಳಕಾಲುಮಣಿ ಕುಣಿಯುವುದು ಇತ್ಯಾದಿ. ಆದರೆ ಪ್ರತಿಕ್ಷೇಪ ಮನುಷ್ಯನ ನೆಲೆಯಲ್ಲಿ ನಿಯಮವಲ್ಲ.) ಈ ಬಗೆಯ ವರ್ತನೆಗಳು ಜೀವಿಯ ಸಂಕಲ್ಪಕ್ಕೆ ವಶವಾದುವಲ್ಲ; ದೇಹಸಂರಕ್ಷಣೆಗೆ ಅಗತ್ಯವಾದ ಈ ಕೆಲಸಗಳು ತಾವೇ ನಡೆದುಹೋಗುತ್ತವೆ. ಬಾಳುವೆಯುದ್ದಕ್ಕೂ ಒಂದೇ ಬಗೆಯ ವರ್ತನೆಗಳು; ಅವುಗಳಲ್ಲಿ ವೈವಿಧ್ಯವಿರದು, ಒಮ್ಮೆ ನಡೆದ ಸಂದರ್ಭದಿಂದ ಜೀವಿಯು ಪಾಠಕಲಿತು ವರ್ತನೆಯನ್ನು ಮಾರ್ಪಡಿಸಿಕೊಳ್ಳುವುದು ಸಾಧ್ಯವಿಲ್ಲ. ಇಲ್ಲಿ ಪ್ರವರ್ತನೆ ಎನ್ನುವುದು ಔಪಚಾರಿಕವಾದ ಮಾತಷ್ಟೆ; ನಿಜವಾಗಿ ಪ್ರವರ್ತನೆಯಿರದು.

ಮೇಲ್ತರದ ಪ್ರಾಣಿಗಳಲ್ಲಿ ನರಮಂಡಲದ ವ್ಯವಸ್ಥೆ, ಕೇಂದ್ರೀಯ ನರಮಂಡಲದಲ್ಲಿ ಕಶೇರುಕದ ಮತ್ತು ಮಸ್ತಿಷ್ಕದ ಬೆಳವಣಿಗೆ ಇವುಗಳಿಂದ ಜೀವಿಗೂ ಹೊರಗಿನ ಜಗತ್ತಿಗೂ ನಡುವೆ ಇರುವ ಸಂಬಂಧ ಕುಶಲವಾಗುತ್ತದೆ; ಹೊರಗಿನ ಅಗತ್ಯಗಳಿಗೆ ಜೀವಿ ಚೆನ್ನಾಗಿ ಹೊಂದಿಕೊಳ್ಳುವುದು ಸಾಧ್ಯವಾಗುತ್ತದೆ; ಸಮಸ್ಯೆಗಳನ್ನು ಎದುರಿಸಲು ಜೀವಿ ಸಮರ್ಥವಾಗುತ್ತದೆ. ಸಮಸ್ಯೆಗಳನ್ನು ಸಮರ್ಪಕವಾಗಿ ಪರಿಹರಿಸಿ ನಿರಾತಂಕವಾಗಿ ಬಾಳಲು ನೆರವಾಗುವುದೇ ನರಮಂಡಲದ ಉದ್ದೇಶ. ಬಾಳಿನ ಅಗತ್ಯಗಳನ್ನೂ ಬಯಕೆಗಳನ್ನೂ ಅನುಸರಿಸಿ ಶರೀರರಚನೆಯೂ ಶಾರೀರ-ಪ್ರವೃತ್ತಿಗಳೂ ಸಿದ್ಧವಾಗಿವೆ. ಜೀವಿ ಬದುಕಲು ಗಾಳಿ ಅಗತ್ಯ, ಆಹಾರ ಅಗತ್ಯ, ನೀರು ಅಗತ್ಯ, ವಿರೇಚನೆ ಅಗತ್ಯ, ಸಂತಾನ ಅಗತ್ಯ. ಈ ಅಗತ್ಯಗಳನ್ನು ಶರೀರರಚನೆ ಅಳವಡಿಸಿಕೊಂಡಿದೆ. ಈ ಅಗತ್ಯಗಳು ಕಾಣಿಸಿಕೊಂಡಾಗ ಶರೀರದಲ್ಲಿ ಬದಲಾವಣೆ ತಲೆದೋರುತ್ತದೆ. ಆಹಾರದ ಅಗತ್ಯವಿದ್ದಾಗ ಹಸಿವೆ, ನೀರಿನ ಅಗತ್ಯವಿದ್ದಾಗ ಬಾಯಾರಿಕೆ, ಸಂತಾನದ ಅಗತ್ಯವಿದ್ದಾಗ ಕಾಮವಿಕಾರ—ಹೀಗೆ ದೈಹಿಕ ಪ್ರವೃತ್ತಿಗಳು ಕಾಣಿಸಿಕೊಳ್ಳುತ್ತವೆ.

ಇವೆಲ್ಲ ದೈಹಿಕಬಯಕೆಗಳು ; ಇವುಗಳು ಪೂರ್ಣವಾಗದಿದ್ದರೆ ಪ್ರಾಣಿ ಉಳಿಯುವುದಿಲ್ಲ, ವಂಶ ಮುಂದುವರೆಯುವುದಿಲ್ಲ. ಈ ಕಾರಣದಿಂದ ಇವು ಮೂಲ ಭೂತ ಪ್ರವೃತ್ತಿಗಳೆನಿಸಿಕೊಳ್ಳುತ್ತವೆ. ಜೀವಿ ಹುಟ್ಟುವಾಗಲೇ ಇವು ಕಾಣಿಸಿಕೊಳ್ಳು ವುವು ; ಈ ಕಾರಣದಿಂದ ಅವು ಸಹಜಪ್ರವೃತ್ತಿಗಳು. ಇವನ್ನು ಅಗತ್ಯ, ಪ್ರಮುಖ ಎಂದೂ ನಿರ್ದೇಶಿಸುತ್ತಾರೆ. ಈ ದೈಹಿಕ ಬಯಕೆಗಳು ತಲೆದೋರಿದಾಗ ದೇಹ ದಲ್ಲಿ ನಿರ್ದಿಷ್ಟವಾದ ಮಾರ್ಪಾಟು ಒದಗುತ್ತವೆ. ಹಸಿವೆ, ನೀರಡಿಕೆ, ಮೊದಲಾದ ಪ್ರವೃತ್ತಿಗಳಲ್ಲಿ ದೈಹಿಕವಾಗಿ ಈ ಬಯಕೆಗಳು ವ್ಯಕ್ತವಾಗುತ್ತವೆ. ಆದುದರಿಂದ ಇವನ್ನು ದೈಹಿಕಪ್ರವೃತ್ತಿಗಳು ಎನ್ನುವುದೂ ಉಂಟು. ದೈಹಿಕವಾದ ಅಗತ್ಯಗಳನ್ನು ಪೂರೈಸುವುದೇ ಇವುಗಳ ಉದ್ದೇಶ.

ದೇಹದ ರಚನೆಯೇ ಈ ಅಗತ್ಯಗಳನ್ನು ಮೂಡಿಸುತ್ತದೆ. ಇವುಗಳ ಅಗತ್ಯ ಆಂತರಿಕವಾದುದು. ಆದರೆ ನಾವು ಮಾಡುವ ಕೆಲಸಗಳೆಲ್ಲ ದೈಹಿಕಪ್ರಯೋಜನ ಕ್ಕಾಗಿಯೇ ಎನ್ನುವುದು ತಪ್ಪು. ಸ್ಥಾನ, ಮಾನ, ಸಂಪತ್ತು, ಆತ್ಮಗೌರವ, ಸೌಜನ್ಯ ಮೊದಲಾದ ಪ್ರವೃತ್ತಿಗಳು ಸಂಘಜೀವನದಿಂದ ಉಂಟಾದುವು, ಈ ಪ್ರವೃತ್ತಿ ಗಳಲ್ಲಿ ದೈಹಿಕವಾದ ಯಾವ ಅಗತ್ಯವಾಗಲೀ ಮಾರ್ಪಾಟಾಗಲೀ ಕಾಣಿಸುವುದಿಲ್ಲ. ಕೆಲವೊಮ್ಮೆ ಇವು ದೈಹಿಕ ಅಗತ್ಯಗಳನ್ನೂ ಅಡಗಿಸಿ ನಿಲ್ಲುವುದುಂಟು. ಅವಮಾನ ವಾದಾಗ ಒಬ್ಬವ್ಯಕ್ತಿ ಆಹಾರವನ್ನೂ ಬಿಟ್ಟು, ಆತ್ಮಹತ್ಯೆ ಮಾಡಿಕೊಂಡರೆ ಅದು ದೈಹಿಕ ಅಗತ್ಯದ (ಎಂದರೆ ಉಳಿಯುವುದರ) ವಿರುದ್ಧವಾಗಿ ಕೆಲಸಮಾಡುತ್ತದೆ. ಇಂಥ ಸಾಮಾಜಿಕ ಅಥವಾ ಗೌಣಪ್ರವೃತ್ತಿಗಳು ಮನುಷ್ಯಜೀವನದಲ್ಲಿ ವಿಪುಲ ವಾಗಿವೆ. ಅವು ಜೀವಿಯ ದೃಷ್ಟಿಯಿಂದ ಮೂಲಭೂತವಾದುದಲ್ಲ ಎನ್ನುವ ಕಾರಣ ದಿಂದ ಅವು ಗೌಣ. ಅವುಗಳು ಸಹಜವಲ್ಲ ; ಮನುಷ್ಯ ನಾಲ್ಕು ಜನರ ನಡುವೆ ಬೆಳೆದಾಗಲೇ ಇವನ್ನು ಬೆಳೆಸಿಕೊಳ್ಳುತ್ತಾನೆ. ವರ್ಗದ ಎಲ್ಲ ಪ್ರಾಣಿಗಳಿಗೂ ಸಮಾನ ವಾದ ಪ್ರವೃತ್ತಿ ಇವಲ್ಲವಾದುದರಿಂದ ಇವು ವೈಯಕ್ತಿಕ ಅಗತ್ಯಗಳು. ದೈಹಿಕ ಪ್ರವೃತ್ತಿಗಳೂ ಈ ವೈಯಕ್ತಿಕ–ಸಾಮಾಜಿಕ ಅಗತ್ಯಗಳಿಂದ ಮಾರ್ಪಡುತ್ತವೆ ಎಂಬುದನ್ನು ಗಮನಿಸಬೇಕು.

೩

## ಅಗತ್ಯಗಳೂ ಬಯಕೆಗಳೂ.

ದೈಹಿಕ ಅಗತ್ಯಗಳು ನಿರ್ದಿಷ್ಟವಾಗಿವೆ. ಆಹಾರ, ನೀರು, ನಿದ್ರೆ, ವಿರೇಚನ, ಸಂತಾನ ಇವು ನಿದರ್ಶನಗಳು. ಇವು ಬಯಕೆಗಳು, ಎಂದರೆ ಒಂದೊಂದು ಬಯಕೆಗೂ ಒಂದು ನಿರ್ದಿಷ್ಟವಾಗಿ ಶಾರೀರಕ ಸ್ಥಿತಿಯಿದೆ. ಹಸಿವೆ, ನೀರಡಿಕೆ, ಆಯಾಸ ಇವು ಒಂದೇ ಬಗೆಯ ದೇಹಸ್ಥಿತಿಯಲ್ಲ ; ದೇಹದ ಕೆಲವು ಖಚಿತ ಕೆಲಸಗಳು ಇವುಗಳಿಂದ ಕುಂಠಿತವಾಗುತ್ತವೆ. ಬಯಕೆ (need) ಎನ್ನುವುದು ದೇಹಸ್ವಾಸ್ಥ್ಯದ ದೃಷ್ಟಿಯಿಂದ.

ಹಸಿವೆಯಲ್ಲಿ ಆಹಾರದ ಬಯಕೆಯಿದೆ; ಮನುಷ್ಯ ಈ ಬಯಕೆಯನ್ನು ನಿರ್ಲಕ್ಷಿಸಿ ಉಪವಾಸವೇ ಇದ್ದರೆ ಅವನು ಬರುಬರುತ್ತ ದುರ್ಬಲನಾಗುತ್ತಾನೆ, ಕಡೆಗೆ ಸಾಯುತ್ತಾನೆ. ಬಯಕೆಯಿದ್ದಾಗ ಕೆಲಸವೂ ಅಗತ್ಯವೆನಿಸುತ್ತದ. ಹಸಿವಿಲ್ಲದಿದ್ದಾಗ ಬಿದ್ದುಕೊಂಡಿರುವ ನಾಯಿ ಹಸಿವಾದೊಡನೆ ಎದ್ದು ಅಲೆದಾಡಲಾರಂಭಿಸುತ್ತದೆ. ಜಡವಾದ ಜಂತುವೂ ಸಂತಾನದ ಸಮಯ ಬಂತೆಂದರೆ ಉತ್ಸಾಹದಿಂದ ನಿಲ್ಲುತ್ತದೆ. ಬಯಕೆಯಿಂದ ದೇಹದಲ್ಲಿ ಇಂಥ ಶಕ್ತಿ, ಉತ್ಸಾಹ ಮೂಡುತ್ತದೆ. ಇದೂ ದೈಹಿಕ ಪ್ರವೃತ್ತಿಯೇ. ಕೆಲಸಮಾಡಲು ಬಯಕೆ ನಿರ್ಬಂಧಿಸುತ್ತದೆ, ಉತ್ತೇಜಿಸುತ್ತದೆ, ಜೀವಿಯನ್ನು ಉಜ್ಜುಗಿಸುತ್ತದೆ (drive). ಬಯಕೆ ಪೂರೈಸುವವರೆಗೂ ಕೆಲಸ ನಿಲ್ಲುವುದಿಲ್ಲ. ಬಯಕೆಯಿದ್ದಾಗ ಪ್ರಾಣಿಯ ಕೆಲಸದಲ್ಲಿ ಉತ್ಸಾಹ ಹೆಚ್ಚೆಂದು ಹಲವಾರು ಸ್ವಾರಸ್ಯವಾದ ಪ್ರಯೋಗಗಳು ತಿಳಿಸುತ್ತವೆ.

ಇಲಿ ದಿನವೆಲ್ಲ ಹಸಿದಿದ್ದಾಗ ಅದರ ಚುರುಕು ಹೆಚ್ಚುತ್ತದೆ, ಅದರ ಓಡಿಯಾಟ ಅತಿಯಾಗುತ್ತದೆ. ಸುಲಭವಾದ ಸಮಸ್ಯೆಗಳನ್ನು ಯಶಸ್ವಿಯಾಗಿ ಪರಿಹರಿಸುವ ಉತ್ಸಾಹ ಅದಕ್ಕೆ ಒದಗುತ್ತದೆ. ಸರ್ಕಸ್ಸಿನಲ್ಲಿ ಪ್ರಾಣಿಗಳಿಗೆ ಚಮತ್ಕಾರದ ಕೆಲಸವನ್ನು ಕಲಿಸುವಾಗ ಅವಕ್ಕೆ ಆಹಾರದ ಪ್ರಲೋಭನವನ್ನು ತೋರಿಸುತ್ತಾರೆ, ದೀರ್ಘಕಾಲ ಹಸಿದಿರುವಂತೆ ಮಾಡುತ್ತಾರೆ. ಎಂದರೆ, ಈ ದೈಹಿಕ ಬಯಕೆಯಿಂದಾಗಿ ಶರೀರ ಹೆಚ್ಚು ಕಾತರವಾಗುತ್ತದೆ, ಆವರಣದ ಕಡೆ ಗಮನ ಹೆಚ್ಚುತ್ತದೆ, ಕಲಿಯಬೇಕೆಂಬ ಉತ್ಸಾಹಕಾಣಿಸುತ್ತದೆ. ಇವೆಲ್ಲ ದೈಹಿಕಕ್ರಿಯೆಗಳೇ. ಈ ಕ್ರಿಯೆಗೆ ಕಾರಣ ಬಯಕೆಯೇ. ಹೊಟ್ಟೆತುಂಬಿದ ಮನುಷ್ಯನಿಗೆ ಕೆಲಸಮಾಡಬೇಕೆಂಬ ಕಾತರ ಇರುತ್ತದೆಯೇ ? ಇದು ಕೇವಲ ಮನೋವೃತ್ತಿಯ ಮಾತಲ್ಲ; ದೇಹವಿಕಾರದ ಮಾತು. ಬಯಕೆಯಿಂದ ದೇಹದಲ್ಲಿ ಇನ್ನಷ್ಟು ಶಕ್ತಿ ಉಂಟಾಗುತ್ತದೆ. ಹಸಿದಾಗ ಓಡಿಯಾಟದ ಇಷ್ಟ ಮಾತ್ರ ಉಂಟಾಗುವುದಿಲ್ಲ, ಅದಕ್ಕೆ ಬೇಕಾದ ಸಾಮರ್ಥ್ಯವೂ ಒದಗುತ್ತದೆ. ಹಾಗೆಯೇ ಜೀವಿಗೆ ಕಾಮೋದ್ರೇಕವಾದಾಗ ಅದರ ಓಡಿಯಾಟ ಅತಿಯಾಗುತ್ತದೆ. ಕಾಮವಿಕಾರದಲ್ಲಿ ಸಿಕ್ಕಿದ ಇಲಿ ದಿವಸಕ್ಕೆ ಹದಿನೈದು ಮೈಲಿಗಳಿಗಿಂತ ಹೆಚ್ಚುದೂರ ಓಡಬಲ್ಲುದಂತೆ !

ಕೆಲವು ಹಕ್ಕಿಗಳು ಗೂಡುಕಟ್ಟಿಕೊಳ್ಳುತ್ತವೆ; ಎಷ್ಟು ಕಿತ್ತು ಬಿಸುಟರೂ ಮತ್ತೆ ಮತ್ತೆ ಈ ಕೆಲಸ ನಡೆಯುತ್ತವೆ. ವಾತಾವರಣದಲ್ಲಿ ಬೇಗೆ ಅಡಗಿ ಚಳಿ ಆರಂಭ ವಾದರೆ ಇಲಿಯೂ ಕಾಗದದ ಚೂರುಗಳಿಂದ ತನ್ನ ಬಿಲದಲ್ಲಿ ಬೆಚ್ಚನೆಯ ಮನೆ ಯೊಂದನ್ನು ಮಾಡಿಕೊಳ್ಳುತ್ತದೆ. ಚಳಿ ಇರದಿದ್ದರೆ, ಬೇಗೆ ಹೆಚ್ಚಾದರೆ ಈ ಕೆಲಸ ದಲ್ಲಿ ಅದಕ್ಕೆ ಅಷ್ಟು ಉತ್ಸಾಹವಾಗಲೀ ಚಟುವಟಿಕೆಯಾಗಲೀ ಕಂಡುಬರುವುದಿಲ್ಲ. ಹಾಗೆಯೇ ತನ್ನ ಮರಿಗಳಿಗೆ ಸರಿಯಾದ ಸೌಕರ್ಯವನ್ನೂ ಆಹಾರವನ್ನೂ ಒದಗಿ ಸುವ ಬಯಕೆ ಮೇಲ್ತರದ ಎಲ್ಲ ಪ್ರಾಣಿಗಳಲ್ಲಿಯೂ ಇದೆ. ತಾಯಿಪ್ರಾಣಿ ಮಗು

ವನ್ನು ತುಂಬ ಎಚ್ಚರದಿಂದ, ನಿಷ್ಠೆಯಿಂದ ನೋಡಿಕೊಳ್ಳುತ್ತದೆ; ಅದರ ಪ್ರಾಣಕ್ಕೆ ಏನಾದರೂ ಸಂಚಕಾರ ಒದಗುವಂತಾದರೆ ತನ್ನ ಪ್ರಾಣವನ್ನೇ ಪಣವಾಗಿಟ್ಟು ಹೋರಾಡುತ್ತದೆ. ಈ ಪ್ರವೃತ್ತಿಗಳ ಹಿನ್ನೆಲೆಯಲ್ಲಿ ಬಯಕೆಯಿದ್ದರೂ, ಅದನ್ನು ಕಾರ್ಯಗತವಾಗಿ ಮಾಡಲು ಅಗತ್ಯವಾದ ಸಾಮರ್ಥ್ಯ ಇಲ್ಲಿ ಗಮನಾರ್ಹವಾದುದು. ಬಯಕೆಯಿದ್ದಾಗ ಕೆಲಸವನ್ನು ಮಾಡದೇ ವಿಧಿಯಿಲ್ಲ; ಕೆಲಸಕ್ಕೆ ಶಕ್ತಿಬೇಕು; ಈ ಸಂದರ್ಭದಲ್ಲಿ ಹೆಚ್ಚಿನ ಶಕ್ತಿ ಎಲ್ಲಿಂದ ಬರುತ್ತದೆ? ಬಯಕೆಯಿಂದಲೇ ಈ ಶಕ್ತಿ ಒದಗುತ್ತದೆ. ಅಗತ್ಯವಿದ್ದ ಪ್ರಾಣಿ ಉತ್ತೇಜಿತವಾಗುತ್ತದೆ. ಅಗತ್ಯವಿಲ್ಲದಿದ್ದರೆ ಯಾವ ಪ್ರಾಣಿಯೂ ಏನನ್ನೂ ಮಾಡುವುದಿಲ್ಲ. ಅಗತ್ಯವಿಲ್ಲದೆ, ಪ್ರಯೋಜನವಿಲ್ಲದೆ ಮನುಷ್ಯನಾದರೂ ಏನನ್ನು ಮಾಡುತ್ತಾನೆ? ಇದು ಪ್ರವರ್ತನೆಯ ತಾತ್ಪರ್ಯ. ಉಳಿಯುವುದು ಮೂಲಭೂತವಾದ ಪ್ರಯೋಜನವಾದರೂ ಅದಕ್ಕೆ ಹೊಂದಿಕೊಂಡಂತೆ, ಅದಕ್ಕೆ ನೆರವಾಗುವಂತೆ ನೂರಾರು ಉಪಪ್ರಯೋಜನಗಳು ಸಿದ್ಧವಾಗಿವೆ. ಇವುಗಳಲ್ಲಿ ದೈಹಿಕ–ಸಾಮಾಜಿಕ ಎಂದು ವಿವರಗಳನ್ನು ಬೇರ್ಪಡಿಸುವುದು ಸಾಧ್ಯವಿಲ್ಲ. ಕಾಮವಿಕಾರ, ಗೂಡುಕಟ್ಟುವುದು, ಮನೆಮಾಡುವುದು ಇವು ಜೀವಿಯ ಬದುಕಿಗೆ ನೇರವಾಗಿ ಸಂಬಂಧಿಸಿದ್ದಲ್ಲ; ಆದರೂ ವಂಶ ಬೆಳೆಯಬೇಕು ಎನ್ನುವ ಆಕಾಂಕ್ಷೆ ಇಲ್ಲಿ ಪ್ರವರ್ತಕ. ಸಮಾಜವೂ ಇದೇ ಆಕಾಂಕ್ಷೆಯಿಂದಲೇ ಸಿದ್ಧವಾದುದಲ್ಲವೆ?

ಆದರೆ ದೈಹಿಕವೆನಿಸಿದ ಬಯಕೆಗಳಲ್ಲಿ ಸ್ಪಷ್ಟವಾದ ಕೆಲವು ವಿವರಗಳಿರುತ್ತವೆ. ಬಯಕೆಯಿದೆಯೆಂದು ತೋರಿದೊಡನೆ ದೇಹವನ್ನು ಪರೀಕ್ಷೆ ಮಾಡಿದರೆ ಅದರಲ್ಲಿ ನಿರ್ದಿಷ್ಟವಾದ ಅಭಾವದ ಸ್ಥಿತಿಯಿರುವುದು ಸ್ಪಷ್ಟವಾಗುತ್ತದೆ. ಹಸಿವೆಯಲ್ಲಿ ಜಠರಕೋಶದ ಕೆಲಸ ಕುಂಠಿತವಾಗಿ, ಅಸ್ತವ್ಯಸ್ತವಾಗುತ್ತದೆ. ಇಲ್ಲಿನ ಸ್ನಾಯುಗಳು ವೇಗವಾಗಿ ಹಿಗ್ಗುವುದು, ಕುಗ್ಗುವುದು ಕಾಣುತ್ತದೆ; ರಕ್ತಚಲನೆಯಲ್ಲಿ ಆತಂಕ ತೋರುತ್ತದೆ; ದೇಹಧಾರಣೆಗೆಂದು ಜಠರ ಕೋಶದಲ್ಲಿಯೇ ಅನ್ನರಸ ಹೊರಹರಿದು ದೇಹದಲ್ಲಿ ಹರಿದಾಡಲಾರಂಭಿಸುತ್ತದೆ, ಇದರಿಂದ ದೇಹದ ಸ್ವಾಸ್ಥ್ಯಕ್ಕೆ ಇನ್ನಷ್ಟು ಗಾಸಿಯಾಗುತ್ತದೆ. ಹಸಿವು ಹೆಚ್ಚಾದರೆ ಶಕ್ತಿಕುಗ್ಗುತ್ತದೆ, ದಿನಗಳಕಾಲ ಉಪವಾಸ ವಿದ್ದರೆ ಉತ್ಸಾಹ ಅಡಗುತ್ತದೆ, ಯೋಚನೆ ಮಾಡುವುದೂ ಕಷ್ಟವೆನಿಸುತ್ತದೆ. ಉಪವಾಸ ನಿಲ್ಲದಿದ್ದರೆ ಮನುಷ್ಯ ಉಳಿಯುವುದಿಲ್ಲ. ನೀರಡಿಕೆಯಲ್ಲಿಯೂ ಹೀಗೆಯೇ ದೇಹದಲ್ಲಿ ಅಭಾವಪರಿಸ್ಥಿತಿ ಸ್ಪಷ್ಟವಾಗುತ್ತದೆ. ಅನ್ನ–ನೀರು ಇಲ್ಲದಿದ್ದರೆ ದೇಹದೊಳಗೆ ಒಂದು ಆಂದೋಲನವೇ ನಡೆಯುತ್ತದೆ. ದೈಹಿಕಪ್ರವೃತ್ತಿಗಳಲ್ಲಿ ಗಮನಾರ್ಹವಾದ ವಿಕಾರ ತಲೆದೋರುವುದು ಇಲ್ಲಿ ಮುಖ್ಯವಿವರ.

ಅಭಾವಸ್ಥಿತಿ ಮತ್ತು ಅದರಿಂದ ಒದಗುವ ದೈಹಿಕ ವಿಕಾರ ಇವು ಜೀವಿಯನ್ನು ಹೆಚ್ಚಿನ ಕೆಲಸಕ್ಕೆ ಉಜ್ಜುಗಿಸುತ್ತವೆ. ಬಯಕೆಯಿದ್ದಾಗ ಪ್ರಾಣಿ ತುಂಬ

ಕಾತರವಾಗಿರುವುದನ್ನು ನೀವು ನೋಡಿರಬಹುದು, ಕೆಲಸಕ್ಕೆ ಸಿದ್ಧವಾಗಿರುವುದನ್ನು ನೋಡಿರಬಹುದು. ಹೀಗೆ ಕೆಲಸಕ್ಕೆ ಹೊರಡುವ ಉದ್ದೇಶವೇನು ? ಅಭಾವ ಪರಿಸ್ಥಿತಿ ಕಳೆಯಬೇಕು, ಅದರಿಂದಾಗಿ ದೈಹಿಕವಿಕಾರಗಳು ಮರೆಯಾಗಿ ಜೀವಿ ಸ್ವಸ್ಥವಾಗಬೇಕು ಎನ್ನುವುದೇಉದ್ದೇಶ. ಬಯಕೆ ಏಳುವ ಮೊದಲು ಜೀವಿ ಯಾವ ಸಮಾಧಾನ ಸ್ಥಿತಿಯಲ್ಲಿದ್ದಿತೋ ಅದೇ ಸ್ಥಿತಿಯನ್ನು ಮತ್ತೆ ಗಳಿಸಿಕೊಳ್ಳಲೆಂದೇ ಕೆಲಸಕ್ಕೆ ಸಿದ್ಧವಾಗುತ್ತದೆ. ಹಸಿವೆಯಲ್ಲಿ ಆಹಾರದ ಅಭಾವವಿದೆಯಷ್ಟೆ; ಪ್ರಾಣಿ ಆಗ ಮಾಡುವ ಕೆಲಸವೆಂದರೆ ಆಹಾರವನ್ನು ಹುಡುಕುವುದು. ಬಯಕೆಯಲ್ಲಿ ಇದೂ ಒಂದು ಮುಖ್ಯ ವಾದ ವಿವರ. ಬಯಕೆಯನ್ನು ಪೂರೈಸಲು ಯಾವ ಕೆಲಸ ನೆರವಾಗುವುದೋ ಅಂಥ ಕೆಲಸಗಳನ್ನು ಮಾತ್ರ ಜೀವಿ ಮಾಡುತ್ತದೆ. ಹಸಿವಾಗಿದ್ದಾಗ ಕಾಮಚೇಷ್ಟೆಗೆ ಅವಕಾಶವಿಲ್ಲ ; ಶತ್ರುವಿನಿಂದ ಪಾರಾಗುವ ಬಯಕೆಯಿದ್ದರೆ ಆಹಾರವನ್ನು ಹುಡುಕುವ ಕೆಲಸ ನಡೆಯುವುದಿಲ್ಲ. ಆಯಾ ಬಯಕೆಗೆ ತಕ್ಕಂತೆ ಕೆಲಸ ನಡೆಯುವ ಪ್ರವೃತ್ತಿ ಎಂದರೆ, ಕೆಲಸದಿಂದ ಬಯಕೆ ತೀರಬೇಕು. ಬಯಕೆ ಸ್ಪಷ್ಟವಾಗಿದ್ದಾಗ ಕೆಲಸವೂ ನಿರ್ದಿಷ್ಟ. ಬಯಕೆ ತೀರುವುದೆಂದರೆ ಅಭಾವಪರಿಸ್ಥಿತಿ ಹೋಗಿ ಜೀವಿ ಮತ್ತೆ ಸಮಾಧಾನವಾಗಿರುವ ಸೌಕರ್ಯವನ್ನು ಪಡೆಯುವುದು ಎಂದರ್ಥ.

೪

## ದೈಹಿಕ ವಿಕಾರಗಳು

ಹಸಿವೆಯ ವಿಚಾರ ಎತ್ತಿದೆವು. ಇಲ್ಲಿನ ದೈಹಿಕವಿಕಾರಗಳ ಬಗ್ಗೆ ಇನ್ನಷ್ಟು ವಿವರಗಳನ್ನು ನೋಡಿ. ಆಹಾರವಿಲ್ಲದಿದ್ದರೆ ಹಸಿವು ; ಹಸಿವೆಂದರೆ ಆಹಾರದ ಅಭಾವ ಪರಿಸ್ಥಿತಿ. ಆಗ ಜಠರಕೋಶದ ಸ್ನಾಯುಗಳು ವೇಗವಾಗಿ ಬಡಿದಾಡಿಕೊಳ್ಳುವುದನ್ನು ಯಂತ್ರಗಳಿಂದ ತಿಳಿಯಬಹುದು. ಹಸಿದಿರುವ ಮನುಷ್ಯ ಬೆಲೂನನ್ನು ನುಂಗಿದರೆ ಬೆಲೂನು ಉಬ್ಬಿಕೊಳ್ಳುತ್ತದೆ. ಬೆಲೂನಿನಿಂದ ರಬ್ಬರ್‌ಕೊಳವೆಯನ್ನಿಟ್ಟು ಹೊರಗೆ ಕೈಮೋಗ್ರಾಫ್ ಎನ್ನುವ ಯಂತ್ರಕ್ಕೆ ಜೋಡಿಸಿದರೆ, ಜಠರಕೋಶ ನುಲುಚಿಕೊಳ್ಳುವುದನ್ನು ಬೆಲೂನ್ ಉಬ್ಬುವುದು, ಕುಗ್ಗುವುದು ಇದರ ಮೂಲಕ ಕೈಮೋಗ್ರಾಫ್‌ನಲ್ಲಿ ಮುದ್ರಿತವಾಗುತ್ತದೆ. ಹಸಿವಿನ ವೇದನೆಗಳಿಗೂ ಹೊಟ್ಟೆ ನುಲುಚುವುದಕ್ಕೂ ಸಂಬಂಧವುಂಟು. ಈ ಸಮಯದಲ್ಲಿ ರಕ್ತದಲ್ಲಿರುವ ಸಕ್ಕರೆಯ ಅಂಶ ಇಳಿಯುತ್ತದೆ. ಆಹಾರದ ಅಭಾವವಿದ್ದಾಗ ದೇಹಧಾರಣೆಗೆ ಅಗತ್ಯವಾದ ಪುಷ್ಟಿಸಾಮಾಗ್ರಿಯ ನಿಕ್ಷೇಪ ಕಮ್ಮಿಯಾಗಿ ರಕ್ತದಲ್ಲಿ ನಿರ್ದಿಷ್ಟ ಹಾರ್ಮೋನ್‌ಗಳನ್ನು ಚೆಲ್ಲುತ್ತದೆ ; ರಕ್ತದಲ್ಲಿನ ಈ ಹಾರ್ಮೋನ್ ಒತ್ತಡ ನರಮಂಡಲದ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ. ಇದೇ ಹಸಿವೆಯಾಗಿ ಕಾಣಬರುವುದು ; ಹೊಟ್ಟೆ ನುಲುಚುವುದಕ್ಕೂ ಇದೇ ಕಾರಣ.

ಮಿನೆಸೋಟ ವಿಶ್ವವಿದ್ಯಾನಿಲಯದಲ್ಲಿ ಅರೆಹಸಿವೆಯ ಪ್ರಯೋಗವನ್ನು ನಡೆಸಿದಾಗ ಕೆಲವು ವಿವರಗಳು ಸ್ಪಷ್ಟವಾದುವು. ಸರಿಯಾಗಿ ಊಟಮಾಡದಿದ್ದ ವ್ಯಕ್ತಿಗಳ ತೂಕ ಕಮ್ಮಿಯಾಗುತ್ತದೆ. ಅವರು ದುರ್ಬಲರಾಗುತ್ತಾರೆ, ಬೇಗನೆ ಸಿಟ್ಟಿಗೇಳುತ್ತಾರೆ, ಕಾಮಕ್ರೀಡೆಯಲ್ಲಿ ಆಸಕ್ತಿ ಕುಗ್ಗುತ್ತದೆ, ಆಹಾರಕ್ಕೆ ಸಂಬಂಧಪಟ್ಟ ಪುಸ್ತಕಗಳಲ್ಲೂ ಚಿತ್ರಗಳಲ್ಲೂ ವಿಶೇಷವಾದ ಅಭಿರುಚಿ ಬೆಳೆಯುತ್ತದೆ. ದಿನದ ಬಹುವೇಳೆ ಆಹಾರದ ಗೀಳೇ ಅವರಿಗಿದ್ದಿತು. ಓದಲು ಕುಳಿತಾಗಲೂ ವಿದ್ಯಾರ್ಥಿಯ ಮನಸ್ಸೆಲ್ಲ ಊಟದ ಮೇಲೇ ಇರುತ್ತಿದ್ದಿತು. ಕೆಲವರಂತೂ ಊಟ ಮಾಡುವಾಗ ಬಾಯಿ ಚಪ್ಪರಿಸಿಕೊಂಡು ಗಬಗಬ ತಿನ್ನಲಾರಂಭಿಸಿದರು. ಸಾಮಾನ್ಯವಾಗಿ ಸಭ್ಯರಾಗಿಯೇ ಇದ್ದ ವಿದ್ಯಾರ್ಥಿಗಳು ಆಹಾರವನ್ನು ಕದಿಯುವುದಕ್ಕೆ ಹೇಸದಂತಾದರು., ಅವರ ನೈತಿಕ ನೆಲೆಯೇ ಇಳಿಯಿತಂತೆ! ಹಸಿವೆಯಿಲ್ಲದಿದ್ದರೆ ಧರ್ಮ, ನೀತಿ ಸಂಸ್ಕೃತಿ, ಸೌಜನ್ಯ, ಸಭ್ಯತೆ; ಹಸಿವೆ ಹೆಚ್ಚಾದರೆ ಇವೆಲ್ಲಕ್ಕೂ ಸಂಚಕಾರವೇ! "ಎಲ್ಲರು ಮಾಡುವುದು ಹೊಟ್ಟೆಗಾಗಿ" ಎಂದು ದಾಸರು ಹೇಳಿದರಲ್ಲವೆ?

ಕೆಲವಾರು ಗಂಟೆಗಳ ಕಾಲ ನೀರು ಇಲ್ಲದಿದ್ದರೂ ಮನುಷ್ಯನ ಕೆಲಸ ಅತಿಯಾಗುತ್ತದೆ. ಉಳಿದೆಲ್ಲ ಬಯಕೆಗಳು ತೀರಿದ್ದರೂ, ನೀರು ಇಲ್ಲದಿದ್ದರೆ ಜೀವಕ್ಕೆ ಸಮಾಧಾನವಿಲ್ಲ. ದೈಹಿಕವಾದ ನಾಳಗಳಲ್ಲಿ, ಪದರಗಳಲ್ಲಿ ನೀರಿನ ಅಂಶ ಕಮ್ಮಿಯಾದಾಗ ನಾಲಿಗೆ ಒಣಗುತ್ತದೆ, ಗಂಟಲು ಆರುತ್ತದೆ. ಆಗ ನೀರಿನ ಬಯಕೆಯುಂಟಾಗುತ್ತದೆ. ದೇಹಕ್ಕೆ ಎಷ್ಟು ನೀರು ಅಗತ್ಯವೋ ಅಷ್ಟು ನೀರು ಒಳಗೆ ಹೋದರೇ ನೀರಡಿಕೆ ಇಂಗುವುದು. ಆಹಾರದಂತೆಯೇ ನೀರೂ ದೇಹಧಾರಣೆಗೆ ತುಂಬ ಅಗತ್ಯವಾದುದು; ಈ ಕಾರಣದಿಂದಲೇ ಬಾಯಾರಿಕೆ ಮೂಲಭೂತ ಪ್ರವೃತ್ತಿ.

ಕಾಮ ಕ್ರೀಡೆಯ ಬಯಕೆಯಲ್ಲಿ ಕೂಡ ದೈಹಿಕವಿಕಾರಗಳು ಬಲವಾಗಿರುತ್ತವೆ. ಗೋನಾಡ್ ಗ್ರಂಥಿಗಳಿಂದ ಕಾಮರಸ ಉಕ್ಕಿ ಹರಿದು ಜೀವಿಯಲ್ಲಿ ಉತ್ಸಾಹವನ್ನು ಮೂಡಿಸುತ್ತದೆ. ಆಗ ದೇಹದಲ್ಲಿ 'ಕಾವು' ಏರುತ್ತದೆ; ಪ್ರಾಣಿ ಓಡಿಯಾಡಲು, ಕೂಗಾಡಲು ಮೊದಲು ಮಾಡುತ್ತದೆ. ಗೋನಾಡ್ ಗ್ರಂಥಿಯಿಂದ ರಸ ಹರಿಯುವ ಸಮಯದಲ್ಲಿ ಪಿಟ್ಯುಟರಿ ಮತ್ತು ಅಡ್ರೀನಲ್ ಗ್ರಂಥಿಗಳೂ ತಂತಮ್ಮ ಪ್ರಭಾವವನ್ನು ಬೀರುತ್ತವೆ. ಈ ಮೂರೂ ಗ್ರಂಥಿಗಳ ಕೆಲಸದಿಂದ ದೇಹದಲ್ಲಿ ಆಂದೋಳನ, ಗೊಂದಲ ಪರಿಸ್ಥಿತಿ ತಲೆದೋರುತ್ತದೆ. ಕಾಮದ ತೃಪ್ತಿಯಾಗುವವರೆಗೆ ಇದು ಬಗೆಹರಿಯುವುದಿಲ್ಲ. ಆಹಾರದ, ನೀರಿನ ಬಯಕೆಗಳಂತೆ ಕಾಮಕ್ರೀಡೆಯ ಬಯಕೆ ಅನಿವಾರ್ಯವೇನಲ್ಲ; ಎಳೆತನದಲ್ಲಿಯೇ ಅದು ಕಾಣಿಸಿಕೊಳ್ಳುವುದೂ ಇಲ್ಲ. ಎಲ್ಲರಲ್ಲಿಯೂ ಈ ಬಯಕೆ ಒಂದೇ ತೆರನಾಗಿಯೂ ಇರುವುದಿಲ್ಲ; ಕೆಲವರಲ್ಲಿ ಇದು ಸಂಪೂರ್ಣವಾಗಿ ನಿಯಂತ್ರಿತವಾಗಿಬಿಟ್ಟಿರುತ್ತದೆ, ಅದರ ಅಭಿವ್ಯಕ್ತಿಗೆ ಅವಕಾಶವೇ ಇರುವುದಿಲ್ಲ. ಅಷ್ಟಲ್ಲದೆ ಹಸಿವೆಯಂತೆ, ಬಾಯಾರಿಕೆಯಂತೆ ಪದೇ ಪದೇ ಇದು

ಜೀವಿಯನ್ನು ತೊಂದರೆಗೊಳಿಸುವುದಿಲ್ಲ; ಅದಕ್ಕೆ ಋತುಚಕ್ರದ ನಿಯಮವುಂಟು. ಈ ಬಯಕೆಯ ಪೂರೈಕೆಯಲ್ಲಿಯೂ ವೈವಿಧ್ಯವುಂಟು, ವೈಯಕ್ತಿಕ ಶೈಲಿಯುಂಟು. ಈ ಬಯಕೆಗೆ ದೈಹಿಕ ಪ್ರವೃತ್ತಿಯ ಸ್ಪಷ್ಟ ಹಿನ್ನೆಲೆಯಿದ್ದರೂ ಇದು ಸಮಾಜದ ಮತ್ತು ಸಂಸ್ಕೃತಿಯ ಪ್ರಭಾವವನ್ನು ವಿಶೇಷವಾಗಿ ತಳೆದಿದೆ. ಬಯಕೆಯಿಂದಲೇ ಅದರ ಪೂರೈಕೆಗೆ ಅನುಕೂಲವಾಗುವ ಕೆಲಸ ಬಾಯಾರಿಕೆಯಲ್ಲಿ, ಹಸಿವೆಯಲ್ಲಿ ನಿರ್ದಿಷ್ಟವಾಗುತ್ತದೆ. ಆದರೆ ಕಾಮವಿಕಾರದಿಂದ ಅದರ ಸಂತೃಪ್ತಿಯ ಸಾಧನ ಗಳನ್ನು ಮನುಷ್ಯ ತನ್ನ ಬಾಳ್ವೆಯಲ್ಲಿ ಬೆಳೆದಂತೆ ಕಲಿಯಬೇಕಷ್ಟೆ. ಸಂಭೋಗ ವೆನ್ನುವುದು ಸಹಜ, ಸ್ವಾಭಾವಿಕಪ್ರವೃತ್ತಿಯೆಂದು ಹೇಳಬರುವುದಿಲ್ಲ.

ತಾಯಿ ಮಗುವನ್ನು ಕಾಪಾಡುವ ಬಯಕೆ ಮೇಲ್ತರದ ಎಲ್ಲ ಪ್ರಾಣಿ ಗಳಲ್ಲಿಯೂ ಕಾಣಬರುತ್ತದೆ; ಕೆಲವೊಮ್ಮೆ ಇದು ಉತ್ಕಟವಾಗಿಯೂ ಇರುವು ದುಂಟು. ಮಾತೃವಾತ್ಸಲ್ಯ ಎನ್ನುವುದು ಕಾಮಾಸಕ್ತಿಯಂತೆಯೇ ವಂಶ ಉಳಿಯಲು ನೆರವಾಗುವ ಪ್ರವೃತ್ತಿ. ಹಸಿವೆ, ನೀರಡಿಕೆಗಳು, ವ್ಯಕ್ತಿ ತಾನು ಉಳಿಯಲೆಂದೇ ಸಿದ್ಧ ವಾದ ಬಯಕೆಗಳು; ಕಾಮಾಸಕ್ತಿ, ಮಾತೃವಾತ್ಸಲ್ಯಗಳು ಹೀಗಿಲ್ಲವಾದರೂ ದೈಹಿಕ ವಾದ ಪ್ರವರ್ತನೆ ಅವುಗಳಲ್ಲುಂಟು. ಪ್ರಾಣಿ ಮರಿಹಾಕಿದೊಡನೆ ಅದಕ್ಕೆ ಆಹಾರ ಕೊಟ್ಟು, ಅದು ಸುಖವಾಗಿರಲು ಸ್ಥಳದ ಸೌಲಭ್ಯಗಳನ್ನು ಒದಗಿಸಿ, ಅದನ್ನು ಎಚ್ಚರದಿಂದ ನೋಡಿಕೊಳ್ಳುತ್ತ, ಅದಕ್ಕೆ ಅಪಾಯ ಒದಗದಂತೆ ಕಾಪಿಡುತ್ತದೆ. ಈ ಕೆಲಸಗಳಿಗೆ ಅಗತ್ಯವಾದ ಶಕ್ತಿ, ಸಂಕಲ್ಪಗಳು ದೈಹಿಕವಾಗಿಯೇ ಒದಗುತ್ತವೆ. ತೊಂದರೆಗೆ ಸಿಕ್ಕಿದ ಮರಿಯನ್ನು ಸಲಹಲು ಕಾತರಬಡುವ ಪ್ರಾಣಿಯಲ್ಲಿ ಪಿಟ್ಯುಟರಿ ಗ್ರಂಥಿಯಿಂದ ಉಕ್ಕಿ ಹರಿಯುವ ಪ್ರೊಲಕ್ಟಿನ್ ಎನ್ನುವ ಶಕ್ತಿರಸ ಮುಖ್ಯವಾದುದು; ಮನುಷ್ಯರಲ್ಲಿಯೂ ಇದೇ ಪ್ರವರ್ತನೆಯಿದೆ. ಮಕ್ಕಳಾಗಬೇಕೆಂಬ ಬಯಕೆ ಸಾರ್ವತ್ರಿಕ ವಲ್ಲವಾದರೂ ಮಾತೃವಾತ್ಸಲ್ಯ ಸಾರ್ವತ್ರಿಕವೇ. ತಾಯಿಗೆ ಮಗುವನ್ನು ಸಲಹ ಬೇಕೆಂಬ ಬಯಕೆ ಅಗತ್ಯವಾಗಿಯೇ ಇರುತ್ತದೆ; ಆದರೆ ಈ ಬಯಕೆಯ ಅಭಿವ್ಯಕ್ತಿ ಯಲ್ಲಿ ವೈವಿಧ್ಯವುಂಟು, ವೈಯಕ್ತಿಕಭೇದವುಂಟು. ಇದರಲ್ಲಿಯೂ ಸಮಾಜದ, ಸಂಸ್ಕೃತಿಯ ಪ್ರಭಾವ ವಿಪುಲವಾಗಿ ಕಾಣಬರುತ್ತದೆ; ಸಂದರ್ಭದಿಂದ ಕಲಿತ ಪಾಠಗಳೂ ನೆರವಾಗುತ್ತವೆ. ತಾಯಿ-ಮಕ್ಕಳ ಸಂಬಂಧ ಮಗು ಬೆಳೆದು ಪ್ರೌಢಾ ವಸ್ಥೆಯನ್ನು ಮುಟ್ಟಿದಾಗ ಬದಲಾಯಿಸುವುದು ಸಹಜ. ಮಾತೃವಾತ್ಸಲ್ಯ ಹೆಚ್ಚಾಗಿ ಕಾಣಿಸಿಕೊಳ್ಳುವುದು ಮಗುವಿನ ಶೈಶವಾವಸ್ಥೆಯಲ್ಲಿಯೇ. ಮಗು ತನ್ನನ್ನು ತಾನು ನೋಡಿಕೊಳ್ಳಲಾರದೆ ದುರ್ಬಲವಾಗಿದ್ದಾಗ, ಪರಾಧೀನವಾಗಿದ್ದಾಗ ತಾಯಿ ಅದರ ನೆರವಿಗೆ ಬರುತ್ತಾಳೆ. ಇದು ಪ್ರಕೃತಿನಿಯಮದಂತೆ, ವಿಕಾಸದ ಅಗತ್ಯದಂತೆ ಮೂಡಿ ಬಂದಿರುವ ಪ್ರವೃತ್ತಿ.

**ಸಮುಸ್ಥಾಪನೆಯ ತತ್ವ.**

ಮೇಲೆ ವಿವರಿಸಿದ ಪ್ರವರ್ತನೆಗಳಿಗೂ ಪ್ರಾಣಿಜೀವನಕ್ಕೂ ನಿಕಟವಾದ ಸಂಬಂಧ ವಿರುವುದು ಸ್ಪಷ್ಟವಾಯಿತಷ್ಟೆ. ಶರೀರದಲ್ಲಿಯೇ ಈ ಪ್ರವರ್ತನೆಗಳಿಗೆ ಅಗತ್ಯವಾದ ಸೌಲಭ್ಯವಿದೆ; ಸಮರ್ಪಕವಾದ ವರ್ತನೆಯಿಂದ ಬಯಕೆಗಳನ್ನು ಪೂರೈಸುವ ವ್ಯವಧಾನ ಶಾರೀರಕವಾದುದು. ಅಭಾವಪರಿಸ್ಥಿತಿಯಿಂದ ಜೀವಕ್ಕೆ ನೆಮ್ಮದಿತಪ್ಪುವುದು, ಅದು ಬಯಕೆಯಾಗಿ ಮೈದುಂಬಿ ಬರುವುದು, ವರ್ತನೆಗೆ ಇದು ಕಾರಣವಾಗುವುದು, ವರ್ತನೆಯಿಂದ ಅಭಾವಪರಿಸ್ಥಿತಿ ಮರೆಯಾಗಿ ಮತ್ತೆ ಸಮಾಧಾನ ಮೂಡುವುದು. ಈ ವಿವರಗಳನ್ನೆಲ್ಲ ಪರಿಶೀಲಿಸಿದಾಗ ಪ್ರವರ್ತನೆಯ ಮೂಲಸೂತ್ರ ಸ್ಪಷ್ಟವಾಗುತ್ತದೆ. ದೇಹವಿಜ್ಞಾನಿಗಳು ಈ ಸೂತ್ರವನ್ನು ಸಮುಸ್ಥಾಪನೆ (Homeostasis) ಎಂದು ನಿರ್ದೇಶಿಸಿದ್ದಾರೆ. ಸಮುಸ್ಥಾಪನೆಯ ಕಲ್ಪನೆ ದೇಹವಿಜ್ಞಾನದ ಆಸರೆಯಲ್ಲಿ ರೂಪು ತಳೆಯಿತಾದರೂ ಮನಃಶಾಸ್ತ್ರದಲ್ಲಿ ಇದರ ಬಳಕೆ ವಿಶೇಷವಾಯಿತು. ಪ್ರವರ್ತನೆಯ ನಿಲುವನ್ನು ವಿವರಿಸಲು ಸಮುಸ್ಥಾಪನೆಯು ಅಧಿಷ್ಠಾನರೂಪವಾದುದು ಎಂದು ಸಿದ್ಧವಾಯಿತು.

ಒಳಗಿನ ಅಥವಾ ಹೊರಗಿನ ಯಾವ ಪ್ರಚೋದನೆಯೂ ಇಲ್ಲದೆ ಪ್ರಾಣಿಯು ತನ್ನಷ್ಟಕ್ಕೆ ತಾನಿದ್ದರೆ ಅದು ಸಮುಸ್ಥಿತಿಯಲ್ಲಿರುತ್ತದೆ; ಯಾವ ಕೆಲಸಮಾಡುವ ಅಗತ್ಯವೂ ಅದಕ್ಕಿರುವುದಿಲ್ಲ, ಏಕೆಂದರೆ ಬಯಕೆಯೂ ಏನೂ ಇರುವುದಿಲ್ಲ. ಆದರೆ ಒಳಗಿನ ಬಯಕೆಯಿಂದಲೋ (ಹಸಿವೆ, ನೀರಡಿಕೆ, ಕಾಮಪ್ರವೃತ್ತಿ ಇತ್ಯಾದಿ) ಅಥವಾ ಹೊರಗಿನ ಪ್ರಲೋಭನದಿಂದಲೋ ಅದರ ಸಮುಸ್ಥಿತಿಗೆ ಅಡ್ಡಿಬಂದಾಗ ಕೆಲಸಕ್ಕೆ ಕೈಹಾಕುತ್ತದೆ. ಸಮುಸ್ಥಿತಿಯ ಭಂಗ ಒದಗಿದಾಗ ಈ ಭಂಗಕಾರಕವಾದ ಪ್ರವೃತ್ತಿಯನ್ನು ದೂರಮಾಡಿ ಮತ್ತೆ ಸಮುಸ್ಥಿತಿಯನ್ನು ಸ್ಥಾಪಿಸುವ ಪ್ರವೃತ್ತಿ ಮೈದಳೆಯುತ್ತದೆ. ಶಾರೀರಕವ್ಯವಸ್ಥೆಯು ಈ ಸಮುಸ್ಥಾಪನೆಯ ಸೌಲಭ್ಯವನ್ನು ಪಡೆದಿದೆ. ಹಸಿದಾಗ ಸಮುಸ್ಥಿತಿಯ ಭಂಗ; ಆಹಾರ ತಿಂದಾಗ ಮತ್ತೆ ಸಮುಸ್ಥಿತಿ. ಪ್ರವರ್ತನೆಯು ಸಮುಸ್ಥಿತಿಯ ಭಂಗದಿಂದ ಉದ್ಭವಿಸಿ ಸಮುಸ್ಥಾಪನೆಯ ಉದ್ದೇಶದಿಂದ ಕೆಲಸಮಾಡುತ್ತದೆ. ಪ್ರಾಣಿಗೆ ಯಾವ ರೀತಿಯ ಪ್ರಚೋದನೆ ಒದಗಿದರೂ ಈ ಈ ಪ್ರಚೋದನೆಯನ್ನು ಸಾಧ್ಯವಾದಷ್ಟೂ ದೂರಮಾಡಿ ತಾನಿದ್ದ ಸ್ಥಿತಿಯನ್ನೇ ಮತ್ತೆ ಪಡೆಯಲು ಯತ್ನಿಸುತ್ತದೆ. ಇದು ಸಮುಸ್ಥಾಪನೆಯ ಕಲ್ಪನೆಯ ಸಾರಾಂಶ.

ಈ ಕಲ್ಪನೆಯನ್ನು ಪ್ಲೂಯ್ಗರ್, ಕ್ಲಾಡ್ ಬರ್ನಾರ್ಡ್, ಬಾನ್‌ಕ್ರಾಫ್ಟ್ ಮತ್ತು ಹಾಲ್ಡೇನ್ ಎನ್ನುವ ದೇಹವಿಜ್ಞಾನಿಗಳು ನಿರೂಪಿಸಿದರು. ಸಮುಸ್ಥಾಪನೆ ಯೆನ್ನುವ ಮಾತನ್ನು ಮೊದಲು ಬಳಸಿದವನು ವಾಲ್ಟರ್ ಬಿ. ಕ್ಯಾನ್ನನ್ (೧೯೩೮) ಎನ್ನುವ ವಿಜ್ಞಾನಿ. ಶರೀರವು ತನ್ನ ರೋಗವನ್ನು ತಾನೇ ನಿವಾರಿಸಿಕೊಳ್ಳುವ, ತನ್ನ

ಆತಂಕಗಳನ್ನು ತಾನೇ ಪರಿಹರಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದು, ತನ್ನ ಪ್ರವೃತ್ತಿಗಳನ್ನು ಉಳಿಸಿಕೊಳ್ಳುವ ಪ್ರವೃತ್ತಿಯನ್ನೂ ಪಡೆದಿದೆ ಎಂದವನ ವಾದ. ಹೊರಗಿನ ಉಷ್ಣಾಂಶದಿಂದ ಸ್ವತಂತ್ರವಾಗಿ ದೇಹಕ್ಕೆ ತನ್ನದೇ ಆದ ಉಷ್ಣಾಂಶದ ನೆಲೆಯಿಲ್ಲವೆ ? ಹೊರಗೆ ಸೆಖೆ ಹೆಚ್ಚಾಗಿದ್ದರೆ ಮೈಯಲ್ಲಿ ಹೆಚ್ಚು ಕಾವೇರುವುದಿಲ್ಲ ; ಹೊರಗೆ ಚಳಿಯಾದರೆ ಮೈಕಾವು ಇಳಿಯುವುದಿಲ್ಲ. ದೇಹದ ಕಾವು ಇದ್ದಷ್ಟೇ ಇರುತ್ತದೆ. ಹಾಗೆ ಇದ್ದಂತೆಯೇ ಇರಲು ದೇಹದಲ್ಲಿ ಒಂದು ಸೌಕರ್ಯವಿದೆ. ಉಷ್ಣಾಂಶ ಏರದಹಾಗೆ, ಕುಗ್ಗದಹಾಗೆ ನಿಯಂತ್ರಣಮಾಡಿಕೊಳ್ಳುವ ಸಾಮರ್ಥ್ಯ ಶರೀರಕ್ಕುಂಟು. ಶರೀರದಲ್ಲಿ ಇಂಥ ಸಮಸ್ಥಿತಿಗಳು ಹಲವಾರು ಇವೆ. ಒಂದೊಂದೂ ನಿಯಂತ್ರಣದ ವ್ಯವಸ್ಥೆಯೇ. ದೈಹಿಕವ್ಯಾಪಾರಗಳು ಈ ಮೂಲಪ್ರವೃತ್ತಿಗೆ ನೆರವಾಗಿ ಸುಸಂಬದ್ಧವಾಗಿವೆ. ಇದನ್ನು ಕ್ಯಾನ್ನನ್ ವಿವರಿಸಿದನು. ದೇಹದಲ್ಲಿ ಸೌಖ್ಯವನ್ನು ಕಾಪಾಡಿಕೊಳ್ಳಲು ಹಲವಾರು ವ್ಯವಧಾನಗಳಿವೆ. ಹೊರಗಿನ ಸೆಖೆ ಹೆಚ್ಚಾದಾಗಲೂ ದೇಹದ ಉಷ್ಣಾಂಶ ಒಂದೇ ನೆಲೆಯಲ್ಲಿರಬೇಕೆಂದು ಬೆವರುತ್ತೇವೆ, ಕೆಲಸ ಕಮ್ಮಿ ಯಾಗುತ್ತದೆ, ನೆರಳನ್ನು ಬಯಸುತ್ತೇವೆ. ಗಾಳಿಯಲ್ಲಿ ಸಾಕಾದಷ್ಟು ಆಮ್ಲಜನಕ ಇಲ್ಲದಿದ್ದಾಗ ನಮ್ಮ ಉಸಿರಾಟದ ವೇಗ ಹೆಚ್ಚುತ್ತದೆ. ದೇಹದ ರಕ್ತ, ಮಾಂಸಖಂಡ ಮೊದಲಾದುವಕ್ಕೆ ಗಾಸಿಯಾದರೆ ಅವನ್ನು ಸರಿಪಡಿಸುವ ಪ್ರವೃತ್ತಿ ಅಲ್ಲಿಯೇ ಮೊದಲಾಗುತ್ತದೆ. ಇವೆಲ್ಲ ದೇಹದ ರಚನೆಯಲ್ಲಿಯೇ ಅಡಗಿರುವ ಸೌಲಭ್ಯಗಳು. ನಮ್ಮ ಅರಿವಿಲ್ಲದೆಯೇ, ನಮ್ಮ ಸಂಕಲ್ಪವಿಲ್ಲದೆ ನಡೆದು ಹೋಗುತ್ತವೆ. ದೇಹಕ್ಕೇ ಒಂದು ಕೌಶಲ, ಚಾಕಚಕ್ಯತೆ, ಸಮಯಾನುಕೂಲ ಪ್ರತಿಭೆ ಇದೆಯೆನ್ನಬಹುದು.

ದೇಹವೆಂದರೆ ನಾನಾಬಗೆಯ ಶಕ್ತಿಗಳ ವ್ಯವಸ್ಥೆ, ನೂರಾರು ಪ್ರವೃತ್ತಿಗಳ ಚದುರಂಗದಾಟ, ಬಯಕೆ-ಬಿಂಕ ಆಗು–ಹೋಗುಗಳ ತುಯ್ದಾಟ. ಪ್ರಚೋದನೆಯಾದೊಡನೆ ಅದು ಪ್ರತಿಕ್ರಿಯೆಯಲ್ಲಿ ಫಲಿಸುತ್ತದೆ. ಪ್ರಚೋದಕವಸ್ತು ದೇಹವನ್ನು ಸೋಕಿದೊಡನೆ ದೇಹರಚನೆಯಲ್ಲಿ ನಿರುದ್ಧವಾದ ಶಕ್ತಿ ಸ್ವತಂತ್ರವಾಗುತ್ತದೆ, ಕಾರ್ಯೋನ್ಮುಖವಾಗುತ್ತದೆ. ಹೀಗೆ ಕೆಲಸಕ್ಕೆ ಬೇಕಾದ ಶಕ್ತಿಯನ್ನು ದೇಹದಿಂದ ಹೊರಹೊಮ್ಮಿಸುವುದೇ ಪ್ರಚೋದಕದ ಲಕ್ಷಣ. ಹೀಗೆ ಪ್ರಚೋದಕದಿಂದ ಒದಗಿದ ಸಂಪರ್ಕದ ಫಲವಾಗಿ ದೇಹರಚನೆಯಲ್ಲಿ ಶಕ್ತಿಯು ಒತ್ತಡ (tension) ಕಾಣಿಸಿಕೊಳ್ಳುತ್ತದೆ. ಹೆಚ್ಚಿನ, ಅನಗತ್ಯವಾದ ಶಕ್ತಿ ಉತ್ಪನ್ನವಾದರೆ ಅದು ಹೊರಗೆ ಹರಿದು ಹೋಗುವವರಿಗೂ ದೇಹಕ್ಕೆ ನೆಮ್ಮದಿಯಿಲ್ಲ ; ಶಕ್ತಿ ವ್ಯಯವಾಗಬೇಕಾದರೆ ಕೆಲಸವೇ ದಾರಿ. ಈ ಕಾರಣದಿಂದಲೇ ಪ್ರಚೋದಕಕ್ಕೆ ಉತ್ತರವಾಗಿ ಪ್ರತಿಕ್ರಿಯೆ ಮೂಡುವುದು. ಪ್ರತಿಕ್ರಿಯೆ ನಡೆಯದಿದ್ದರೆ ಪ್ರಚೋದಿತ ಪ್ರಾಣಿಗೆ ಸಮಾಧಾನವಿಲ್ಲ, ಒಳಗಿನ ಒತ್ತಡಹೆಚ್ಚು ; ಕೆಲಸದಲ್ಲಿ ಈ ಶಕ್ತಿ ಹೊರಹಾಯದಿದ್ದರೆ ದೇಹದ ವ್ಯವಸ್ಥೆಯಲ್ಲಿ ಆಯತಪ್ಪುತ್ತದೆ.

ಯಾವ ಪ್ರಚೋದನೆಗೆ ಯಾವ ಪ್ರತಿಕ್ರಿಯೆ ಸಮರ್ಪಕವಾದುದು, ಉತ್ಪನ್ನವಾದ ಶಕ್ತಿಯನ್ನು ಕರಗಿಸಲು ಕ್ರಿಯೆ ಹೇಗಿರಬೇಕು, ಎಷ್ಟಿರಬೇಕು ಎನ್ನುವುದೂ ನಮ್ಮ ಅರಿವಿಗೆ ಬಿಟ್ಟಿದ್ದಲ್ಲ; ತಾನಾಗಿ ನಡೆಯುವ ಪ್ರವೃತ್ತಿಗಳ ಅವಶ್ಯ ಅಂಗಗಳು ಅವು. ಜೀವಿ ತನ್ನ ತಾದಾತ್ಮ್ಯವನ್ನು ಉಳಿಸಿಕೊಂಡು, ತನ್ನ ಶಕ್ತಿಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿಕೊಂಡು, ತನ್ನ ಸುತ್ತ ಇರುವ ಆವರಣವನ್ನು ತನ್ನ ಅನುಕೂಲಕ್ಕೆ ಅಳವಡಿಸಿಕೊಳ್ಳಲು ಸಮಸ್ಥಾಪನೆ ಪ್ರಯುಕ್ತವಾದುದು. ನಮ್ಮ ಒಂದೊಂದು ಪ್ರವೃತ್ತಿಯಲ್ಲೂ ಈ ಗುಣ ಕಾಣಬರುತ್ತದೆ. ನರಮಂಡಲದ ವ್ಯವಸ್ಥೆ, ರಕ್ತಚಲನೆ, ಆಹಾರ ಅರಗುವುದು, ವ್ಯಕ್ತಿತ್ವದ ನಿರ್ಮಾಣ, ಕಲಿಯುವುದು, ಮಾನಸವ್ಯವಸ್ಥೆ ಇವೆಲ್ಲವೂ ಮೂಲದಲ್ಲಿ ಈ ಸಮಸ್ಥಾಪನೆಯ ವಿವಿಧ ಮುಖಗಳೇ. ದೈಹಿಕ ವಿಜ್ಞಾನಿಗಳ ಕಲ್ಪನೆ ಮನಃಶಾಸ್ತ್ರಜ್ಞರಿಗೂ ಸರಿಯೆಂದು ತೋರಿದುದು ಸಹಜವೇ.

ಹೊರಗಿನಿಂದ ನಮ್ಮನ್ನು ಉತ್ತೇಜಿಸುವ ಪ್ರಚೋದನೆಗಳಿಗೂ, ಒಳಗಿನ ಪ್ರವೃತ್ತಿಗಳಿಗೂ ಸಮನ್ವಯವನ್ನು ಕಲ್ಪಿಸಿದಾಗಲೇ ಬದುಕು ಒಪ್ಪವಾಗುವುದು. ದೇಹದಲ್ಲಿ ಅಂತರ್ಗತವಾದ ಸಾಮರ್ಥ್ಯ ಆವರಣದ ಅಗತ್ಯಗಳನ್ನು ಅನುಸರಿಸಿಯೇ ಕ್ರಿಯಾತ್ಮಕವಾಗುವುದು. ಆವರಣದ ಅನುಸಂಧಾನ, ಪ್ರವೃತ್ತಿಗಳ ಅಭಿವ್ಯಕ್ತಿ ಇವೆರಡೂ ಪರಸ್ಪರ ವಿರುದ್ಧವಾಗಿರದೆ, ಅನ್ಯೋನ್ಯಾಶ್ರಯ ಸಂಬಂಧದಲ್ಲಿ ಇರಬೇಕೆಂದು ಜೀವನಿಯಮ. ಪ್ರಾಣಿಜೀವನದಲ್ಲಿ ವಿಕಾಸ ಒದಗಿದುದು ಇದೇ ಕಾರಣದಿಂದ. ನೀಚವರ್ಗದ ಜಂತುಗಳು ವಾತಾವರಣದೊಂದಿಗೆ ಹೆಣಗಾಡಿ ಉಚ್ಚವರ್ಗದ ಪ್ರಾಣಿಗಳಾಗಿ ಮಾರ್ಪಟ್ಟುದೂ ಈ ನೆಲೆಯಲ್ಲಿಯೇ. ಮನುಷ್ಯನ ದೇಹರಚನೆಯಲ್ಲಿನ ವೈಶಿಷ್ಟ್ಯ, ಅವನ ಬುದ್ಧಿಶಕ್ತಿ, ವ್ಯಕ್ತಿತ್ವದ ಬೆಳವಣಿಗೆ ಇವೆಲ್ಲದರ ತಾತ್ಪರ್ಯ ಪ್ರಚೋದನೆ-ಪ್ರತಿಕ್ರಿಯೆಗಳ ಸಮನ್ವಯವೇ. ಇದನ್ನೇ ತಾತ್ತ್ವಿಕವಾಗಿ ಸಮಸ್ಥಾಪನೆ ಎಂದು ನಿರ್ದೇಶಿಸಿದ್ದಾರೆ.

೬

## ಸಾಂಘಿಕನೆಲೆ

ಬದುಕಿನಲ್ಲಿ ಬಯಕೆಗಳು ನಮ್ಮಿಂದ ಕೆಲಸಮಾಡಿಸುತ್ತವೆ; ಹಾಗಾಗಿ ನಮಗೂ ಜಗತ್ತಿಗೂ ಸಂಬಂಧ ಕೊಡುವುದು–ಕೊಳ್ಳುವುದು ಎರಡೂ ನೆಲೆಗಳಲ್ಲಿ ಇದೆ. ಬಯಕೆಗಳೂ ಅಗತ್ಯಗಳೂ ಎಲ್ಲವೂ ಒಂದೇ ಬಗೆಯುವಲ್ಲ; ಬಯಕೆಗಳಲ್ಲಿ ವೈವಿಧ್ಯವಿರುವಂತೆಯೇ ಅಗತ್ಯದಲ್ಲಿಯೂ ಭೇದವುಂಟು. ಕೆಲವು ಬಯಕೆಗಳು ತೀರಲೇಬೇಕು; ಗಾಳಿಯಿಲ್ಲದೆ, ಆಹಾರವಿಲ್ಲದೆ ಬದುಕುವುದು ಸಾಧ್ಯವೇ? ಕೆಲವು ಬಯಕೆಗಳು ಅಷ್ಟು ತೀವ್ರವಲ್ಲ; ಕಾಮಕ್ರೀಡೆಯ ಬಯಕೆ ತೀರದಿದ್ದರೆ ಯಾವ ಪ್ರಾಣಿಯೂ ಸಾಯುವುದಿಲ್ಲವಷ್ಟೆ? ಈ ದೃಷ್ಟಿಯಿಂದ ಬಯಕೆಗಳ ಅಗತ್ಯದಲ್ಲಿ ತಾರತಮ್ಯವಿದೆ.

ಕೆಲವು ದೈಹಿಕಪ್ರವೃತ್ತಿಗಳಿಗೆ ಅಂಟಿಕೊಂಡವು; ಇವನ್ನು ಸಹಜವೆಂದೆವಷ್ಟೆ. ಜೀವಿಯ ಬದುಕಿಗೆ ಇವು ಅನಿವಾರ್ಯ; ಇಂಥ ಬಯಕೆಗಳಲ್ಲಿ ಅಗತ್ಯ ಹೆಚ್ಚು. ಆದರೆ ಮತ್ತೆ ಕೆಲವು ದೈಹಿಕವಲ್ಲದೆ ಸಾಂಘಿಕ. ಅವುಗಳ ಪ್ರಯೋಜನ ನಾಲ್ಕೂಜನ ನೆಮ್ಮದಿಯಿಂದ ಅನ್ಯೋನ್ಯವಾಗಿ ಬಾಳುವುದು; ಬದುಕಿನ ರೀತಿಯನ್ನೂ ಪ್ರಗತಿಯಲ್ಲಿ ಒದಗಿಸುವುದು. ಇವು ಅನಿವಾರ್ಯವಲ್ಲದಿದ್ದರೂ ಅಗತ್ಯವೇ. ಇವುಗಳು ಸಹಜವಲ್ಲ. ನಾವಾಗಿ ಪ್ರಯತ್ನದಿಂದ ಪಡೆದುಕೊಳ್ಳುತ್ತೇವೆ ಎಂದರೂ ಅವನ್ನು ಪಡೆದುಕೊಳ್ಳುವ ಸಾಮರ್ಥ್ಯ, ಸೌಲಭ್ಯಗಳಾದರೂ ಸಹಜವಾಗಿ ಇರಬೇಕು.

ಬಯಕೆಗಳು ಸಂಸ್ಕೃತಿಯಿಂದ ನಿರ್ದಿಷ್ಟವಾಗುತ್ತವೆ. ಹತ್ತಾರು ಜನ ಒಟ್ಟಾರೆ ಕಲೆತು ಸಹಬಾಳ್ವೆಯ ತತ್ವವನ್ನನುಸರಿಸಿದಾಗ ಅವರು ಒಂದು ಸಂಸ್ಕೃತಿಯನ್ನು, ಎಂದರೆ ಜೀವನಸಂವಿಧಾನವನ್ನು, ಬೆಳೆಸಿಕೊಳ್ಳುತ್ತಾರೆ; ಜನರ ನಡುವೆ ಇರಬೇಕಾದ ವರ್ತನೆಯನ್ನು ರೂಪಿಸಿಕೊಳ್ಳುತ್ತಾರೆ. ಸಮಾಜಜೀವನದಲ್ಲಿ ನಮ್ಮ ಪ್ರವರ್ತನೆ ಏನು, ಸಮಾಜದಿಂದ ನಮಗೊದಗುವ ಪ್ರಚೋದನೆಗಳು ಯಾವುವು, ನಮ್ಮ ಸ್ವಂತದ ಬಯಕೆಗಳಿಗೂ (personal motives) ಸಂಘದ ಬಯಕೆಗಳಿಗೂ ಹೊಂದಾಣಿಕೆ ಹೇಗೆ, ಮನುಷ್ಯಜೀವನದ ಲಕ್ಷ್ಯ ಏನು ಈ ಸಮಸ್ಯೆಗಳೆಲ್ಲ ಇಲ್ಲಿ ಒದಗುತ್ತವೆ. ಹಲವಾರು ಅಂಗಗಳುಳ್ಳ ದೇಹ ಹೇಗೆ ಏಕತಾನದಿಂದ ಕೆಲಸ ಮಾಡುವುದೋ ಹಾಗೆಯೇ ಹಲವಾರು ವ್ಯಕ್ತಿಗಳಿರುವ ಸಮಾಜವೂ ಏಕತಾನದಿಂದ ಕೆಲಸಮಾಡುತ್ತದೆ. ಅಲ್ಲಿ ದೈಹಿಕವ್ಯವಸ್ಥೆಯಿರುವಂತೆಯೇ ಇಲ್ಲಿ ಸಮಾಜ ಸಂಘಟನೆ ಯಿದೆ. ಯಾವೊಬ್ಬ ವ್ಯಕ್ತಿಯಿಂದಲೂ ಸಮಾಜಕ್ಕೆ ಗಾಸಿ ಒದಗದಂತೆ ಇಲ್ಲಿಯೂ ಸಮಸ್ಥಾಪನೆಯ ತತ್ತ್ವ ಕ್ರಿಯಾಶೀಲವಾಗಿದೆ. ಸಮಾಜದಿಂದ ವ್ಯಕ್ತಿಗೆ ಒದಗುವ ಪ್ರೇರಣೆ, ವ್ಯಕ್ತಿಯಿಂದ ಸಮಾಜದ ಬಗ್ಗೆ ನಡೆಯುವ ಪ್ರತಿಕ್ರಿಯೆ ಇವೆರಡೂ ಏರುಪೇರಿಲ್ಲದೆ ಸಮನಾಗಿರಲೆಂದು ಸಾಮಾಜಿಕ ಬಯಕೆಗಳೂ ಅಗತ್ಯಗಳೂ ರೂಪು ಗೊಂಡಿವೆ.

ಸಾಂಘಿಕ ನೆಲೆಯಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಒಂದೊಂದು ಪ್ರಯೋಜನದೃಷ್ಟಿ ಇರುತ್ತದೆ. ಬದುಕಿನಲ್ಲಿ ತಾನೇನು ಮಾಡಬೇಕು ಎನ್ನುವುದನ್ನು ನಿರ್ಧರಿಸಿಕೊಳ್ಳುವ ಅಗತ್ಯ ಪ್ರತಿಯೊಬ್ಬನಿಗೂ ಕಾಣಬರುತ್ತದೆ. ವ್ಯಕ್ತಿ ಬೆಳೆದುಬಂದ ರೀತಿಯಲ್ಲಿ, ಅವನು ಎಳೆತನದಿಂದ ವಿಕಸಿತನಾದ ಶೈಲಿಯಲ್ಲಿ, ಅವನ ಜೀವನಲಕ್ಷ್ಯ (life-goal) ಮೂಡುತ್ತದೆ. ಈ ಜೀವನಲಕ್ಷ್ಯವೇ ಅವನ ಕೆಲಸಗಳಿಗೆ ಪ್ರಚೋದಕವಾಗುತ್ತದೆ; ಇದು ವೈಯಕ್ತಿಕ-ಸಾಮಾಜಿಕ ನೆಲೆಯ ಪ್ರವರ್ತನೆ. ಲಕ್ಷ್ಯ ಸಿದ್ಧವಾದೊಡನೆ ಅದಕ್ಕೆ ಅನುಸಾರವಾಗಿ, ಸಂದರ್ಭೋಚಿತವಾಗಿ, ಮನುಷ್ಯನು ತನ್ನ ಶಕ್ತಿಯಿದ್ದಂತೆ ತಾನು ಯಾವ ಕ್ರಿಯಾಸಿದ್ಧಿಯನ್ನು ಪಡೆಯಬೇಕೆಂದು ಬಯಸುತ್ತಾನೋ ಅದೂ ಪ್ರವರ್ತನೆ ಯಾಗಿಯೇ ಪರಿಣಮಿಸುತ್ತದೆ (level of aspiration). ತಾನೇ ರೂಪಿಸಿಕೊಂಡ ಗುರಿಯನ್ನು ಮುಟ್ಟುವುದು ಅಸಾಧ್ಯವಾದಾಗ ವ್ಯಕ್ತಿ ಇನ್ನಷ್ಟು ಹುರುಪಿನಿಂದ,

ಛಲದಿಂದ ಕೆಲಸಮಾಡಿಯಾನು; ಅಥವಾ ಗುರಿ ಅಪ್ರಾಪ್ಯ ಎಂದು ಖಚಿತವಾದರೆ ಅದಕ್ಕಿಂತ ಕೆಳಮಟ್ಟದ, ಸುಲಭವಾಗಿ ಮುಟ್ಟಬಹುದಾದ, ಗುರಿಯನ್ನು ಇಟ್ಟುಕೊಂಡಾನು; ಅಥವಾ ಗುರಿಯನ್ನು ಸೇರಲು ಸಂದರ್ಭ ಅನುಕೂಲವಿಲ್ಲದಿದ್ದರೆ ಬೇರೊಂದು ಸಂದರ್ಭವನ್ನು ಕಲ್ಪಿಸಿಕೊಳ್ಳುವ, ಇಲ್ಲವೇ ಆ ಸಂದರ್ಭವನ್ನು ಬಳಸಿ ಗುರಿಯನ್ನು ಮುಟ್ಟುವ ಬಯಕೆಯನ್ನು ಹೊಂದಿಯಾನು.

ಯಾವ ಕಾರಣದಿಂದಲಾದರೂ ಗುರಿಯನ್ನು ಸೇರುವುದು ಆಗದಾದರೆ ಪ್ರತೀಕ್ಷಾಭಂಗವಾಗಿ, ಇದರಿಂದ ಮಾನಸಿಕಬೇಸರಿಯೊದಗಿದರೂ ಒದಗಬಹುದು. ಜೀವನಲಕ್ಷ್ಯದಿಂದ ಒದಗುವ ಪ್ರಚೋದನೆಯನ್ನು ಚರ್ಚಿಸುವಾಗ ನಿರಾಶೆಯ ಪ್ರಸ್ತಾಪವೂ ಅಗತ್ಯವಾಗಿ ಬರುತ್ತದೆ. ತನ್ನ ಸಾಮರ್ಥ್ಯದ ಬಗ್ಗೆ ವ್ಯಕ್ತಿಗಿರುವ ವಿಶ್ವಾಸ ಅಥವಾ ಆತಂಕ ಇವೂ ಅವನ ಸಾಧನೆಯ ಮೇಲೆ ಪ್ರಭಾವವನ್ನು ಬೀರುತ್ತವೆ. ಬಾಹ್ಯಪ್ರಚೋದನೆಗಳೂ (incentives) ಪ್ರಾಣಿಜೀವನದಲ್ಲಿ, ತತ್ರಾಪಿ ಮನುಷ್ಯ ಜೀವನದಲ್ಲಿ, ತುಂಬ ಕೆಲಸ ಮಾಡುತ್ತವೆ. ಬಾಹ್ಯಪ್ರಚೋದನೆಗಳಿಗೂ ಪ್ರವರ್ತನೆಗೂ ನಿಕಟವಾದ ಸಂಬಂಧವುಂಟು. ಪ್ರವರ್ತನೆಯಿಂದ ಒದಗುವ ಉತ್ಸಾಹ ಸಾಕಷ್ಟು ಇಲ್ಲದಿದ್ದಾಗ ಬಾಹ್ಯಪ್ರಚೋದನೆ ಅಗತ್ಯವಾದ ಸ್ಫೂರ್ತಿಯನ್ನು ಒದಗಿಸುತ್ತದೆ.

ಪರಿಚ್ಛೇದ ಐದು

# ಭಾವಪ್ರವರ್ತನೆ–ಸಂವೇದನೆ

೧

**ಭಾವಜೀವನ**

ಪ್ರಾಣಿಜೀವನದಲ್ಲಿ ಭಾವೋದ್ರೇಕಕ್ಕೆ, ಅನುರಾಗಕ್ಕೆ, ಅನುಕಂಪಕ್ಕೆ, ವೇದನೆಗೆ ಮಹತ್ತ್ವವುಂಟು. ಪ್ರವರ್ತನೆಯಲ್ಲಿ ಇದು ಅವಶ್ಯ ಅಂಗ. ಪ್ರವರ್ತನೆಯು ಜೀವಿಯ ಸಮಾಧಾನಸ್ಥಿತಿಯನ್ನು ತಪ್ಪಿಸಿ, ಒಳಗೆ ಒತ್ತಡವನ್ನು ಒದಗಿಸಿ, ಕಾರ್ಯೋನ್ಮುಖ ಮಾಡುವಂತೆಯೇ ಭಾವವೂ ಜೀವಿಯ ನೆಮ್ಮದಿಯನ್ನು ತಪ್ಪಿಸುತ್ತದೆ, ಒತ್ತಡವನ್ನು ಉಂಟುಮಾಡುತ್ತದೆ, ಕ್ರಿಯೋನ್ಮುಖವಾಗುತ್ತದೆ. ಭಾವ ಎನ್ನಲು ಇಂಗ್ಲೀಷಿನಲ್ಲಿರುವ 'ಇಮೋಷನ್' ಎನ್ನುವ ಪದವು ಕದಡುವುದು, ಉತ್ತೇಜಿಸುವುದು, ಸಮಸ್ಥಿತಿಯನ್ನು ತಪ್ಪಿಸುವುದು ಎನ್ನುವ ಅರ್ಥವನ್ನು ಕೊಡುತ್ತದೆ. ಭಾವವೆಂದರೆ ಉದ್ರೇಕದ ಪರಿಸ್ಥಿತಿ; ಭಾವದಲ್ಲಿ ಪ್ರಾಣಿಯು ಉದ್ವಿಗ್ನವಾಗಿರುತ್ತದೆ, ಆಕ್ರಾಂತವಾಗಿರುತ್ತದೆ. ನಮ್ಮಲ್ಲಿ ರಸಗಳ ಚರ್ಚೆ ಮಾಡುವಾಗ ಇದೇ ಅರ್ಥದಲ್ಲಿ ಭಾವವೆನ್ನುವ ಮಾತನ್ನು ಬಳಸುತ್ತೇವೆ. ಭಾವವು ಮಾನಸಿಕ ಅನುಭವವಾದರೂ ದೈಹಿಕಪ್ರವೃತ್ತಿಯೇ; ಅದರಲ್ಲಿ ಹೃದಯಕ್ಕೆ ದುಗುಡ, ಪ್ರೀತಿ, ಜುಗುಪ್ಸೆ, ರೋಷ, ಮೊದಲಾದ ವಿಕಾರಗಳು ಅಂಟಿಕೊಂಡರೂ ಪ್ರಮುಖವಾಗಿ ದೇಹಸಂಬಂಧವಾದ ಪ್ರವೃತ್ತಿಗಳೇ ಪಾತ್ರವನ್ನು ವಹಿಸುತ್ತವೆ.

ಪ್ರವರ್ತನೆಯು ಭಾವವನ್ನು ಉತ್ಪಾದನೆಮಾಡುವುದರಿಂದಲೇ ಅಷ್ಟು ಪ್ರಭಾವ ಶಾಲಿಯಾಗಿರುತ್ತದೆ. ಕ್ರಿಯೆಗೆ ಅಗತ್ಯವಾದ ಶಕ್ತಿಯನ್ನು ಒದಗಿಸಲು ಪ್ರವರ್ತನೆ ಯಂತ್ರವಾದರೆ ಭಾವ ಅದರ ಸಾಧನ. ಒಂದೇ ವ್ಯವಸ್ಥೆಯ ಎರಡು ಮುಖ ಗಳಂತೆ ಇವು. ಪ್ರವರ್ತಿತವಾದ ಪ್ರಾಣಿಯಲ್ಲಿಯೇ ಭಾವವು ವ್ಯಕ್ತವಾಗುವುದು. ಪ್ರಾಣಿಯ ಉದ್ದೇಶಸಾಧನೆಗೆ ಪ್ರವರ್ತನೆಯು ಎಷ್ಟು ಮುಖ್ಯವೋ ಭಾವವೂ ಅಷ್ಟೇ ಮುಖ್ಯ. ಪ್ರವರ್ತನೆಯಲ್ಲಿ ಸ್ಪಷ್ಟವಾದ ದೈಹಿಕವಿಕಾರಗಳು ಇರುವಂತೆಯೇ ಭಾವದಲ್ಲಿಯೂ ನಿರ್ದಿಷ್ಟ ದೈಹಿಕವಿಕಾರಗಳು ಇರುತ್ತವೆ. ಕೋಪಗೊಂಡಾಗ ಒದಗುವ ಶಾರೀರಕ ಅವಸ್ಥೆ ಅಥವಾ ದುರವಸ್ಥೆ ಯಾರಿಗೆ ತಿಳಿಯದು ? ಪ್ರೀತಿ ಯಿಂದ ದೇಹ ಉತ್ತೇಜಿತವಾಗುವಾಗ ಒದಗುವ ದೈಹಿಕ ಅನುಭವಗಳನ್ನು ಯಾರು ಅರಿಯರು ? ದೈಹಿಕವಾದ ವಿಕಾರಗಳಿಲ್ಲದೆ ಯಾವ ಭಾವವೂ ಇರದು ಎಂದರೆ ಉತ್ಪ್ರೇಕ್ಷೆಯಲ್ಲ.

-09461

ದೇಹ ವಿಕಾರಗಳು ದೇಹದಾದ್ಯಂತವೂ ನಡೆಯುತ್ತವೆ, ಎಲ್ಲ ಪ್ರವೃತ್ತಿಗಳನ್ನೂ ಅಡ್ಡಗಿಸುತ್ತವೆ, ನರವ್ಯವಸ್ಥೆಯನ್ನೂ ಶಿಥಿಲಗೊಳಿಸುತ್ತವೆ. ಹೀಗೆಂದೇ ಭಾವವು ಏಕದೇಶೀಯವಾದುದಲ್ಲ, ಸಾರ್ವದೈಹಿಕವಾದುದು. ಭಾವವೆಂದರೆ ವ್ಯವಸ್ಥೆಯ ಭಂಗ, ಅಲ್ಲೋಲಕಲ್ಲೋಲ ಪರಿಸ್ಥಿತಿ, ಅಶಾಂತಸ್ಥಿತಿ. ಇದು ಹಿತಕರವಲ್ಲದುದರಿಂದ, ಶ್ರಮ ವಾದುದರಿಂದ ಇದನ್ನು ಪರಿಹರಿಸಿಕೊಳ್ಳಬೇಕೆನ್ನುವ ತವಕ ಜೀವಿಗಿರುತ್ತದೆ. 'ಅಶಾಂತಸ್ಯ ಕುತಃ ಸುಖಂ ?' ಇಂಥ ಗೊಂದಲದ ಪರಿಸ್ಥಿತಿಯನ್ನು ಪರಿಹರಿಸಿ ಕೊಳ್ಳುವ ಕಾತರವೇ ಭಾವದ ಮುಖ್ಯಲಕ್ಷಣ. ಈ ಕಾತರದಿಂದಾಗಿ ಒಡನೆಯೇ ಕೆಲಸಮಾಡಬೇಕೆಂಬ ಆತುರ ಒದಗುತ್ತದೆ ; ಇದನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಕಷ್ಟ. ಕೋಪಬಂದಾಗ ಮುಷ್ಟಿಯಿಂದ ಮೇಜನ್ನು ಕುಟ್ಟುವ ಅಧಿಕಾರಿಗಳನ್ನು ನೋಡಿಲ್ಲವೆ ? ಬಯ್ದಾಡುವ ಮನುಷ್ಯರನ್ನು ನೋಡಿಲ್ಲವೆ ? ಶಾಂತವಾಗಿದ್ದಾಗ ಅವರಲ್ಲಿ ಸಂಯಮವಿದ್ದೀತು, ಉದ್ವಿಗ್ನರಾದಾಗ ಇರದು. ಭಯಗೊಂಡಾಗ ಕೈಕಾಲು ನಡುಗುವುದು, ಎದೆ ಡವಡವನೆ ಬಡಿದುಕೊಳ್ಳುವುದು, ಮುಖ ಕಪ್ಪಿಡುವುದು, ಕಣ್ಣರಳು ವುದು ಇವೆಲ್ಲ ನಡೆಯಲಿರುವ ಕೆಲಸದ ಅಗತ್ಯವನ್ನು ಸೂಚಿಸುವಂಥವು. ಈ ಪ್ರತಿಕ್ರಿಯೆಗಳು ಶಟ್ಟನೆ ತೋರಿಕೊಳ್ಳುತ್ತವೆ ; ಕೆಲಸ ಅನಿವಾರ್ಯವಾಗುತ್ತದೆ. ಶಾಂತವೇಳೆಯಲ್ಲಿ ಮೂಡಿಕೊಂಡ ಸಂಕಲ್ಪಗಳು ಗಾಳಿಗೆ ತೂರಿಹೋಗುತ್ತವೆ ; ಭಾವಾವೇಶದ ಮನುಷ್ಯನೇ ಬೇರೆ, ಸಮಾಧಾನಚಿತ್ತದ ಮನುಷ್ಯನೇ ಬೇರೆ. ಭಾವದ ಅಮಲಿನಲ್ಲಿ ಆಲೋಚನೆ, ವಿಚಾರ, ಚಾತುರ್ಯ, ಪರಿಶೀಲನೆ, ವಿಮರ್ಶೆ ಇವೊಂದೂ ನಡೆಯುವುದಿಲ್ಲ. ಆವಿಷ್ಟನಂತೆ, ಹುಚ್ಚನಂತೆ, ಉನ್ಮತ್ತನಂತೆ ಭಾವೋದ್ರೇಕದಲ್ಲಿ ಮನುಷ್ಯ ವರ್ತಿಸುತ್ತಾನೆ. ಇದು ಇಡೀ ವ್ಯಕ್ತಿತ್ವದ ವರ್ತನೆ.

ಭಾವದ ಆವೇಶದಲ್ಲಿದ್ದಾಗ ದೃಷ್ಟಿ ಸಂಕುಚಿತವಾಗುತ್ತದೆ. ಆವರಣದಲ್ಲಿ ಭಾವಮೂಲವಾದ ವಸ್ತುವಿನ ಅಥವಾ ಪ್ರಸಂಗದ ಕಡೆಗೇ ಗಮನ ಉಳಿಯುತ್ತದೆ; ಇತರ ವಿಚಾರಗಳು ಕಂಡರೂ ಗಮನಕ್ಕೆ ಬರುವುದಿಲ್ಲ. ನಮ್ಮ ಅರಿವಿನ ವ್ಯಾಪ್ತಿಯೇ ಸಣ್ಣದಾದಂತೆ. ಜಗತ್ತಿನಲ್ಲಿ ಇದೊಂದು ಪ್ರಸಂಗವೇ ಮುಖ್ಯ, ಉಳಿದುದೆಲ್ಲ ಗೌಣ ಎಂದು ಭಾಸವಾಗುವಂತೆ. ಆವೇಶ ನಮ್ಮ ದೃಷ್ಟಿಯನ್ನು ಕುಗ್ಗಿಸಿಬಿಡುತ್ತದೆ. ಯಾರಮೇಲಾದರೂ ಸಿಟ್ಟುಗೊಂಡರೆ ಅವರು ಆ ಸಂದರ್ಭದಲ್ಲಿ ಇರುವಂತೆ ಮಾತ್ರ ನಮಗೆ ಗೋಚರ ವಾಗುತ್ತಾರೆ; ಅವರು ಮೊದಲು ಇದ್ದ ಸ್ಥಿತಿ, ಮಾಡಿದ ಉಪಕಾರ, ಅವರ ಸೌಜನ್ಯ ಎಲ್ಲವೂ ನಮ್ಮ ಅರಿವಿನಿಂದ ಜಾರುತ್ತದೆ. ಪ್ರೀತಿಯಾದರೂ ಹಾಗೆಯೇ. ಆ ಕಾಲಕ್ಕೆ ಕಂಡುದೇ ದಿಟ. ನಮ್ಮ ಪ್ರತಿಕ್ರಿಯೆ ಇಡೀ ವ್ಯಕ್ತಿತ್ವಕ್ಕಲ್ಲ, ಒಂದು ಪ್ರಸಂಗಕ್ಕೆ ಮಾತ್ರ ಸೀಮಿತ. ಏಕೆಂದರೆ ಯಾವ ಭಾವವಾಗಲಿ, ಅದು ಪ್ರಸಂಗವಶವಾದುದು. ಪ್ರಸಂಗದ ಅಥವಾ ಸಂದರ್ಭದ ಔಚಿತ್ಯವೇ ಭಾವದ ಬೆಲೆ. ಯಾವ ಭಾವವೂ ಸಂದರ್ಭಾತೀತವಾಗಿ ನಿಲ್ಲಲಾರದು. ಸಿಟ್ಟು ಯಾರಮೇಲೂ ಇರದೆ ಹೇಗಿರಲು ಸಾಧ್ಯ? ಪ್ರೀತಿ ಯಾವ ವ್ಯಕ್ತಿಯನ್ನೂ ಉದ್ದೇಶಿಸದೆ ಇರಲು ಸಾಧ್ಯವೆ?– ಕರುಣೆ, ಸಹಾನುಭೂತಿ, ದುಃಖ, ಸುಖ ಇವೆಲ್ಲ ಸಾಪೇಕ್ಷವಾದುವು: ಸಂದರ್ಭಾಶ್ರಿತವಾದ ಪ್ರವೃತ್ತಿಗಳು ಅವು.

ಪ್ರಚೋದನೆಯಿಲ್ಲದೆ ಭಾವ ಉತ್ಪನ್ನವಾಗುವುದಿಲ್ಲ. ಆವರಣದಿಂದ ಹಿತವೋ ಅಹಿತವೋ ಯಾವುದಾದರೊಂದು ವ್ಯಾಪಾರ ವ್ಯಕ್ತಿಯನ್ನು ಮುಟ್ಟಿದಾಗಲೇ ವ್ಯಕ್ತಿಯಲ್ಲಿ ಭಾವ ತಲೆದೋರುವುದು. ಎಂದರೆ ಭಾವವೊಂದು ಪ್ರತಿಕ್ರಿಯೆ. ಪ್ರಯೋಜನವಿಲ್ಲದೆ, ಪ್ರೇರಣೆಯಿಲ್ಲದೆ ಭಾವ ಒದಗಲಾರದು. ಪ್ರಚೋದನೆಯು ಸಂದರ್ಭಾಧೀನವಾದುದು. ಸಂದರ್ಭ ವಿವರವಾಗಿ ತೋರಿದಾಗಲೇ ಪ್ರಚೋದಕಸಾಮಗ್ರಿಗೆ ಪ್ರವರ್ತನೆಯ ಸಾಮರ್ಥ್ಯ ಬರುವುದು. ಪ್ರತಿಕ್ರಿಯೆಯೂ ಸಂದರ್ಭಶುದ್ಧವಾಗಿದ್ದರೇ ಸಾರ್ಥಕ ವಾಗುತ್ತದೆ, ಇಲ್ಲವಾದರೆ ಅದರಿಂದ ಅನರ್ಥವೇ. ಕೋಪಗೊಂಡಾಗ ಬಯ್ದಾಡಿದರೆ, ಮೇಜು ಕುಟ್ಟಿದರೆ ಪ್ರಯೋಜನವಿದ್ದೀತು; ಸಂದರ್ಭದ ಕಾವು ಆರಿದಮೇಲೆ ಈ ಕೆಲಸಗಳನ್ನು ಮಾಡಿದರೆ ನಗೆಪಾಟಲು! ಸಂದರ್ಭದ, ಸನ್ನಿವೇಶದ ಅಗತ್ಯದಿಂದ ವಿವಶನಾದ ವ್ಯಕ್ತಿ ತನ್ನ ಅರಿವಿಲ್ಲದೆಯೇ ಭಾವಕ್ಕೆ ಎಡೆಗೊಡುತ್ತಾನೆ.

ಭಾವ ಅಭಿವ್ಯಕ್ತವಾಗದಿದ್ದರೆ ಪ್ರಾಣಿಗೆ ನೆಮ್ಮದಿಯಿಲ್ಲವೆನ್ನುವುದು ಗಮನಾರ್ಹ ವಾದ ವಿಚಾರ. ಪ್ರಸಂಗದ ಒತ್ತಡ, ಒಳಗಿನ ಪ್ರವರ್ತನೆ ಇವುಗಳು ಮನುಷ್ಯನನ್ನು ಎಳೆದಾಡಿ ಅವನಲ್ಲಿ ಭಾವಾವೇಶವನ್ನು ಮೂಡಿಸುತ್ತವೆ. ಅದರಿಂದ ನಿರ್ದಿಷ್ಟ ಕ್ರಿಯೆಗಳು ನಡೆದು ಹೋಗುತ್ತವೆ. ಕೋಪ ಬಂದಾಗ ಕೈಗೆ ಸಿಕ್ಕಿದ ವಸ್ತುವನ್ನು ಎಸೆಯುವವರುಂಟು; ಭಯಗೊಂಡಾಗ ಓಡಿಹೋಗುವವರುಂಟು; ಜುಗುಪ್ಸೆಯಿದ್ದಾಗ ಮಾತಿನಿಂದ ಮೋರೆಯಿಂದ ಅದನ್ನು ತೋರಿಸುವವರುಂಟು. ಇವೆಲ್ಲ ಭಾವದ ಅಭಿವ್ಯಕ್ತಿಗಳು. ಹೀಗೆ ಕೆಲಸವಾದೊಡನೆ ಭಾವದ ಕಾವು ಇಳಿಯುತ್ತದೆ. ಎದುರಿಗೆ

ಇದ್ದವರನ್ನು ದಂಡಿಸಿದೊಡನೆ ಸಿಟ್ಟು ಶಮನವಾಗುತ್ತದೆ. ಭಾವ ಒಳಗಿದ್ದು ಅದನ್ನು ಕೆಲಸದಲ್ಲಿ ಹರಿಯಬಿಡದಿದ್ದರೆ ಒಳಗಿನ ಒತ್ತಡ ಇನ್ನಷ್ಟು ಬಿಗಿಯಾಗುತ್ತದೆ, ವ್ಯಕ್ತಿಯ ಆರೋಗ್ಯ ತಪ್ಪುತ್ತದೆ. ಅಗ್ನಿಪರ್ವತ ಹೊಗೆಯಾಡಿ ಬೆಂಕಿ ಕಾರಿದರೆ ಅದರಿಂದ ಇನ್ನೇನು ಅಪಾಯವಿಲ್ಲ; ಮುಂದೆ ಹಲವು ಕಾಲ ಅದು ತಾನು ನೆಮ್ಮದಿಯಿಂದಿದ್ದು ಜನರನ್ನು ನೆಮ್ಮದಿಯಲ್ಲಿ ನಿಲ್ಲಿಸುತ್ತದೆ. ಆದರೆ ಹೊಗೆಯಾಡದ, ಬೆಂಕಿ ಕಾರದೆ ಒಳಗೇ ಗುಡಿಗುಡಿಸುತ್ತಿರುವ ಅಗ್ನಿಪರ್ವತ ಭಯಾನಕವಾದುದು; ಬೆಟ್ಟವೇ ಹೋಳು ಹೋಳಾಗಿ ಸೀಳಿ ಹೋಗಬಹುದು. ಒಳಗಿನ ಬೇಗೆ ಹೊರಗೆ ಹರಿದರೆ ಅದರಿಂದ ಸಮಾಧಾನ. ಹಾಗೆಯೇ ಭಾವವೂ ಅಭಿವ್ಯಕ್ತವಾದರೆ ಅದರಿಂದ ಪ್ರಯೋಜನವುಂಟು. ನಿರುದ್ಧವಾದ ಭಾವ ಅನರ್ಥಕಾರಿ.

೨

## ದೈಹಿಕವಿಕಾರಗಳು

ಭಾವದ ಅಭಿವ್ಯಕ್ತಿ ಇಡೀ ದೇಹದ ಪ್ರತಿಕ್ರಿಯೆ. ದೇಹದ ಎಲ್ಲ ಅಂಗ, ಉಪಾಂಗ, ಪ್ರವೃತ್ತಿಗಳೂ ಇದರಲ್ಲಿ ಪಾಲ್ಗೊಳ್ಳುತ್ತವೆ. ದೈಹಿಕ ವಿಕಾರಗಳು ಸಾರ್ವತ್ರಿಕವಾಗಿ ಒದಗುತ್ತವೆ. ದೈಹಿಕಪ್ರವೃತ್ತಿಗಳಿಗೂ ಭಾವನಿಷ್ಪತ್ತಿಗೂ ನಿಕಟವಾದ ಸಂಬಂಧವಿದೆ. ನಮ್ಮಲ್ಲಿ ಭಾವ ಒದಗಿದಾಗ ಅದರ ಪ್ರಭಾವದಿಂದ ದೇಹದಲ್ಲಿ ವಿಕಾರಗಳು ಒದಗುತ್ತವೆ ಎಂದಷ್ಟೆ ನಮ್ಮ ಸಾಮಾನ್ಯವಾದ ನಂಬಿಕೆ? ಮಾನಸಿಕವಾದ ಭಾವದಿಂದ ದೇಹ ಉದ್ರಿಕ್ತವಾಗುತ್ತದೆ ಎಂದು ಇದರ ತಾತ್ಪರ್ಯ; ಭಾವದ ಅನುಭವ ಮೊದಲು, ಅದರಿಂದ ತಾವಾಗಿ ಒದಗುವ ದೈಹಿಕವಿಕಾರಗಳು ಅನಂತರ. ಇದು ಒಂದು ಮತವಾದರೆ, ಭಾವದ ಅನುಭವವೇ ದೈಹಿಕವಿಕಾರಗಳಿಂದ ಉಂಟಾಗುತ್ತದೆ ಎನ್ನುವ ಇನ್ನೊಂದು ಮತವೂ ಉಂಟು. ವಿಲಿಯಂ ಜೇಮ್ಸ್ ಎನ್ನುವ ಅಮೆರಿಕಾದೇಶದ ಮನಃಶಾಸ್ತ್ರಜ್ಞ ೧೮೮೪ರಲ್ಲಿಯೂ ಕಾರ್ಲ್ ಲಾಂಗೆ ಎನ್ನುವ ದೇಹವಿಜ್ಞಾನಿ ೧೮೮೫ರಲ್ಲಿಯೂ ಸ್ವತಂತ್ರವಾಗಿ ಈ ಎರಡನೆಯ ಮತವನ್ನು ಎತ್ತಿ ಹಿಡಿದರು. ಈ ವಾದವನ್ನು ಜೇಮ್ಸ್-ಲಾಂಗೆ ವಾದವೆನ್ನುತ್ತಾರೆ. ಈ ವಾದದ ಪ್ರಕಾರ, ಆವರಣದಲ್ಲಿನ ಪ್ರಚೋದಕ ಸಾಮಗ್ರಿಯ ಸಂಪರ್ಕವಾದೊಡನೆ ವ್ಯಕ್ತಿಯಲ್ಲಿ ದೈಹಿಕ ವಿಕಾರಗಳು ಉಂಟಾಗುತ್ತವೆ; ಈ ವಿಕಾರಗಳು ನಡೆಯುತ್ತಿರುವಾಗಲೇ ಅವುಗಳ ಅರಿವು ಮಸ್ತಿಷ್ಕದಲ್ಲಿ ಪ್ರತಿಧ್ವನಿತವಾದಾಗ ಭಾವ ಒದಗುತ್ತದೆ. ದೈಹಿಕ ವಿಕಾರಗಳನ್ನು ಭಾವಾನುಭವದಿಂದ ಬೇರ್ಪಡಿಸಿದರೆ ಭಾವಾನುಭವವೇ ಇರದು. ಹಾವನ್ನು ಕಂಡೊಡನೆ ಓಡಿದಾಗ ಭಯವೆನ್ನುವ ದೈಹಿಕವ್ಯಾಪಾರವನ್ನು ಅನುಸರಿಸಿ ಭಯದ ಅನುಭವ ಏಳುತ್ತದೆ. ಮೊದಲು ನಡುಕ, ಅನಂತರ ಭಯ; ಭಯದಿಂದ ನಡುಕವಲ್ಲ, ನಡುಕದಿಂದ ಭಯ. ಸಂತೋಷದಿಂದ ನಗುವಲ್ಲ; ನಗುವಿನಿಂದ ಸಂತೋಷ. ಇದು ಸ್ಥೂಲವಾಗಿ ಜೇಮ್ಸ್-ಲಾಂಗೆ

ವಾದ. ಗಾಡಿಯ ಮುಂದೆ ಕುದುರೆ ಇರುವ ಬದಲು ಕುದುರೆಯ ಮುಂದೆ ಗಾಡಿಯನ್ನು ಇರಿಸಿತು ಈ ವಾದ.

ಈ ವಾದ ಎಷ್ಟರಮಟ್ಟಿಗೆ ನಿಜ ಎಂದು ನಿರ್ಧರಿಸಲು ವಾಲ್ಟರ್ ಕ್ಯಾನ್ನನ್ ಮತ್ತು ಚಾರ್ಲಸ್ ಷೆರಿಂಗ್‌ಟನ್ ಎಂಬ ವಿಖ್ಯಾತ ದೇಹವಿಜ್ಞಾನಿಗಳು ಪ್ರಯೋಗಗಳನ್ನು ನಡೆಸಿದರು. ನಾಯಿಗಳ, ಬೆಕ್ಕುಗಳ ಕಶೇರುಕ, ಜಠರಕೋಶ ಮೊದಲಾದ ಅಂಗಗಳನ್ನು ಶಸ್ತ್ರಕ್ರಿಯೆಯಿಂದ ಕತ್ತರಿಸಿ ತೆಗೆದಾಗ ಈ ಭಾಗಗಳಲ್ಲಿ ದೈಹಿಕ ಸಂವೇದನೆಗಳು ಇರುವುದು ಸಾಧ್ಯವಿಲ್ಲವಷ್ಟೆ; ಇಂಥ ಸ್ಥಿತಿಯಲ್ಲಿಯೂ ಈ ಪ್ರಾಣಿಗಳಲ್ಲಿ ಭಾವೋದ್ರೇಕ ಇರುತ್ತಿದ್ದಿತು. ಎಂದರೆ ಭಾವವು ದೈಹಿಕ ವಿಕಾರಗಳನ್ನು ಅವಲಂಬಿಸಿದ ಪ್ರವೃತ್ತಿಯಲ್ಲ ಎನ್ನುವುದು ಸ್ಪಷ್ಟವಾಯಿತು. ಇದಲ್ಲದೆ, ಒಂದೇ ಬಗೆಯ ದೈಹಿಕ ವಿಕಾರಗಳಿದ್ದಾಗಲೂ ಬಗೆಬಗೆಯ ಭಾವಗಳು ಉಂಟಾಗುತ್ತಿದ್ದುವು ; ಎಂದರೆ ಭಾವಕ್ಕೂ ದೈಹಿಕವಿಕಾರಕ್ಕೂ ಏಕಾಂತ ಸಂಬಂಧವಿರದು. ಆಡ್ರಿನಾಲಿನ್ ರಸವನ್ನು ದೇಹದೊಳಗೆ ಹಾಕಿ ಜಠರಕೋಶದಲ್ಲಿ ಕೃತಕವಾದ ವಿಕಾರಗಳನ್ನುಂಟುಮಾಡಿದಾಗಲೂ ಭಾವವೇನು ಉತ್ಪನ್ನವಾಗುವುದಿಲ್ಲ. ಈ ಎಲ್ಲ ಪ್ರಯೋಗಗಳಿಂದ ಜೇಮ್ಸ್ - ಲಾಂಗೆ ಇವರ ವಾದವು ಸಿದ್ಧಾಂತವಲ್ಲವೆನ್ನುವುದು ಸ್ಪಷ್ಟವಾಯಿತು.

ವಾಲ್ಟರ್ ಕ್ಯಾನ್ನನ್ ತನ್ನ ಪ್ರಯೋಗಗಳಿಂದ ಹೈಪೋಥಾಲಮಸ್ ಎನ್ನುವ ಭಾಗವೇ ಭಾವೋದ್ರೇಕದ ಸ್ಥಾನವೆಂದು ನಿರ್ಧರಿಸಿದನು. ಈ ಭಾಗವನ್ನು ಶಸ್ತ್ರಕ್ರಿಯೆಯಿಂದ ತೆಗೆದುಬಿಟ್ಟರೆ ಭಾವ ಉಂಟಾಗದು; ಈ ಭಾಗ ಸರಿಯಾಗಿದ್ದರೇ ಭಾವಪ್ರಚೋದನೆ ಸಾಧ್ಯ. ಈ ಭಾಗವೇ ಜಠರಕೋಶದ ಕ್ರಿಯೆಗಳಿಗೂ, ಶತ್ರುಗಳನ್ನು ನಿವಾರಿಸುವ ಪ್ರಯತ್ನಕ್ಕೂ, ದೇಹದಲ್ಲಿ ಉಷ್ಣಾಂಶವನ್ನು ನಿಯಂತ್ರಣ ಮಾಡುವುದಕ್ಕೂ, ವಿನಾಳ ಗ್ರಂಥಿಗಳ ಕೆಲಸಕ್ಕೂ, ನಿದ್ರೆಯನ್ನು ನಿರ್ಧರಿಸುವುದಕ್ಕೂ ನೆರವಾಗುತ್ತದೆ: ಈ ಭಾಗದಲ್ಲಿ ತೊಂದರೆಯಾದರೆ ಈ ಎಲ್ಲ ಕೆಲಸಗಳಿಗೂ ಅಡ್ಡಿಯಾಗುತ್ತದೆ. ಈ ಭಾಗವನ್ನು ಕೃತಕವಾಗಿ ಉತ್ತೇಜಿಸಿದರೆ ಉದ್ವೇಗ ಉಂಟಾಗುತ್ತದೆ. ಮಸ್ತಿಷ್ಕದ ಕೆಲಸ ತೀವ್ರವಾಗುತ್ತದೆ.

ಭಾವದ ಅಭಿವ್ಯಕ್ತಿಯನ್ನು ಕುರಿತು ನಡೆದ ಪ್ರಯೋಗಗಳಿಂದಲೂ ಭಾವದ ಅನುಭವಕ್ಕೂ ದೈಹಿಕ ವಿಕಾರಗಳಿಗೂ ನೇರವಾದ ಸಂಬಂಧವಿಲ್ಲವೆನ್ನುವುದು ತಿಳಿಯಿತು. ಜಠರಕೋಶದ ವಿಕಾರಗಳೇ ಭಾವದ ಮೂಲ ಎನ್ನುವ ಜೇಮ್ಸ್ - ಲಾಂಗೆವಾದವು ಈ ಪ್ರಯೋಗಗಳಿಂದ ನಿರಸ್ತವಾಯಿತು. ಹೃದಯಕ್ರಿಯೆ, ರಕ್ತಚಲನೆ, ಶ್ವಾಸೋಚ್ಛ್ವಾಸ, ಜಠರ - ಜೀರ್ಣಕ್ರಿಯೆ ಮೊದಲಾದುವುಗಳಿಗೂ ಭಾವದ ಅನುಭವಕ್ಕೂ ಕಾರ್ಯಕಾರಣಸಂಬಂಧವಿರದು. ಆದರೆ ಭಾವೋದ್ರೇಕವಾದಾಗ ರಕ್ತಚಲನೆಯಲ್ಲಿ ವಿಕಾರವಿರುತ್ತದೆ. ಬೇರೆ ಬೇರೆ ಭಾವಗಳಿಗೆ ಬಗೆಬಗೆಯ ವಿಕಾರಗಳೇನು ಇರುವುದಿಲ್ಲ. ಇಂಥ ಭಾವಕ್ಕೆ ಇಂಥದೇ ವಿಕಾರ ಎಂದು ನಿರ್ದೇಶಿಸುವ ಹಾಗಿಲ್ಲ. ಹಾಗೆಯೇ

ಭಾವದ ಅನುಭವವಾದಾಗ ಜಠರಕೋಶದಲ್ಲಿಯೂ ವಿಕಾರ ಒದಗುತ್ತದೆ ಎನ್ನುವುದು ನಿಜ. ಆದರೆ ವಿಕಾರಗಳನ್ನು ನಿರ್ದೇಶಮಾಡುವುದು ಸಾಧ್ಯವಿಲ್ಲ. ಅನಿರ್ದಿಷ್ಟವಾದ ದೈಹಿಕವಿಕಾರಗಳು ಭಾವೋದ್ರೇಕದಲ್ಲಿ ಇರುತ್ತವೆ ಎಂದಷ್ಟೇ ಒಪ್ಪಿಕೊಳ್ಳಬಹುದು. ಪರಸ್ಪರ ಸಂಬಂಧವಿದೆಯೆನ್ನುವುದಕ್ಕೆ ಪ್ರಯೋಗಗಳ ಸಮರ್ಥನೆ ಸಾಲದು. ಈ ಸಮನ್ವಯ ಪಕ್ಷವನ್ನು ಪುನಃಶಾಸ್ತ್ರಜ್ಞರು ಗ್ರಹಿಸುತ್ತಿದ್ದಾರೆ.

ದೈಹಿಕ ವಿಕಾರಗಳಲ್ಲಿ ಮೇಲೆ ಹೇಳಿದ ಹೈಪೋಥಾಲಮಸ್ ವಹಿಸುವ ಪಾತ್ರ ದೊಡ್ಡದು. ಜ್ಞಾನವಾಹಿಗಳಿಂದ ಸಂಗ್ರಹಿಸಲ್ಪಟ್ಟ ಸಂದೇಶವು ಕೇಂದ್ರೀಯ ನರ ಮಂಡಲವನ್ನು, ಎಂದರೆ ಕಶೇರುಕ ಮತ್ತು ಮಸ್ತಿಷ್ಕವನ್ನು ಮುಟ್ಟುವಾಗ ಕೆಲವು ಕಶೇರುಕವನ್ನು ಸೇರಿ ಅಲ್ಲಿಂದ ಕೆಳಮಸ್ತಿಷ್ಕ ಪ್ರದೇಶದಲ್ಲಿರುವ ಥಾಲಮಸ್ ಗ್ರಂಥಿ ಯನ್ನು ಮುಟ್ಟುತ್ತವೆ. ಈ ಥಾಲಮಸ್‌ನ ಕೆಳಭಾಗದಲ್ಲಿರುವುದು ಹೈಪೋಥಾಲಮಸ್. ಜ್ಞಾನವಾಹಿಗಳಿಂದ ಸಂದೇಶವು ಮಾನಸಿಕನೆಲೆಯನ್ನು ಮುಟ್ಟುವ ಮೊದಲು ಈ ಹೈಪೋಥಾಲಮಸ್‌ನನ್ನು ಹಾದೇ ಹೋಗಬೇಕು. ಮಾನಸಿಕನೆಲೆಯಿಂದ ಪ್ರೇರಣೆಗಳು ದೇಹದ ಅಂಗಗಳಿಗೆ ಪಸರಿಸುವ ಮೊದಲು ಇದೇ ಹೈಪೋಥಾಲಮಸ್‌ನನ್ನು ಹಾಯಬೇಕು. ಯಾವುದಾದರೂ ಚಿಂತನೆಯಿಂದ ಭಾವಪ್ರಚೋದನೆಯಾಗುವುದು ಹೀಗೆ. ಹೈಪೋಥಾಲಮಸ್‌ನಿಂದ ಪ್ರೇರಣೆ ಜಠರಕೋಶವನ್ನೂ ಮಾಂಸಖಂಡಗಳನ್ನೂ ಮುಟ್ಟುತ್ತದೆ; ಇವು ಕ್ರಿಯಾತ್ಮಕ ಪ್ರೇರಣೆಗಳು. ಯಾವುದಾದರೂ ಬಾಹ್ಯಪ್ರಸಂಗ ಭಾವಪ್ರವರ್ತಕವಾಗಿದ್ದರೆ ಹೈಪೋಥಾಲಮಸ್ ಕ್ರಿಯಾಶೀಲವಾಗುತ್ತದೆ. ಆದರೆ ಹೈಪೋಥಾಲಮಸ್‌ನಿಂದಲೇ ಭಾವಪ್ರವರ್ತನೆಯೆನ್ನುವುದು ಸಿದ್ಧಾಂತವಲ್ಲ. ಮಸ್ತಿಷ್ಕವೂ ಹೆಚ್ಚಿನ ಪಾತ್ರವನ್ನೇ ವಹಿಸುತ್ತದೆ.

ಭಾವವೆನ್ನುವ ಪ್ರತಿಕ್ರಿಯೆ ಸಂದರ್ಭಾನುಸಾರಿಯಾದುದು. ಸಂದರ್ಭದ ಅಗತ್ಯಗಳನ್ನು ಅರ್ಥಮಾಡಿಕೊಂಡಮೇಲೇ ಈ ಪ್ರತಿಕ್ರಿಯೆ ಒದಗುತ್ತದೆ. ನೀಚವರ್ಗದ ಪ್ರಾಣಿಗಳಲ್ಲಿ ಇದು ಹೇಗಿದ್ದರೂ ಮನುಷ್ಯನಲ್ಲಂತೂ ಸಂದರ್ಭವೇ ಭಾವಪ್ರಚೋದನೆಗೆ ಮುಖ್ಯ ವಿವರ. ಹೀಗಿರುವಾಗ ದೈಹಿಕವಿಕಾರಗಳಿಗಿಂತ ಮಾನಸಿಕವಿವರಗಳು ಭಾವಪ್ರವೃತ್ತಿಯಲ್ಲಿ ಹೆಚ್ಚಿನಪಾಲು ವಹಿಸುತ್ತವೆ ಎನ್ನಬಹುದು. ಸಂದರ್ಭದ ಅಗತ್ಯ ಮುಗಿದಮೇಲೂ ಭಾವೋದ್ರೇಕ ಮುಂದುವರೆಯಬಹುದು, ಒಂದೇ ಸಂದರ್ಭಕ್ಕೆ ನಾಲ್ಕು ಜನ ನಾಲ್ಕು ಬಗೆಯ ಭಾವಪ್ರತಿಕ್ರಿಯೆಗಳನ್ನು ವ್ಯಕ್ತ ಪಡಿಸಬಹುದು. ದೀರ್ಘಕಾಲ ಒಂದೇ ಭಾವ ನಿಲ್ಲಬಹುದು; ಮುಂದೆ ಬರುವ ಸಂದರ್ಭಕ್ಕೆ ತಕ್ಕ ಭಾವಪ್ರವೃತ್ತಿಯನ್ನು ಮೊದಲೇ ಸಿದ್ಧಮಾಡಿಕೊಳ್ಳುವ ಸಂದರ್ಭವೂ ಇರುವುದುಂಟು. ಎಂದಮೇಲೆ, ದೈಹಿಕವಿಕಾರಗಳೂ ಹೈಪೋಥ್ಯಾಲಮಸ್ ಮತ್ತು ಮಸ್ತಿಷ್ಕ ಈ ಅಂಗಗಳೂ ಭಾವನಿಷ್ಪತ್ತಿಯಲ್ಲಿ ಕೆಲಸಮಾಡಿದರೂ ಇವಿಷ್ಟೇ ಭಾವದ ಸರ್ವಸ್ವ ಎನ್ನಲಾಗದು; ಇವಕ್ಕಿಂತ ಹೆಚ್ಚಾಗಿ ವ್ಯಕ್ತಿತ್ವ, ಆಧ್ಯಾತ್ಮಿಕ ವಿವರಗಳು

ಕೆಲಸಮಾಡುತ್ತವೆ. ಈ ಕಾರಣದಿಂದಲೇ ಭಾವಪ್ರವರ್ತನೆ ಕೇವಲ ದೇಹವಿಜ್ಞಾನದ ವಸ್ತುವಾಗದೆ ಮನಃಶಾಸ್ತ್ರದ ವ್ಯಾಪ್ತಿಯಲ್ಲೇ ಸೇರಿರುವುದು.

ಭಾವಸ್ಥಿತಿಯಿಂದ ಭಾವವಿಲ್ಲದ ಸ್ಥಿತಿಗೂ, ಭಾವವಿಲ್ಲದ ಸ್ಥಿತಿಯಿಂದ ಭಾವದ ಸ್ಥಿತಿಗೂ ವ್ಯಕ್ತಿ ಜಾರುವಾಗ ದೈಹಿಕ ವಿಕಾರಗಳಲ್ಲಿ ಮಾರ್ಪಾಟು ಅಷ್ಟೇನು ಖಚಿತವಾಗಿರುವುದಿಲ್ಲ. ದೇಹದ ನೆಲೆಯಲ್ಲಿ ಈ ಸ್ಥಿತಿಗಳನ್ನು ಬೇರ್ಪಡಿಸುವುದೂ ಸಾಧ್ಯವಿಲ್ಲ. ದೇಹದ ವಿಕಾರಗಳ ನೆರವಿನಿಂದ ಒಂದು ಭಾವಕ್ಕೂ ಇನ್ನೊಂದು ಭಾವಕ್ಕೂ ವ್ಯತ್ಯಾಸ ಹೇಳುವುದು ಕಷ್ಟ. ಎಲ್ಲಕ್ಕಿಂತ ಹೆಚ್ಚಾಗಿ, ಭಾವವೆನ್ನುವುದೊಂದು ಅನುಭವವಿಶೇಷ : ಅರಿವಿಲ್ಲದ ದೇಹಪ್ರವೃತ್ತಿಯಲ್ಲ.

೩

## ಸಂವೇದನೆ

ಭಾವದ ಪ್ರಸ್ತಾಪಮಾಡುವಾಗ ಸಂವೇದನೆಯ (feeling) ಮಾತೂ ಬರುತ್ತದೆ. ವೇದನೆಯೆಂದರೆ ಭಾವಕ್ಕೆ ಪರಿಕರವಾಗಿ ಬರುವಂಥ ಇಂದ್ರಿಯಜನ್ಯ ವಿವರ ಅಥವಾ ದೇಹದ ಒಳಗೆ ನಡೆಯುವಂತೆ ತೋರುವ ವ್ಯಾಪಾರ ವಿಶೇಷ. ಭಯ ಅತಿಯಾದಾಗ ಹೊಟ್ಟೆಯೊಳಗೆ ಕಸಿವಿಸಿಯಾಗುತ್ತದೆ, ಕಾಲುಗಳು ನಿತ್ರಾಣ ವಾದಂತೆ ಭಾಸವಾಗುತ್ತದೆ ; ಆತಂಕ ಅತಿಯಾದರೆ ಹೃದಯದಲ್ಲಿ ಬೇನೆ ತೋರುತ್ತದೆ, ತಲೆ ಭಾರವಾಗುತ್ತದೆ ; ಸಿಟ್ಟಾದರೆ ತಲೆ ಗಿರ್ರನೆ ತಿರುಗುತ್ತದೆ, ಕೈ ಚಡಪಡಿಸುತ್ತದೆ ; ಶಾಂತವಾಗಿದ್ದಾಗ ಮೈ ಕೈ ಸಡಿಲವಾದಂತೆ, ಭಾವವಿದ್ದಾಗ ಮೈ ಕೈ ಹಿಡಿದಂತೆ ಕಾಣುತ್ತದೆ. ಇವೆಲ್ಲ ಸಂವೇದನೆಗಳು. ಇವನ್ನು ಎರಡನೆಯವನು ನೋಡುವುದು ಸಾಧ್ಯವಿಲ್ಲ ; ಅನುಭವಿಸುವವನು ಮಟ್ಟಿಗೆ ನೋಡಿಯಾನಷ್ಟೆ. ಈ ಕಾರಣದಿಂದ ಸಂವೇದನೆಗಳ ಪರಿಶೀಲನೆ ಕಷ್ಟಸಾಧ್ಯವಾದುದು. ವೇದನೆಗಳಿಗೂ (sensation) ಸಂವೇದನೆಗಳಿಗೂ ಸಂಬಂಧವೇನೋ ಅಷ್ಟಿಷ್ಟು ಇದ್ದರೂ ಈ ಸಂಬಂಧ ನಿಷ್ಕೃಷ್ಟ ವಾದುದು ಎನ್ನುವಹಾಗಿಲ್ಲ. ಅನುಭವಿಸುವವನು ತಾನೇ ಹೇಳಿಕೊಂಡಾಗಲೇ ಸಂವೇದನೆಗಳ ಸ್ವರೂಪ ತಿಳಿಯುವುದು ; ಅದೂ ಅವನಿಗೆ ನಿರ್ದಿಷ್ಟವಾಗಿ ಇವೇ ಸಂವೇದನೆಗಳು ಎಂದು ಹೇಳುವ ಸಾಮರ್ಥ್ಯ ಇರುವುದೂ ಕಷ್ಟವೇ. ಸಂವೇದನೆಗಳಲ್ಲಿ ಸುಖ–ದುಃಖ, ಪ್ರಿಯ–ಅಪ್ರಿಯ, ಹಿತ–ಅಹಿತ, ಎಂದು ಮಾತ್ರ ನಿರ್ದೇಶಿಸಬಹುದು. ಉಳಿದೆಲ್ಲ ಸಂವೇದನೆಗಳೂ ಈ ವಿಭಾಗದಲ್ಲಿ ಅಡಗುತ್ತವೆ. ಪ್ರಯೋಗಶೀಲರು ಸಂವೇದನೆಗಳನ್ನು ಅಭ್ಯಾಸಮಾಡುವಾಗ ತಾವೇ ತಯಾರಿಸಿದ ಸಂವೇದನೆಗಳ ಪಟ್ಟಿಯೊಂದನ್ನು ನಮ್ಮ ಮುಂದಿಟ್ಟು ಅದರಲ್ಲಿ ಯಾವುವು ನಮ್ಮ ಅನುಭವಕ್ಕೆ ಬಂದವು ಎಂದು ಹೇಳುವಂತೆ ಪ್ರೇರಿಸುತ್ತಾರೆ. ಮಾತುಗಳ ಪರಿಚಯ ಇಲ್ಲದಿರುವ ಕಾರಣ ಸಂವೇದನೆಗಳನ್ನು ನಿರ್ದೇಶಿಸುವುದು ಕಷ್ಟವಾದರೆ ಈ ಸಂವಿಧಾನ ನಮ್ಮ ನೆರವಿಗೆ ಬರುತ್ತದೆ.

ಬಾಳಿನಲ್ಲಿ ಸುಖತತ್ತ್ವ ಮುಖ್ಯವಾದುದೆಂದು ಸಿಗ್ಮಂಡ್ ಫ್ರಾಯ್ಡ್ ಮೊದಲಾದವರ ವಾದ. ಬಯಕೆಗಳು ತೀರಿದರೆ, ಅದರಿಂದ ದೇಹದಲ್ಲಿ ಒದಗಿದ್ದ ಒತ್ತಡ ಮರೆಯಾದರೆ ಸುಖಾನುಭವ; ಪ್ರಯತ್ನಪಟ್ಟೂ ಬಯಕೆಗಳು ತೀರದಿದ್ದರೆ, ಒಳಗಿನ ಒತ್ತಡ ಇನ್ನಷ್ಟು ಬಿಗಿಯಾಗುತ್ತದೆ; ನಿರಾಶೆ ಹೆಚ್ಚುತ್ತದೆ. ಪ್ರವರ್ತನೆಯಲ್ಲಿ ಸುಖಾನುಭವ ಮತ್ತು ನಿರಾಶೆ (ಪ್ರತೀಕ್ಷಾಭಂಗ) ಮುಖ್ಯವಾದ ವಿವರಗಳು. ಸುಖಾನುಭವವನ್ನು ತಂದಾವೆಂದು ತೋರುವ ವಸ್ತುಗಳೂ ಪ್ರಸಂಗಗಳೂ ಕಾಮ್ಯವಾಗುತ್ತವೆ, ಹಿತವೆನಿಸುತ್ತವೆ; ಅವುಗಳನ್ನು ಪಡೆಯಲು ಮನುಷ್ಯ ತವಕ ಪಡುತ್ತಾನೆ. ಇದನ್ನೇ ರಾಗವೆನ್ನುವುದು. ನಿರಾಶೆಯನ್ನೋ ದುಃಖವನ್ನೋ ಉಂಟುಮಾಡುವುವೆಂದು ಬಗೆದ ವಸ್ತುಗಳೂ ಪ್ರಸಂಗಗಳೂ ನಮ್ಮ ದ್ವೇಷಕ್ಕೆ, ಜುಗುಪ್ಸೆಗೆ ಗುರಿಯಾಗುತ್ತವೆ; ಅವುಗಳಿಂದ ದೂರವಾಗಲು, ಅಥವಾ ಅವುಗಳನ್ನು ಪರಿಹರಿಸಲು ಮನುಷ್ಯ ತವಕಪಡುತ್ತಾನೆ. ಕಾಮ್ಯವಾದ ವಸ್ತುಗಳಿಗೆ ಪ್ರವರ್ತಕಮೌಲ್ಯ, ದುಃಖಜನಕವಾದ ವಸ್ತುಗಳಿಗೆ ನಿರೋಧಕ ಮೌಲ್ಯ ಸಂಘಟಿತವಾಗುತ್ತವೆ. ವ್ಯಕ್ತಿಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಜಗತ್ತಿನಲ್ಲಿ ನಮ್ಮ ಸಂಪರ್ಕಕ್ಕೆ ಬರುವ ಎಲ್ಲ ವಸ್ತುಗಳಿಗೂ, ಪ್ರಸಂಗಗಳಿಗೂ, ವ್ಯಕ್ತಿಗಳಿಗೂ ಹೀಗೆ ಇಷ್ಟ, ಅನಿಷ್ಟವೆ ನ್ನುವ ಗುಣಗಳನ್ನು ಹೊಂದಿಸುತ್ತೇವೆ. ಎರಡರಲ್ಲಿಯೂ ಸೇರದಿರುವ ವಸ್ತುಗಳೂ ಉಂಟು; ಇವು 'ಅಸುಖಮದುಃಖ'. ಹೀಗೆ ಮೂರೂಬಗೆಯ ಮೌಲ್ಯಗಳು ನಮ್ಮನ್ನು ಎಲ್ಲ ಕೆಲಸದಲ್ಲಿಯೂ ಉಜ್ಜುಗಿಸುತ್ತವೆ.

ಭಾವ-ಸಂವೇದನೆಗಳನ್ನು ಯಾಂತ್ರಿಕವ್ಯವಧಾನದಿಂದ ಅಧ್ಯಯನಮಾಡುವ ಪ್ರಯತ್ನದಲ್ಲಿ ಮನಃಶಾಸ್ತ್ರ ಯಶಸ್ವಿಯಾಗಿದೆ. ಗಾಲ್ವಾನಿಕ್ ಸ್ಕಿನ್ ರಿಫ್ಲೆಕ್ಸ್ (GSR) ಎನ್ನುವ ವ್ಯವಧಾನವನ್ನು ಬಳಸಿಕೊಂಡಿರುವ ಒಂದು ಯಂತ್ರ ಸುಳ್ಳಾಡುವುದನ್ನು ಕಂಡುಹಿಡಿಯುತ್ತದೆ (Lie-detector). ಈ ಯಂತ್ರದ ಮುಂದೆ ತನ್ನ ಪ್ರತಿಕ್ರಿಯೆಗಳನ್ನು ಕೊಡುತ್ತಿರುವ ಮನುಷ್ಯ ತನ್ನ ನೈಜಭಾವನೆಯನ್ನು ಮರೆಮಾಚಿ, ಸುಳ್ಳನ್ನೇ ಹೇಳುವುದಿದ್ದರೆ ಇದು ಈ ಯಂತ್ರದಿಂದ ಬಯಲಾಗುತ್ತದೆ. ಅಪರಾಧಿಗಳನ್ನು ಇಂಥ ಪರೀಕ್ಷೆಗೆ ಒಳಪಡಿಸಿದಾಗ ಅವರ ಅಪರಾಧಕ್ಕೆ ಸಂಬಂಧಪಟ್ಟ ಮಾತುಗಳನ್ನು ಅವರ ಮುಂದೆ ಆಡಿ ಅವುಗಳಿಗೆ ಅವರಿಂದ ಉತ್ತರವನ್ನು ಬಯಸುತ್ತಾರೆ. ನಿರಪರಾಧಿಗಳನ್ನೂ ಅಪರಾಧಿಗಳನ್ನೂ ಹೀಗೆ ಪರೀಕ್ಷೆಗೊಳಪಡಿಸಿದಾಗ ಅಪರಾಧಿಗಳು ಸಿಕ್ಕಿಬೀಳುತ್ತಾರೆ. ಗುಮಾನಿಯಿರುವ ಹತ್ತಾರು ಮಂದಿಯಲ್ಲಿ ನಿಜವಾಗಿ ಅಪರಾಧಿ ಯಾರು ಎಂದು ಕಂಡುಹಿಡಿಯಲು ಈ ಯಂತ್ರ ನೆರವಾಗುತ್ತದೆ. ಇಲ್ಲಿ ಭಾವಗಳಿಂದ, ಸಂವೇದನೆಗಳಿಂದ ಒದಗುವ ದೈಹಿಕವಿಕಾರಗಳನ್ನು ಯಾಂತ್ರಿಕವಾಗಿ ಗುರುತಿಸುತ್ತಾರೆ. ಸಂವೇದನೆಯಿಂದಾಗಿ ಹೃದಯಕ್ರಿಯೆ, ಶ್ವಾಸೋಚ್ಛ್ವಾಸ, ಇವುಗಳಲ್ಲಿಯೂ ಮಾರ್ಪಾಟಾಗುತ್ತದೆ. ವ್ಯಕ್ತಿಯಲ್ಲಿ ಭಾವೋದ್ರೇಕವು ಅವನ ಮುಖಚರ್ಯೆ ಯಿಂದಲಾಗಲೀ ಭಂಗಿಗಳಿಂದಾಗಲೀ ವ್ಯಕ್ತವಾಗದಿದ್ದಾಗಲೂ ಅವನಲ್ಲಿ ಭಾವಾವೇಶ

ವುಂಟು ಎಂದು ತಿಳಿಯುವುದು ಇಂಥ ವ್ಯವಧಾನಗಳಿಂದ ಸಾಧ್ಯ. ಭಾವೋದ್ರೇಕದ ಪರಿಸ್ಥಿತಿ ಇದೆಯೇ ಇಲ್ಲವೇ ಎಂದು ನಿರ್ದೇಶಿಸುವುದೂ ಹೀಗೆ ಸಾಧ್ಯವಾಗುತ್ತದೆ.

೪

## ಭಾವವಿಕಾಸ

ಮಗುವಿನಲ್ಲಿಯೂ ಭಾವಾವೇಶವುಂಟು, ದೊಡ್ಡವರಲ್ಲಿಯೂ ಉಂಟು, ಪ್ರಾಣಿಗಳಲ್ಲಿಯೂ ಉಂಟು, ಮನುಷ್ಯರಲ್ಲಿಯೂ ಉಂಟು. ಆದರೆ ಭಾವದ ನೆಲೆ ಎಲ್ಲರಲ್ಲಿಯೂ ಸಮನಾಗಿಲ್ಲ. ಜೀವಿ ಬೆಳೆದಹಾಗೆ ಭಾವದ ನಿಷ್ಪತ್ತಿಯಲ್ಲಿಯೂ ಅಭಿವ್ಯಕ್ತಿಯಲ್ಲಿಯೂ ಬೆಳವಣಿಗೆ ಕಾಣಿಸುತ್ತದೆ. ಈ ಬೆಳವಣಿಗೆಯೂ ಅನುಕ್ರಮವಾದ ವಿಕಾಸವೇ ; ಅದರಲ್ಲಿ ಅನುಸ್ಯೂತವಾದ ಒಂದು ಕ್ರಮವಿರುವುದು ಸ್ಪಷ್ಟವಾಗುತ್ತದೆ. ಎಳೆಯ ಮಗುವಿನಲ್ಲಿ ಭಾವವೈವಿಧ್ಯವಿರದು ; ಅದಕ್ಕೆ ಸುಖವಾದಾಗ ಕಷ್ಟವಾದಾಗ ಅದರಲ್ಲಿ ಕಾಣುವ ಒಂದೇ ಪ್ರತಿಕ್ರಿಯೆಯೆಂದರೆ ಉದ್ವೇಗ; ಇಡೀ ದೇಹವೇ ಇದರಲ್ಲಿ ಭಾಗಿಯಾಗುತ್ತದೆ. ಈ ಭಾವಕ್ಕೆ ಮೂಲವಾದುದು ದೈಹಿಕವಿಕಾರವೇ. ಹಸಿವಾದಾಗ, ನೀರಡಿಕೆಯಾದಾಗ ಚಳಿಯಾದಾಗ, ಬಾಧೆಯಾದಾಗ, ಕೈಕಾಲು ಆಡಿಸದಾದಾಗ ಮಗು ಒದ್ದಾಡುತ್ತದೆ; ಅಳುತ್ತದೆ, ಅರಚುತ್ತದೆ; ಇದು ಉದ್ವೇಗದ ಒಂದು ಮುಖ. ಈತಿಬಾಧೆಗಳೇನೂ ಇಲ್ಲದೆ ಸುಖವಾಗಿರುವ ಮಗು ನಗುತ್ತದೆ, ಕೇಕೆ ಹಾಕುತ್ತದೆ, ಚಪ್ಪರಿಸುತ್ತದೆ ; ಇದು ಉದ್ವೇಗದ ಇನ್ನೊಂದು ಮುಖ. ಹುಟ್ಟಿದ ಮಗುವಿನಲ್ಲಿ ಇವೆರಡೇ ಭಾವಗಳು ; ಎರಡೂ ಉದ್ವೇಗದ ಇಬ್ಬಗೆಗಳು.

ಮಗುವಿಗೆ ದೈಹಿಕಸಾಮರ್ಥ್ಯ ಬೆಳೆದಹಾಗೆ, ಆವರಣದೊಂದಿಗೆ ಸಂಪರ್ಕ ಹೆಚ್ಚಿದಹಾಗೆ, ಬುದ್ಧಿಶಕ್ತಿ ಮೂಡಿದಹಾಗೆ ಭಾವದಲ್ಲಿಯೂ ವೈವಿಧ್ಯ ತೋರಿಬರುತ್ತದೆ. ಪ್ರವರ್ತನೆಯಲ್ಲಿ ಕಾಣುವ ವೈವಿಧ್ಯ ಈ ಭಾವವೈವಿಧ್ಯಕ್ಕೆ ಕಾರಣ. ಭಾವಪ್ರಚೋದನೆಯಲ್ಲಿ ವೈವಿಧ್ಯವಿರುವಂತೆಯೇ ಭಾವಗಳ ಅಭಿವ್ಯಕ್ತಿಯಲ್ಲಿಯೂ ವೈವಿಧ್ಯ ಕಾಣುತ್ತದೆ. ಮಗುವಿನ ಭಾವದ ಅಭಿವ್ಯಕ್ತಿಯೆಂದರೆ ಅಗತ್ಯವುಂಟೆಂಬುದರ ಸೂಚನೆ. ದೈಹಿಕ ಬಯಕೆಗಳಿಗೇ, ದೈಹಿಕ ಪ್ರವೃತ್ತಿಗಳಿಗೇ ಹೊಂದಿಕೊಂಡು ಶೈಶವದಲ್ಲಿ ಭಾವಗಳು ಉಂಟಾಗುತ್ತವೆ. ಮಗು ಕಿಟ್ಟನೆ ಕಿರುಚಿಕೊಂಡು ಅಳುವಾಗ ಹಸಿವೆ, ಚಳಿ ಅಥವಾ ಬಾಧೆಯಿದೆಯೆಂದು ಧ್ವನಿತವಾಗುತ್ತದೆ. ಹುಟ್ಟಿದ ಮಗು ಮೊದಲು ಮಾಡುವ ಕೆಲಸವೆಂದರೆ ಅಳುವುದೇ ಅಲ್ಲವೆ ? ಈ ಅಳು ಉಸಿರಾಟಕ್ಕೆ ಹಿನ್ನೆಲೆಯಾಗಿ ನಡೆಯುವ ಕೆಲಸ, ಜಾನ್ ವಾಟ್ಸನ್ ಎಂಬ ವರ್ತನವಾದಿಯು ಸಣ್ಣಮಕ್ಕಳ ಮೇಲೆ ಹಲವಾರು ಪ್ರಯೋಗಗಳನ್ನು ನಡೆಸಿ, ಭಯ, ಕೋಪ, ಪ್ರೀತಿ ಇವು ಮೂರೇ ಮೂಲಭೂತ ಭಾವಗಳು ಎಂದು ನಿರ್ಣಯಿಸಿದನು. ಈಗೀಗ ಈ ನಿರ್ಣಯ ಸಾಧುವಾದುದಲ್ಲವೆಂದು ತಿಳಿದು ಬಂದಿದ್ದರೂ ಈ ಮೂರು ಪ್ರಮುಖವಾದ ಭಾವಗಳೆಂಬುದು ನಿರ್ವಿವಾದ.

ಸಂದರ್ಭದಲ್ಲಿ ಇದ್ದಕ್ಕಿದ್ದಂತೆ ಬದಲಾವಣೆಯಾದರೆ, ಮಗು ಅದಕ್ಕೆ ಹೊಂದಿಕೊಳ್ಳುವುದು ಕಷ್ಟವಾದರೆ, ಗಟ್ಟಿಯಾದ ಶಬ್ದವಾದರೆ, ಆಸರೆ ತಪ್ಪಿದರೆ ಮಗು ಹೆದರುತ್ತದೆ; ಭಯದಿಂದ ಮೈ ಕಟ್ಟಿಗೆಯಂತೆ ಆಗುತ್ತದೆ, ಮುಖ ವಿವರ್ಣವಾಗುತ್ತದೆ, ಕಣ್ಣು ಅಗಲವಾಗುತ್ತದೆ, ಬೆವರು ಹರಿಯುತ್ತದೆ, ಮೈ ನಡುಗುತ್ತದೆ. ಈ ಅಭಿವ್ಯಕ್ತಿಗೆ ಅನುಕೂಲವಾದ ದೈಹಿಕವಿಕಾರಗಳೆಂದರೆ ಎದೆ ಡವಡವನೆ ಬಡಿದುಕೊಳ್ಳುವುದು, ರಕ್ತದ ಒತ್ತಡ ಏರುವುದು, ರಕ್ತದಲ್ಲಿನ ಸಕ್ಕರೆಯ ಅಂಶ ಹೆಚ್ಚುವುದು, ಜೀರ್ಣಕ್ರಿಯೆ ನಿಲ್ಲುವುದು ಮತ್ತು ಮನಸ್ಸಿನ ಶಾಂತತೆ ತಪ್ಪುವುದು. ಇದೇ ದೈಹಿಕ ವಿಕಾರಗಳೇ ಕೋಪದಲ್ಲಿಯೂ ಒದಗುತ್ತವೆ ಎನ್ನುವುದು ಸ್ವಾರಸ್ಯ. ದೈಹಿಕವಿಕಾರಗಳ ದೃಷ್ಟಿಯಿಂದಲೇ ನೋಡಿದರೆ ಮಗು ಭಯಗೊಂಡಿದೆಯೇ ಕೋಪಗೊಂಡಿದೆಯೇ ನಿರ್ಧರಿಸುವುದು ಕಷ್ಟ. ಯಾವ ಭಾವ ನಿರ್ದೇಶನಕ್ಕಾದರೂ ಸಂದರ್ಭಪರಿಶೀಲನೆ ಅಗತ್ಯ. ಭಾವದ ಅಭಿವ್ಯಕ್ತಿ ಸಂದರ್ಭಕ್ಕೆ, ಸನ್ನಿವೇಶಕ್ಕೆ ಪರಾಧೀನವಾದುದು ಎನ್ನುವುದನ್ನು ಮರೆಯಬಾರದು. ಭಯಗೊಂಡ ಮಗು ಸಂದರ್ಭವು ತನ್ನ ಹಿಡಿತದಲ್ಲಿ ಇಲ್ಲ ಎಂಬುದನ್ನು ತಿಳಿದು ಅಳುತ್ತದೆ, ಅರಚುತ್ತದೆ, ಓಡಿಹೋಗುತ್ತದೆ, ಹಿಂದೆ ಸರಿಯುತ್ತದೆ. ಕೋಪಗೊಂಡ ಮಗು ಸಂದರ್ಭ ತನಗೆ ಅಹಿತವಾದುದು ಎಂದು ತಿಳಿದು ಅದನ್ನು ಪರಿಹರಿಸಲೆತ್ನಿಸಿ ಒದೆಯುತ್ತದೆ, ಕೈ ಕಾಲು ಝೂಡಿಸುತ್ತದೆ, ಕೂಗುತ್ತದೆ. ಎರಡರಲ್ಲಿಯೂ ಮಗು ತನ್ನ ನಿಯಂತ್ರಣಕ್ಕೆ ಮೀರಿದ ಪ್ರವೃತ್ತಿಗಳನ್ನು ತೋರ್ಪಡಿಸುತ್ತದೆ. ಸಂದರ್ಭದ ಮೇಲೆ ಅದಕ್ಕೆ ಹೇಗೆ ಹಿಡಿತವಿಲ್ಲವೋ ತನ್ನ ಭಾವಾಭಿವ್ಯಕ್ತಿಯ ಮೇಲೂ ಅದಕ್ಕೆ ಹಿಡಿತವಿಲ್ಲ. ತಾನು ಬಯಸಿ ಮಾಡಬೇಕೆಂದಿರುವ ಕೆಲಸಕ್ಕೆ ಅಡ್ಡಿ ಬಂದಾಗ, ತನ್ನ ಓಡಾಟದ ಸ್ವಾತಂತ್ರ್ಯ ಇಲ್ಲವಾದಾಗ ಮಗು ಕೋಪಗೊಳ್ಳುತ್ತದೆ. ಇದು ಕೋಪದ ಸಂದರ್ಭಶುದ್ಧಿ. ದೊಡ್ಡವರಲ್ಲಿಯೂ ಭಯವಾಗಲೀ ಕೋಪವಾಗಲೀ ಹೀಗೆಯೇ ಸಂದರ್ಭಾಧೀನವಾದುದು. ಸಂದರ್ಭ ನಮ್ಮ ಕೈಮೀರಿದರೆ, ಸಂದರ್ಭ ನಮ್ಮ ಇಷ್ಟಕ್ಕೆ ಅನುಸಾರವಾಗಿರದಿದ್ದರೆ ನಮಗೆ ಭಯವಾಗಲೀ ಕೋಪವಾಗಲೀ ಒದಗುತ್ತದೆ. ಯಾವ ಯಾವ ಭಾವವೆಂದು ನಿರ್ದೇಶಿಸುವಾಗಲೂ ಕೇವಲ ಮುಖಲಕ್ಷಣಗಳನ್ನು ನೋಡುವುದಕ್ಕಿಂತ ಸಂದರ್ಭ ಏನೆಂದು ಅರಿತರೆ ಸುಲಭವಾಗುತ್ತದೆ. ಸಂದರ್ಭದ ಅಗತ್ಯವನ್ನು ಕಂಡೇ ಭಾವವು ಉತ್ಪನ್ನವಾಗುತ್ತದೆ; ಮುಂದಿರುವ ಸಮಸ್ಯೆಯನ್ನು ಪರಿಹರಿಸುವ ಅಗತ್ಯ ಜೀವಿಗಿರುತ್ತದೆ. ಈ ಸಮಸ್ಯಾಪರಿಹಾರದಲ್ಲಿ ದೈಹಿಕವಿಕಾರಗಳು ಕೆಲಸಕ್ಕೆ ಬೇಕಾದ ಶಕ್ತಿಯನ್ನು ಉಂಟುಮಾಡಿ ನೆರವಾಗುತ್ತವೆ.

ಸಂದರ್ಭದ ಅಗತ್ಯಗಳನ್ನು ಅರಿತುಕೊಳ್ಳುವುದು ಬೆಳೆಯುತ್ತಿರುವ ವ್ಯಕ್ತಿಯ ಮುಖ್ಯಲಕ್ಷಣ. ಮಗುವಿಗೆ ಇಂಥ ಅಗತ್ಯಗಳು ತಿಳಿಯುವುದಿಲ್ಲ; ಸಂದರ್ಭಾನುಸಾರವಾಗಿ ಅಭಿವ್ಯಕ್ತಿಯನ್ನು ಮಾರ್ಪಡಿಸಿಕೊಳ್ಳುವುದೂ ಅದಕ್ಕೆ ಸಾಧ್ಯವಿಲ್ಲ. ವಯಸ್ಸುಬಂದಂತೆ, ಅನುಭವ ಹೆಚ್ಚಿದಂತೆ ಈ ಸಾಮರ್ಥ್ಯವೂ ಪ್ರೌಢವಾಗುತ್ತದೆ. ಭಾವಪ್ರದರ್ಶನದಲ್ಲಿ ಕಲಿಕೆ ಸೇರಿಕೊಳ್ಳುತ್ತದೆ. ಯಾವ ಸಂದರ್ಭದಲ್ಲಿ ಎಂಥ ಭಾವ ಯೋಗ್ಯವಾದುದು,

ಅದಕ್ಕೆ ಎಂಥ ಅಭಿವ್ಯಕ್ತಿಯಿದ್ದರೆ ಸಮಾಜ ಒಪ್ಪುವುದು ಎನ್ನುವುದನ್ನು ಬೆಳೆಯುತ್ತಿರುವ ವ್ಯಕ್ತಿ ಕಲಿತುಕೊಳ್ಳಬೇಕು. ಇದು ತಾನಾಗಿ ಬರತಕ್ಕ ಶಕ್ತಿಯಲ್ಲ. ಬೇರೆಬೇರೆ ಸಂದರ್ಭಗಳಲ್ಲಿ ಒಂದೇ ಭಾವ ಉಂಟಾದಾಗ, ಒಂದೇ ಸಂದರ್ಭದಲ್ಲಿ ಬೇರೆ ಬೇರೆ ಭಾವಗಳು ಉಂಟಾದಾಗ ಕಲಿಕೆಯ ಪಾತ್ರ ಸ್ಪಷ್ಟವಾಗುತ್ತದೆ. ಸಂಸ್ಕೃತಿಯಲ್ಲಿ ಕೆಲವು ಅಭಿವ್ಯಕ್ತಿಗಳನ್ನು ಮೆಚ್ಚಿಕೊಂಡಿದ್ದಾರೆ; ಕೆಲವನ್ನು ಗ್ರಾಮ್ಯವೆಂದು ಕಡೆಗಣ್ಣಿನಿಂದ ನೋಡುತ್ತಾರೆ. ಕೆಲವು ಭಾವಗಳು ಸರ್ವಸಮ್ಮತ; ಕೆಲವು ಅಲ್ಲ. ಪ್ರೌಢನಾದವನು ಭಯಗೊಂಡರೆ, ಸಂಸ್ಕೃತನಾದವನು ಕೋಪಗೊಂಡರೆ ಯೋಗ್ಯವಲ್ಲವೆಂಬ ಕಲ್ಪನೆಯಿಲ್ಲವೆ? ಸಹಜವಾಗಿ ಭಯಗೊಂಡರೂ ಇತರರ ಎದುರಿನಲ್ಲಿ ಅದನ್ನು ವ್ಯಕ್ತಪಡಿಸಲು ನಾಚುತ್ತೇವೆ; ಕೋಪಗೊಂಡಾಗಲೂ ಹೀಗೆಯೆ. ಎಂದರೆ ಭಾವದಲ್ಲಿ ನಿಯಂತ್ರಣ ಸಾಧ್ಯ. ಭಾವದ ಅಭಿವ್ಯಕ್ತಿಯನ್ನು ಸ್ವೇಚ್ಛೆಯಾಗಿ ಬಿಡದೆ ನಾಲ್ಕು ಜನ ಒಪ್ಪುವಂತೆ ಹೊರಗೆಡಹಬೇಕೆಂಬ ಕಾತರ ಬೆಳೆದವರಲ್ಲಿ ಇರುತ್ತದೆ. ಇದು ಸಮಾಜದೊಂದಿಗೆ ಹೊಂದಿಕೊಂಡು ಬಾಳುವ ಬಯಕೆಯಿಂದ ಪ್ರವರ್ತನೆಯಲ್ಲಿಯೇ ಒದಗುವ ಸಂಯಮ. ಮಕ್ಕಳಲ್ಲಿ ಈ ಸಂಯಮ ಕಾಣುವುದಿಲ್ಲ; ದೊಡ್ಡವರಲ್ಲಿ ಈ ಸಂಯಮ ಕಾಣದಿದ್ದರೆ ಅದು ಗರ್ಹ್ಯವಾಗುತ್ತದೆ.

ಇದಲ್ಲದೆ ಭಾವ ಬೆಳೆಯುವಾಗ ಮಾನಸಿಕವ್ಯಾಪಾರ ಹೆಚ್ಚು ಹೆಚ್ಚಾಗಿ ಸೇರಿ ಬರುತ್ತದೆ. ಭಾವಗಳ ವೈವಿಧ್ಯಕ್ಕೆ ಇದೂ ಒಂದು ಕಾರಣ. ದ್ವೇಷವಿದ್ದರೂ ಅದನ್ನು ನೇರವಾಗಿ ಅಥವಾ ಒಡನೆಯೇ ವ್ಯಕ್ತಪಡಿಸದೆ ಬಳಸಿ ಬಳಸಿ, ಸಮಯ ಸಾಧಿಸಿ, ಚುರುಕನ್ನು ಮುಟ್ಟಿಸುವುದು ದೊಡ್ಡವರಿಗೆ ಮಾತ್ರ ಸಾಧ್ಯ. ಅನಿಷ್ಟವಾದ ವಸ್ತುವನ್ನು ಅಥವಾ ವ್ಯಕ್ತಿಯನ್ನು ಪ್ರತಿಭಟಿಸುವುದು ಉದ್ದೇಶವಾದರೂ ಅದಕ್ಕೆ ಹೊಂದಿಕೊಂಡಂತೆ ಹತ್ತಾರು ಭಾವಗಳು ಸೇರುತ್ತವೆ. ಭಾವಗಳು ಕಲೆಯುವುದು, ಕಲೆತ ಭಾವಗಳು ಬಿಡಿ ಬಿಡಿಯಾಗಿ ನಿಲ್ಲುವುದು, ಭಾವ ಒಂದೇ ಆದರೂ ಅದರ ಛಾಯೆಗಳು ನಾಲ್ಕಾರು ಕಾಣುವುದು ಇವೆಲ್ಲ ಬೆಳೆಯುವಾಗ ಬರುವಂಥ ವಿವರಗಳು. ಈ ಕಾರಣದಿಂದಲೇ, ದೊಡ್ಡವರ ಭಾವಗಳು ನೂರಾರು. ಪ್ರೀತಿ ಒಂದೇ ಆದರೂ, ಕಾಮ, ವಾತ್ಸಲ್ಯ ವಿಶ್ವಾಸ, ಅಭಿಮಾನ, ಗೌರವ, ಅನುಕಂಪ, ಹೀಗೆ ಸಂದರ್ಭಗಳಿಂದ ಅದು ಬೇರೆ ಬೇರೆಯಾಗುತ್ತದೆ. ಜಡವಸ್ತುಗಳಲ್ಲಿರುವ ಪ್ರೀತಿಯೇ ಬೇರೆ, ಮನುಷ್ಯರ ಮೇಲೆ ಇರುವ ಪ್ರೀತಿಯೇ ಬೇರೆ. ತಂದೆತಾಯಿ ಮಕ್ಕಳನ್ನು ವಾತ್ಸಲ್ಯದಿಂದ ಕಂಡರೆ, ಮಕ್ಕಳು ತಂದೆತಾಯಿಯರನ್ನು ಗೌರವದಿಂದ ಕಾಣುತ್ತಾರೆ; ಗಂಡ ಹೆಂಡಿರು ಪ್ರೀತಿಸುತ್ತಾರೆ, ಅಕ್ಕ ತಮ್ಮಂದಿರು ವಿಶ್ವಾಸದಿಂದ ಇರುತ್ತಾರೆ. ಇವೆಲ್ಲ ಮೂಲಭೂತವಾಗಿ ಪ್ರೀತಿಯೇ.

**ಆತಂಕ, ತವಕ**

ಮುಂದೆ ಬರಲಿರುವ ಭಯವನ್ನು ಈಗಲೇ ಅನುಭವಿಸುವುದು ಆತಂಕ (anxiety) ಎನ್ನಿಸಿಕೊಳ್ಳುತ್ತದೆ. ಬೆಳೆದ ಮನುಷ್ಯನಿಗೆ ಎಲ್ಲೆಡೆಗಳಿಂದಲೂ, ಭಯಜನಕವಾದ ಪ್ರಚೋದಕಗಳು ಬರಬಹುದು. ತನ್ನ ಆರೋಗ್ಯಕ್ಕೆ ಭಂಗತರುವ, ಸಮಸ್ಥಿತಿಯನ್ನು ತಪ್ಪಿಸುವ, ತನ್ನ ಸುಖಕ್ಕೆ ಸಂಚಕಾರವನ್ನು ತರುವ, ತನ್ನಲ್ಲಿದ್ದುದನ್ನು ಅಪಹರಿಸುವ, ತನಗೆ ಬೇಡಾದುದನ್ನು ತಂದೊಡ್ಡುವ ಪ್ರಸಂಗಗಳು ನಡೆಯ ಬಹುದೆಂಬ ಕಾತರ ಅವನಲ್ಲಿ ಮೊದಲೇ ಮೂಡುವುದು ಅವನ ಬುದ್ಧಿಶಕ್ತಿಯ ಫಲ! ಆತಂಕ ಮನಸ್ಸಿನ ಸ್ಥಿತಿ, ಅದರಲ್ಲಿ ಭಯದಲ್ಲಿದ್ದಂತೆ ದೈಹಿಕವಿಕಾರಗಳು ಸ್ಪಷ್ಟವಾಗಿರು ವುದಿಲ್ಲ. ಆತಂಕಕ್ಕೂ ಭಯಕ್ಕೂ ಭೇದವುಂಟು. ಒಂದು ಪ್ರಯೋಗದಲ್ಲಿ ಪ್ರಾಣಿ ಸಮಯದಲ್ಲಿ ವಿದ್ಯುಚ್ಛಕ್ತಿಯ ಬಿಸಿಯನ್ನು ಪಡೆಯುತ್ತದೆ; ಇದು ಅನಿಷ್ಟ, ಅಹಿತ. ಆದರೂ ಅದರಿಂದ ಅಪಘಾತವೇನಿಲ್ಲ. ಮೊದಲನೆಯ ಬಾರಿ ಗೊತ್ತಾದ ವೇಳೆಯಲ್ಲಿ ಶಾಖ ಮುಟ್ಟಿಸಿದಾಗ ಪ್ರಾಣಿ ಅರಚಿಕೊಳ್ಳುತ್ತದೆ, ಓಡಲು ಯತ್ನಿಸುತ್ತದೆ, ಕಂಗಾಲಾಗು ತ್ತದೆ, ಭಯದ ದೈಹಿಕವಿಕಾರಗಳನ್ನು ಸ್ಪಷ್ಟಪಡಿಸುತ್ತದೆ. ಮುಂದೆ ಅಂಥವೇ ಸಂರ್ಭದಲ್ಲಿ ಹೆದರಬೇಕಾದ ಪ್ರಸಂಗವಿಲ್ಲವೆಂದು ಪ್ರಾಣಿಗೆ ಅರಿವಾಗಿದ್ದರೂ ಆ ಸನ್ನಿವೇಶದಿಂದ ಓಡಿಹೋಗಲೆತ್ನಿಸುತ್ತದೆ. ಮೊದಲು ಭಯಪಟ್ಟಾಗ ತೊಂದರೆಯೇನೂ ಆಗಲಿಲ್ಲ ವೆನ್ನುವ ನೆನಪು ಆದಕ್ಕಿರಲಿಲ್ಲವೆಂದಲ್ಲ; ಆದರೂ ಆತಂಕ ತಪ್ಪಲಿಲ್ಲ. ಪ್ರಾಣಿ ಈಗ ಆತಂಕದ ಪ್ರವೃತ್ತಿಯನ್ನು ಕಲಿತಿದೆಯೆಂದು ಹೇಳಲು ಬರುತ್ತದೆ.

ನಮ್ಮ ಬಾಳಿನಲ್ಲಿಯೂ ನಾವು ಭಯಪಟ್ಟ ಸಂದರ್ಭಗಳಿಂದ ನಮಗೇನೂ ತೀವ್ರ ಅಪಘಾತ ಆಗದೆ ಇರಬಹುದು, ನಾವು ಹೆದರಿದ ಸಂದರ್ಭಗಳೇ ಇಲ್ಲದಿರ ಬಹುದು. ಆದರೂ ಮುಂದಿನ ಪ್ರಸಂಗದಲ್ಲಿ ಇಂಥ ಅಪಘಾತ ಆದೀತೆಂಬ ಆತಂಕ ನಮ್ಮನ್ನು ಕಾಡುತ್ತದೆ. ಒಮ್ಮೆ ಚುಚ್ಚುಮದ್ದನ್ನು ಪಡೆದ ಮಗು ಮತ್ತೊಂದು ಸಂದರ್ಭದಲ್ಲಿ ಚುಚ್ಚುಮದ್ದಿನ ಅಗತ್ಯ ಬಿದ್ದಾಗ ಬೆದರುತ್ತದೆ; ಮೊದಲು ತನಗೇನು ಗಾಸಿಯಾಗಲಿಲ್ಲವೆಂದು ತಿಳಿದಿದ್ದರೂ ಆತಂಕ ತಪ್ಪುವುದಿಲ್ಲವಷ್ಟೆ? ಹಲ್ಲು ಕೀಳುವುದು ಕಷ್ಟವಾಗದೆಂದು ಎಲ್ಲರೂ ಹೇಳಿದರೂ ನಾವು ಕೀಳಿಸಿಕೊಳ್ಳಬೇಕಾದಾಗ ಭಯ ತಪ್ಪುತ್ತದೆಯೆ? ಶಸ್ತ್ರಚಿಕಿತ್ಸೆಗಳನ್ನು ನೂರಾರು ಮಾಡಿ ಯಶಸ್ವಿಯಾದ ವೈದ್ಯನಿಗೇ ಶಸ್ತ್ರಚಿಕಿತ್ಸೆಯಾಗಬೇಕಾದಾಗ ಅವನಿಗೆ ಆತಂಕ ಇರದೆ ಇರುತ್ತದೆಯೇ? ವಾಸ್ತವವಾಗಿ ಮುಂದಿರುವ ಸಂದರ್ಭಕ್ಕೆ ಪ್ರತಿಕ್ರಿಯೆ ಭಯ; ಈ ಪ್ರತಿಕ್ರಿಯೆಯನ್ನು ಮೊದಲೇ ಪ್ರಚೋದಿಸಿಕೊಂಡಾಗ ಅದಕ್ಕೆ ನಡೆಯುವ ಪ್ರತಿಕ್ರಿಯೆ ಆತಂಕ. ಇದು ಬುದ್ಧಿಶಕ್ತಿ ಯಿಂದ ನಡೆಯುವ ಮಾನಸಿಕವ್ಯಾಪಾರ. ಮಂಕುಬುದ್ಧಿಯವರಿಗೆ ಆತಂಕ ಇರುವುದಿಲ್ಲ; ತುಂಬ ಬುದ್ಧಿವಂತರಿಗೆ ಆತಂಕ ಹೆಚ್ಚು. ತೊಂದರೆ ಸಂಭವಿಸಬಹುದಾದ ಸಂದರ್ಭ

ಗಳನ್ನು ಕಲ್ಪಿಸಿಕೊಳ್ಳಲು ಮಡ್ಡಿಗೆ ಸಾಧ್ಯವಿಲ್ಲ. ಅವನು ತೊಂದರೆ ಬಂದಾಗ ಕಷ್ಟ ಪಡುತ್ತಾನಷ್ಟೆ ; ತೊಂದರೆ ಬಂದೀತೆಂದು ಬವಣೆಪಡುವುದಿಲ್ಲ.

ಆತಂಕವಿದ್ದಾಗ ಪ್ರಾಣಿಗೆ ಏನಾದರೂ ಮಾಡಬೇಕೆಂಬ ತವಕವಿರುವುದು ಸಹಜ. ಮುಂಬರುವ ಭಯದಿಂದ ತಪ್ಪಿಸಿಕೊಳ್ಳಲು ಪೂರ್ವಸಿದ್ಧತೆಯನ್ನು ಈಗಲೇ ಹವಣಿಸುವ ಸಂದರ್ಭ ಇದು. ನಮಗೆ ತುಂಬ ಇಷ್ಟವಿರುವ ವ್ಯಕ್ತಿ ಬೇನೆಯಿಂದ ಬಳಲುತ್ತಿರುವಾಗ, ಅವರಿಗೆ ಏನಾದೀತೋ ಎನ್ನುವ ಹೆದರಿಕೆಯಿಂದ ನಾವು ಕಂಗಾಲಾಗುತ್ತೇವೆ ; ಅವರು ಸಾಯದೆ ಉಳಿಯಲೆಂದು ಸಾಧ್ಯವಾದುದನ್ನೆಲ್ಲ ಮಾಡುತ್ತಿದ್ದರೂ ನಮಗೆ ನಿದ್ರೆ ಬಾರದೆ, ಅನ್ನ ಸೇರದೆ, ಬಾಳಿನಲ್ಲಿ ಆಸಕ್ತಿ ಕುಗ್ಗಿ, ನರದೌರ್ಬಲ್ಯದಿಂದ ಸೊರಗಿ ಸಂಕಟಪಡುತ್ತೇವೆ. ಇದು ಆತಂಕದ ಪ್ರಭಾವ. ಚಿತೆ ನಿರ್ಜೀವವಾದುದನ್ನು ಸುಟ್ಟರೆ, ಚಿಂತೆ ಜೀವನವನ್ನೇ ಸುಡುತ್ತದೆ ಎಂದು ಸಂಸ್ಕೃತಶ್ಲೋಕವೊಂದು ಹೇಳುವುದು ಸರಿಯೇ. ಆತಂಕದಿಂದ ನಮ್ಮ ಭಾವ ಜೀವನವೇ ಬದಲಾಗುತ್ತದೆ ; ಇಂಥದೇ ಹೀಗೇ ಆಗುತ್ತದೆ ಎನ್ನುವ ನಿರ್ದಿಷ್ಟ ಜ್ಞಾನವಿಲ್ಲದೆ ಏನೋ ಆದೀತು ಎನ್ನುವ ಭಯ ಕಾಡುತ್ತದೆ. ಈ ಭಯದಿಂದ ಶ್ವಾಸೋಚ್ಛ್ವಾಸ, ರಕ್ತಚಲನೆ, ಜೀರ್ಣಕ್ರಿಯೆ, ಇವುಗಳೆಲ್ಲ ಆಯತಪ್ಪುತ್ತವೆ. ಆತಂಕ ಅತಿಯಾದರೆ ಅದರಿಂದ ಮನಃಸ್ವಾಸ್ಥ್ಯವೇ ತಪ್ಪಬಹುದು. ಹಲವಾರು ಮನೋ ವಿಕಾರಗಳಲ್ಲಿ ಆತಂಕ ಅವಶ್ಯವಾಗಿ ಕಾರಣಸಾಮಗ್ರಿಯಾಗಿ ಸೇರಿಕೊಂಡಿರುತ್ತದೆ. ಆತಂಕ ಯಾವ ನೆಲೆಯಲ್ಲಿದೆ, ಯಾವ ಪ್ರಮಾಣದಲ್ಲಿದೆ ಎಂದು ತಿಳಿಯಲು ಮನಃಶಾಸ್ತ್ರಜ್ಞರು ಆತಂಕಮಾಪಕಪಟ್ಟಿಕೆ ( Anxiety Scale ) ಗಳನ್ನು ಬಳಸುತ್ತಾರೆ.

### ರೋಷ

ಆತಂಕ ಭಯದಿಂದ ಉಂಟಾಗುವಂತೆಯೇ ಕೋಪದಿಂದ ಉದ್ಧತಿ, ಮೇಲೆ ಬೀಳುವಿಕೆ ( aggression ) ಉಂಟಾಗುತ್ತದೆ. ಸಂದರ್ಭವು ಆತಂಕಜನಕವಾಗಿದ್ದಾಗ ಅದನ್ನು ಹೊರದೂಡುವ ಅಥವಾ ಅದರಿಂದ ಪಾರಾಗುವ ಪ್ರಯತ್ನಗಳನ್ನು ಮಾಡಿ, ಅವೆಲ್ಲ ವಿಫಲವಾದರೆ ಪ್ರಾಣಿ ರೊಚ್ಚಿಗೇಳುತ್ತದೆ, ಸುಗ್ಗಿ ಬರುತ್ತದೆ, ಕಟಕಟನೆ ಹಲ್ಲುಕಡಿದು ಸಿಡಿಮಿಡಿಗುಟ್ಟಿ ಹರಿಹಾಯುತ್ತದೆ. ಇದು ಧಾರ್ಷ್ಟ್ಯದ ಚಿತ್ರ. ಕುರುಡುಕೋಪದಿಂದ, ವಿಚಾರಶಕ್ತಿ ಮರೆಯಾಗಿ, ತಾನು ಮಾಡುವ ಕೆಲಸದಿಂದ ಏನಾದೀತು ಎನ್ನುವ ಅರಿವೂ ಬೇರೆಯವರು ಏನೆಂದುಕೊಂಡಾರು ಎನ್ನುವ ಪರಿವೆಯೂ ಇಲ್ಲದೆ, ಉನ್ಮತ್ತರಂತೆ ಹಾರಾಡಿ, ಕೂಗಾಡಿ, ಬಯ್ದಾಡಿ ಭಯಾನಕ ರಾಗುವ ವ್ಯಕ್ತಿಗಳನ್ನು ನೀವು ನೋಡಿಲ್ಲವೆ ? ಸಂದರ್ಭದ ಬಿಸಿ ಆರಿದರೆ ಅವರೂ ತಣ್ಣಗಾದಾರು ; ಆದರೆ ಸಂದರ್ಭದಿಂದ ಉತ್ತೇಜಿತರಾಗಿ ಸಂದರ್ಭವನ್ನೇ ಹೊಡೆದು ಹಾಕಲು ಅವರು ಹವಣಿಸುವಾಗ ಕೋಪದ ಈ ಮುಖ ಕಾಣುತ್ತದೆ. ಕುಂಬದಿಂದ

ಹೊರಗೆ ಹಾರಿ ಬಂದ ನರಸಿಂಹ ಹಿರಣ್ಯಕಶಿಪುವನ್ನು ಸೀಳಿಕೊಂಡು ಅವನ ರಕ್ತವನ್ನೇ ಕುಡಿದು ಅವನ ಕರುಳುಗಳನ್ನೇ ಮಾಲೆ ಮಾಡಿಕೊಂಡು ಅಬ್ಬರಿಸಿದಾಗಲೂ ಅವನ ಕೋಪ ಇಳಿಯಲಿಲ್ಲವಂತೆ; ದೇವತೆಗಳೂ ನಡುಗಿದರಂತೆ, ಮೂರುಲೋಕವೂ ಆತಂಕಕ್ಕೀಡಾಯಿತಂತೆ. ಹೀಗೆ ಕೋಪದ ಕಾವು ನೆತ್ತಿಗೇರಿದಾಗ (ಇದು ಹೈಪೋಥಾಲಮಸ್ ಕ್ರಿಯೆಯೇ!) ಯುಕ್ತಾಯುಕ್ತದ ಪರಿಗಣನೆಯಿರುವುದಿಲ್ಲ; ಸಂದರ್ಭಕ್ಕೆ ತಕ್ಕಷ್ಟೇ ಪ್ರತಿಕ್ರಿಯೆಯೆನ್ನುವ ಔಚಿತ್ಯ ಇರುವುದಿಲ್ಲ. ವೀಣೆಯಲ್ಲಿ ತಮಗೆ ಬೇಕಾದ ಸ್ವರ ಬರದಿದ್ದರೆ ವೀಣೆಯನ್ನೇ ಎತ್ತಿ / ಕುಕ್ಕಿಬಿಡುವ ವೈಣಿಕರು ಇದ್ದಾರೆ. ಹಾಗೆ ಮಾಡುವುದರಿಂದ ಸ್ವರ ಬರದೆ ಇರುವುದು ಹೋಗಲಿ, ವಾದ್ಯವೇ ಒಡೆದು ಹೋಗುತ್ತದೆ ಎನ್ನುವ ಜ್ಞಾನ ಅವರಿಗೆ ಆ ಸಂದರ್ಭದಲ್ಲಿ ಇರುವುದಿಲ್ಲ. ನಿರಾಶೆಯಿಂದ, ಪ್ರತಿಷ್ಠಾಭಂಗದಿಂದ ಹೀಗೆ ಅಪಸ್ಮಾರ ಒದಗುತ್ತದೆ, ರೌದ್ರಾವೇಶ ಮೂಡುತ್ತದೆ.

ಕೆಲವರು ಸ್ವಭಾವದಲ್ಲೇ ಇಂಥ ಪ್ರವೃತ್ತಿಯುಳ್ಳವರು. 'ಉಂಡಾಯಿತೆ ಭಟ್ಟರೆ ಎಂದರೆ ಗುದ್ದಾಡುವ ಬನ್ನಿ' ಎನ್ನುವ ಸ್ವಭಾದವರನ್ನು ನೀವು ನೋಡಿಯೇ ಇರುತ್ತೀರಿ. ಸಣ್ಣಸಣ್ಣದಕ್ಕೆಲ್ಲ ದೊಡ್ಡ ಸಿಟ್ಟನ್ನು ತೋರಿಸಿ, ಕಾದಾಡಲು ಉತ್ಸುಕರಾಗಿರುವ, ಕದನಕುತೂಹಲಿಗಳು ಹಲವರಿದ್ದಾರೆ. ಬೇರೆಯವರೊಡನೆ ಸೆಣಸುವುದು ಆಗದಿದ್ದರೆ, ಸಂದರ್ಭವನ್ನು ಎದುರಿಸುವುದೂ ಆಗದಿದ್ದರೆ, 'ಕೈಲಾಗದವ ಮೈ ಪರಚಿಕೊಂಡ' ಎನ್ನುವಂತೆ ವರ್ತಿಸುತ್ತಾರೆ. ಮುದುಕರಲ್ಲಿಯೂ ಕೈಲಾಗದಿದ್ದಾಗ ಈ ಪರಿಸ್ಥಿತಿ ಒದಗುವುದು ವಿರಳವೇನಲ್ಲ. ಕೋಪವೆಂಬ ಭಾವ ಮಿತಿಮೀರಿದಾಗ ಉದ್ಧತಿಯಾಗಿ ಪರಿಣಮಿಸುತ್ತದೆ.

೬

## ಪ್ರೀತಿ, ನಗು

ಮಗುವಿಗೆ ಬೇನೆಯಿಲ್ಲದೆ, ತಾಯಿಯ ಮುದ್ದು ಬೇಕಾದಷ್ಟು ದೊರೆತಾಗ ಅದು ನಗುತ್ತದೆ, ಆಡುತ್ತದೆ. ಪ್ರೀತಿಗೆ ಪ್ರತಿಕ್ರಿಯೆಯಾಗಿ ಸಂತೋಷಗೊಳ್ಳುತ್ತದೆ. ಇದು ಜೀವನದುದ್ದಕ್ಕೂ ನಿಜವಾದ ಮಾತು. ನಮ್ಮ ಸಮಸ್ಥಿತಿಗೆ ಯಾವ ವಿಕಾರವೂ ಒದಗದೆ, ನಮ್ಮ ಸ್ಥಾನ ಸುಭದ್ರವಾಗಿದ್ದು, ಹತ್ತಿರದವರ ಪ್ರೀತಿವಿಶ್ವಾಸಗಳನ್ನು ಗಳಿಸಿಕೊಂಡರೆ ನಾವು ಸುಖಿಗಳು, ಆವರಣಕ್ಕೆ ನಮ್ಮ ಪ್ರತಿಕ್ರಿಯೆ ಸಂತೋಷ. ಮಗುವಿನ ಸಂತೋಷವೇನೋ ದೈಹಿಕವಾದುದೇ: ತಾಯಿಯ ಶರೀರಸಂಪರ್ಕದಿಂದ ಉಂಟಾಗುವ ಕಾವು, ಕೆನ್ನೆಯನ್ನು ನೇವರಿಸಿ ತುಟಿಗಳನ್ನು ಮುಟ್ಟುವುದು, ಎತ್ತಿಕೊಂಡು ಮುದ್ದಾಡುವುದು, ತಾಯಿಯ ಮೊಲೆಯುಣ್ಣುವುದು ಇವೆಲ್ಲ ದೈಹಿಕಸಂತೃಪ್ತಿಯನ್ನು ತರುತ್ತವೆ. ಮಗು ಬೆಳೆದಂತೆ ಈ ಕೇವಲ ದೈಹಿಕಸಾಂತ್ವನ, ಪ್ರಚೋದನೆಗಳಲ್ಲಿಯೇ ತೃಪ್ತಿಯನ್ನು ಕಾಣದೆ ಆಟ, ಆಟಿಗೆಗಳು, ದೊಡ್ಡವರ ಗಮನ, ಸ್ನೇಹಿತರು, ಪುರಸ್ಕಾರ, ಸುಖಸಂಭಾರಗಳು ಇವುಗಳಿಂದ ಸಂತೋಷಪಡುವ ಮನೋಧರ್ಮ ಬೆಳೆಯುತ್ತದೆ. ಸಂಸ್ಕೃತಿಯ ಆಸರೆಯಲ್ಲಿ

ಸಂತೋಷದ ಪ್ರಕಾರಗಳು ವಿವಿಧ, ಸುಖಸಾಧನೆಗಳು ಅನಂತ. ಬಾಳಿನಲ್ಲಿ ಉದ್ಯೋಗ, ಅನುಕೂಲಳಾದ ಗೃಹಿಣಿ, ಮಾನವಂತನಾದ ಗಂಡ, ಚೆಲುವಿನ ಮಕ್ಕಳು, ಸೊಗಸಾದ ಮನೆ, ಕೈತುಂಬ ಹಣ, ಕೀರ್ತಿ ಮೊದಲಾದ ಹಲವು ವಿವರಗಳು ಸುಖಸಂಭಾರಗಳು. ಇಲ್ಲಿ ಸಾಂಘಿಕ ಮತ್ತು ಸಾಂಸ್ಕೃತಿಕ ಪ್ರವರ್ತನೆ ಕೆಲಸಮಾಡುತ್ತದೆ.

ಅದರೂ ವಿಶ್ವಾಸವೆನ್ನುವುದು ದೈಹಿಕವೂ ಹೌದು. ತಾಯಿಯ ಪ್ರೇಮವನ್ನು ಮಗು ಬಯಸುವಾಗ ಅದಕ್ಕೆ ದೈಹಿಕಸಾಂತ್ವನವೂ ಇದೆ. ಬೆಳೆದ ಹುಡುಗರು ತಂದೆ-ತಾಯಿಯರ ಗಮನವನ್ನು ಪಡೆಯಲಿಚ್ಛಿಸುವಾಗಲೂ ಇದೇ ರೀತಿಯ ಸಮಾಧಾನ ವುಂಟು. ಪ್ರೌಢಾವಸ್ಥೆಯಲ್ಲಿ ಸ್ತ್ರೀಪುರುಷರು ಸಂಸರ್ಗವನ್ನು ಬಯಸಿ, ಮೋಹಿಸಿ, ಕಾಮಿಸಿ, ಪ್ರೀತಿಸುವಾಗಲೂ ದೈಹಿಕವಿಕಾರಗಳಿಲ್ಲದ ಇಲ್ಲ. ಮಾನವಪ್ರೇಮಕ್ಕೆ ಆಧ್ಯಾತ್ಮಿಕ ನೆಲೆಯುಂಟು, ನಿಜ; ಕೇವಲ ದೇಹಸಂಬಂಧದಿಂದ ಗಂಡಹೆಂಡತಿಯರ ಪ್ರಣಯ ಊರ್ಜಿತವಾಗುವುದಿಲ್ಲ. ಮನೋವೃತ್ತಿಯ ಪ್ರಭಾವ ಪ್ರಬಲವಾದುದೇ. ಆದರೂ, ಪ್ರವರ್ತನೆಯ ಹಿನ್ನೆಲೆ ಈ ಅನುರಾಗಕ್ಕೆ ಉಂಟು, ದೇಹದಲ್ಲಿ ಇದಕ್ಕೆ ಸೌಲಭ್ಯ ವುಂಟು ಎನ್ನುವುದನ್ನು ಒಪ್ಪಿಕೊಳ್ಳಬೇಕು. ಚೆಲುವು, ಒಲುವು ಗ್ರಂಥಿಗಳಿಂದಲೇ ಆಗುವಂಥವು ಎಂದೇನು ಹಟಹಿಡಿಯದಿದ್ದರೂ, ಗ್ರಂಥಿಗಳೂ ಮಧುರಸನ್ನಿವೇಶದಲ್ಲಿ ತಮ್ಮ ಪ್ರಭಾವವನ್ನು ಬೀರುತ್ತವೆ ಎನ್ನಲಡ್ಡಿಯಿಲ್ಲ.

ಸಂತೋಷಸೂಚಕವಾದ ನಗು ಎನ್ನುವ ಪ್ರವೃತ್ತಿ ಮನುಷ್ಯವರ್ಗಕ್ಕೆ ಸೀಮಿತ ವಾದುದು. ನರಮಂಡಲದ ವ್ಯವಸ್ಥೆ ಪಕ್ವವಾದಾಗಲೇ, ಮಸ್ತಿಷ್ಕ ಪ್ರೌಢವಾದಾಗಲೇ ನಗುವುದು ಸಾಧ್ಯ. ಎಳೆಯ ಮಕ್ಕಳ ಮಂದಹಾಸ ನಿಸರ್ಗಸಿದ್ಧವಾದುದು; ಅದನ್ನು ಯಾರೂ ಕಲಿಸಬೇಕಾಗಿಲ್ಲ. ಆದರೆ ಎರಡನೆಯವರು ನಕ್ಕಾಗ ಮಗುವೂ ನಗಬೇಕಾದರೆ ಅದಕ್ಕೆ ಸುಮಾರು ಎರಡುವರ್ಷ ತುಂಬಿರಬೇಕು. ಆಟದ ಸಮಯದಲ್ಲಿ ಕೇಕೆ ಹಾಕಿ ಮಗು ನಗುವಾಗ ಸಂದರ್ಭದ ಸ್ವಾರಸ್ಯವನ್ನು ಅರಿಯುವ ಬುದ್ಧಿಶಕ್ತಿ ಇರಬೇಕು. ನಗುವಿಗೆ ಯೋಗ್ಯವಾದ ಸಂದರ್ಭ ಇಂಥದೆಂದು ಕಂಡುಕೊಳ್ಳುವುದು ಮಗು ಬೆಳೆದಾಗಲೇ ಸಾಧ್ಯ. ಹಾಸ್ಯಪ್ರಸಂಗಗಳನ್ನು ಓದಿ ಅಥವಾ ಕೇಳಿ, ಹಾಸ್ಯಸನ್ನಿವೇಶ ಗಳನ್ನು ನೋಡಿ ನಗಲು ಪ್ರೌಢಿಮೆ ಬೇಕು. ಇದು ಕೇಂದ್ರೀಯ ನರಮಂಡಲ ಸುವ್ಯವಸ್ಥಿತವಾದಾಗ ಮಾತ್ರ ಸಾಧ್ಯ. ಬುದ್ಧಿಶಕ್ತಿ ಸಾಕಷ್ಟು ಇಲ್ಲದ ಹುಡುಗರು ನಗುವುದೇ ಇಲ್ಲ. ಈ ಕಾರಣದಿಂದಲೇ ನೀಚವರ್ಗದ ಪ್ರಾಣಿಗಳಿಗೆ ನಗುವುದು ಸಾಧ್ಯವಿಲ್ಲ. ನಗು ಸಹಜ ಪ್ರವೃತ್ತಿಯೆಂದಮಾತ್ರಕ್ಕೆ ಅದರ ನಿಯಂತ್ರಣವೇ ಆಗದು ಎನ್ನುವಹಾಗಿಲ್ಲ. ಮಕ್ಕಳ ನಗು ಸ್ವಚ್ಛಂದವಾದುದು; ಗಟ್ಟಿಯಾಗಿ ಹೊಟ್ಟೆತುಂಬ ನಗುತ್ತಾರೆ ಮಕ್ಕಳು, ಯಾರು ಏನು ಅಂದುಕೊಳ್ಳುತ್ತಾರೆ ಎನ್ನುವ ಗೊಂದಲ ಅವರಿಗಿಲ್ಲ. ಆದರೆ ಬೆಳೆಯುವ ದಾರಿಯಲ್ಲಿ ನಗು ಕುಗ್ಗುತ್ತದೆ. ದೊಡ್ಡ ಹುಡುಗರು ಮಿತಿಯಿಲ್ಲದೆ ನಗುವುದಿಲ್ಲ, ನಗುವಂಥ ಸಂದರ್ಭವಾದರೂ ನಗುವನ್ನು ಹೊರಗೆಡಹು ವುದಿಲ್ಲ, ನಕ್ಕರೂ ಅದರಲ್ಲಿ ನಯ-ನಾಜೂಕು ಇರುತ್ತದೆ, ಔಚಿತ್ಯದ ದೃಷ್ಟಿ ಇರುತ್ತದೆ

ವ್ಯಕ್ತಿವಿಕಾಸದ ನೆಲೆಯಲ್ಲಿ, ಸಂಸ್ಕೃತಿಯ ಪ್ರಭಾವದಿಂದ ಈ ಸಹಜಪ್ರವೃತ್ತಿ ಮಾರ್ಪಡುತ್ತದೆ.

ನಗು ಸಹಜಪ್ರವೃತ್ತಿಯಾದರೆ, ಸಾರ್ವಜನೀನವಾದರೆ ಅದಕ್ಕೆ ಮೂಲಭೂತವಾದ ಕಾರಣವಿರಬೇಕಷ್ಟೆ? ನಗುವಿನಲ್ಲಿ ದೈಹಿಕವಿಕಾರಗಳಿಲ್ಲದೆ ಇಲ್ಲ. ಮುಖದ ಮಾಂಸಗಳೂ, ಎದೆಯ ಸ್ನಾಯು ಖಂಡಗಳೂ, ಶ್ವಾಸೋಚ್ಛ್ವಾಸದ ಅಂಗಾಂಗಗಳೂ ಇಲ್ಲಿ ವಿಕೃತವಾಗುತ್ತವೆ. ನಗುವಿನಲ್ಲಿ ನರಮಂಡಲದ ಹಲವಾರು ಭಾಗಗಳು ಸುಸಂಗತವಾಗಿ ಪರಸ್ಪರಪೂರಕವಾಗಿ ಕೆಲಸಮಾಡುತ್ತವೆ. ನಗು ಹೆಚ್ಚಾದರೆ ಬಿಕ್ಕಳಿಕೆ, ವಾಂತಿ ಇವು ಉಂಟಾಗುತ್ತವೆ; ದುರ್ಬಲರಾದ ರೋಗಿಗಳು ನಕ್ಕಾಗ ಮಸ್ತಿಷ್ಕದಲ್ಲಿ ರಕ್ತಸ್ರಾವವಾಗಿ ಸತ್ತಿರುವ ನಿದರ್ಶನಗಳೂ ಉಂಟು. ಎಂದರೆ, ನಗುವಿಗೆ ದೇಹದ ಸಂಬಂಧ ಎಷ್ಟು ನಿಕಟವಾದುದೆಂದು ಸ್ಪಷ್ಟವಾಗುತ್ತದೆ. ನಗುವಿಗೆ ಸಾಂಘಿಕ, ಸಾಂಸ್ಕೃತಿಕ ಪ್ರಭಾವವಿದ್ದರೂ, ಮೂಲದಲ್ಲಿ ಅದು ದೈಹಿಕಪ್ರವೃತ್ತಿಯೇ. ಅದರಿಂದ ದೇಹಧಾರಣೆಗೆ, ದೈಹಿಕವ್ಯಾಪಾರಗಳ ವ್ಯವಸ್ಥೆಗೆ ನೆರವಾಗುತ್ತದೆ.

ನಗೆಯ ಕಾರಣವನ್ನು ವಿವರಿಸಿ ಹಲವಾರು ತಜ್ಞರು ತಂತಮ್ಮ ಸಿದ್ಧಾಂತಗಳನ್ನು ಮಂಡಿಸಿದ್ದಾರೆ. ಹರ್ಬರ್ಟ್ ಸ್ಪೆನ್ಸರ್ ನರಗಳಿಂದ ಒದಗುವ ಶಕ್ತಿ ಬೇಕಾದ ಪ್ರಮಾಣಕ್ಕಿಂತ ಹೆಚ್ಚಾಗಿದ್ದರೆ ಅದನ್ನು ಹೊರೆಗೆಡಹುವ ಒಂದು ಸಾಧನ ನಗು ಎಂದಿದ್ದಾನೆ. ಹೆನ್ರಿ ಬರ್ಗ್‌ಸನ್ ಸಾಮಾಜಿಕ ನೆಲೆಯನ್ನವಲಂಬಿಸಿದನು. ಯಾವುದಾದರೂ ವ್ಯಕ್ತಿಯ ವರ್ತನೆ ಗಡುಸಾಗಿದ್ದರೆ, ಬಿಗಿಯಾಗಿದ್ದರೆ, ಒರಟಾಗಿದ್ದರೆ, ಯಾಂತ್ರಿಕವಾಗಿದ್ದರೆ ಅದನ್ನು ಸರಿಪಡಿಸಲೆಂದು ನಾವು ನಗುತ್ತೇವೆ. ನಾವು ನಕ್ಕಾಗ ಆ ವ್ಯಕ್ತಿಗೆ ತನ್ನ ವರ್ತನೆಯನ್ನು ತಿದ್ದಿಕೊಳ್ಳುವ ಅವಕಾಶವುಂಟು. ಇದು ಬರ್ಗ್‌ಸನ್ ವಾದ.

ವಿಲಿಯಂ ಮೆಕ್‌ಡೂಗಲ್ ಎಂಬ ಮನಃಶಾಸ್ತ್ರಜ್ಞನು ದೈಹಿಕ, ಮಾನಸಿಕ ಪ್ರವೃತ್ತಿಗಳನ್ನೆಲ್ಲ ಪರಿಶೀಲಿಸಿ ತನ್ನ ಸಿದ್ಧಾಂತವನ್ನು ಮಂಡಿಸಿದ್ದಾನೆ. ಸಂದರ್ಭ ನಮಗೆ ಅಹಿತವಾಗಿದ್ದಾಗ ನಮ್ಮಲ್ಲಿ ಅದನ್ನು ಪ್ರತಿಭಟಿಸಲೆಂದು ಶಕ್ತಿ ಉತ್ಪನ್ನವಾಗುತ್ತದೆ; ಯಾರಾದರೂ ಪೇಚಿಗೆ ಸಿಕ್ಕಾಗ ಕಷ್ಟಕ್ಕೆ ಸಿಕ್ಕಾಗ, ನಾವು ನೆರವಾಗುತ್ತೇವೆ; ಇದರ ಹಿನ್ನೆಲೆ ಅನುಕಂಪ. ಸಹಾನುಭೂತಿಯು ಮೇಲ್ತರದ ಪ್ರಾಣಿಗಳಲ್ಲಿ ಸಹಜಪ್ರವೃತ್ತಿ. ಆದರೆ ಅನುಕಂಪ ಅನಗತ್ಯವಾದಾಗ, ನಮ್ಮ ನೆರವು ಸಂದರ್ಭದಲ್ಲಿ ಬೇಡದಿದ್ದಾಗ, ಮೊದಲೇ ಉತ್ಪನ್ನವಾದ ಶಕ್ತಿ ಇನ್ನು ಹೇಗಾದರೂ ಹೊರಹೊರಡಲೇ ಬೇಕಷ್ಟೆ. ಇದು ನಗುವಿನ ಮೂಲಕ ಹೊರಹರಿಯುತ್ತದೆ. ನಾವು ನಗದೇ ಇದ್ದರೆ ಈ ಸಹಾನುಭೂತಿಯಿಂದ ನಮಗೆ ದುಃಖವುಂಟಾಗಿ ದೈಹಿಕವಾದ ಅನನುಕೂಲ ತಲೆದೋರುತ್ತದೆ.

## ಪರಿಚ್ಛೇದ ಆರು

# ಕಲಿಕೆಯ ಸಮಸ್ಯೆ

೧

### ಕಲಿಯುವ ಪ್ರವೃತ್ತಿ

ನೀಚವರ್ಗದ ಪ್ರಾಣಿಗಳು ಹುಟ್ಟುವಾಗ ಹೇಗಿರುವುವೋ ಸಾಯುವಾಗಲೂ ಹಾಗೆಯೇ ಇರುವುವು; ಆಕಾರ, ಪ್ರಮಾಣ ಮಾರ್ಪಡಬಹುದು. ಆದರೆ ಸ್ವಭಾವವಾಗಲೀ, ಕೌಶಲವಾಗಲೀ, ಪ್ರವೃತ್ತಿಗಳಾಗಲೀ ಬದಲಾಗುವುದಿಲ್ಲ. ಮನುಷ್ಯರಲ್ಲಿಯೂ ಹುಟ್ಟಿದಂತೆಯೇ ಇದ್ದು ಸಾಯುವವರನ್ನು ಕಂಡಿದ್ದೇವೆ; ಅವರಿಗೆ ಹೊಸ ಪ್ರವೃತ್ತಿಗಳಾಗಲೀ, ಚಾತುರ್ಯಗಳಾಗಲೀ ಒದಗುವುದಿಲ್ಲ. ಇಂಥ ಪ್ರಾಣಿಗಳನ್ನು, ಮನುಷ್ಯರನ್ನು ಕುರಿತು "ಅವು (ಅವರು) ಕಲಿಯಲಾರವು (ರು)" ಎನ್ನುತ್ತೇವೆ. ಮನುಷ್ಯ ಬೆಳೆಯುತ್ತಿದ್ದಾನೆನ್ನಲು ಅವನು ಕಲಿಯುವುದೇ ಸಾಕ್ಷಿ. ಅವನು ಕಲಿಯಲಾರದಿದ್ದರೆ ಅದು ಸೋಜಿಗ, ಅವನಿಗೆ ಬುದ್ಧಿಶಕ್ತಿ ಸಾಲದು ಎನ್ನುತ್ತೇವೆ. ನಾಯಿ, ಬೆಕ್ಕು, ಹಸು, ಕರಡಿ, ಕಪಿ ಮೊದಲಾದ ಪ್ರಾಣಿಗಳು ಕಲಿಯುತ್ತವೆ; ಕಪ್ಪೆ, ಬಸವನಹುಳು, ಮಣ್ಣುಹುಳು, ಮಿಡತೆ, ಸೊಳ್ಳೆ ಮೊದಲಾದ ಪ್ರಾಣಿಗಳು ಕಲಿಯಲಾರವು. ಕೇಂದ್ರೀಯ ನರಮಂಡಲದ ವ್ಯವಸ್ಥೆ ಚೆನ್ನಾಗಿದ್ದರೆ, ತತ್ರಾಪಿ ಮಸ್ತಿಷ್ಕ ಪ್ರೌಢವಾಗಿದ್ದರೆ, ಕಲಿಯುವುದು ಸಾಧ್ಯ. ಆದಕ್ಕಾಗಿಯೇ ಉಚ್ಚವರ್ಗದ ಜಂತುಗಳಲ್ಲಿ ಕಲಿಕೆ ಕಾಣಬರುತ್ತದೆ.

ಪ್ರಾಣಿಗಳಿಗೆ ಸಹಜವಾಗಿ, ಎಂದರೆ ಹುಟ್ಟಿದೊಡನೆ ಸಿದ್ಧವಾಗಿ, ಇರುವ ಪ್ರವೃತ್ತಿಗಳು ಹಲವಾರು ಇವೆಯೆಂದು ಹಿಂದಿನ ಪರಿಚ್ಛೇದದಲ್ಲಿ ಅರಿತೆವಷ್ಟೆ. ಇದು ಶರೀರರಚನೆ ಮತ್ತು ಮೂಲಪ್ರವೃತ್ತಿಗಳ ಮಾತು. ಪ್ರವೃತ್ತಿಗನುಸಾರವಾಗಿ ಕ್ರಿಯೆಯ ಸ್ವರೂಪವೂ ಸಿದ್ಧವಾಗುತ್ತದೆ. ಬೆಕ್ಕಿಗೆ ಆಹಾರದ ಬಯಕೆ ತೀರಬೇಕಾದರೆ ಇಲಿಗಳನ್ನು ಹಿಡಿಯುವ ಸಾಮರ್ಥ್ಯ ಇರಬೇಕು; ಇದು ಸಹಜವಾಗಿಯೇ ಬರುತ್ತದೆಯೇ ಅಥವಾ ಬೆಳೆಯುತ್ತ ಬೆಕ್ಕು ಇದನ್ನು ಕಲಿಯುತ್ತದೆಯೇ? ಹೀಗೆ ಪ್ರಶ್ನೆ ಮಾಡುವಾಗ, ಪ್ರಾಣಿಗೆ ಸ್ವಭಾವಸಿದ್ಧವಾಗಿ ಇರುವ ಶಕ್ತಿ ಬೇರೆ, ತಾನು ಪ್ರಯತ್ನಪೂರ್ವಕವಾಗಿಯೋ ಅರಿವಿಲ್ಲದ ಅಭ್ಯಾಸದಿಂದಲೋ ಪಡೆದುಕೊಂಡ ಶಕ್ತಿ ಬೇರೆ ಎಂದು ಬಗೆಯುತ್ತೇವೆ. ಮೊದಲನೆಯದು ಸಹಜಪ್ರವೃತ್ತಿ (instinct), ಎರಡನೆಯದು ಕಲಿಕೆ.

ಕಲಿಕೆಯೆಂದರೆ ಪ್ರಾಣಿ ಏನನ್ನು ಮಾಡುತ್ತದೆಯೋ, ಏನನ್ನು ಅನುಭವಿಸುತ್ತದೆಯೋ ಅದರಿಂದ ತನ್ನ ಪ್ರತಿಕ್ರಿಯೆಯನ್ನು ಮಾರ್ಪಡಿಸಿಕೊಳ್ಳುವುದು. ಸ್ವಭಾವದ ವ್ಯಾಪ್ತಿಯಲ್ಲಿ ಸೇರದ, ಆವರಣದ ಪ್ರಚೋದನೆ-ಪ್ರತಿಕ್ರಿಯೆಗಳಿಂದಾಗಿ ಮೇಲ್ತರದ ಪ್ರಾಣಿಗೆ ಹೊಸ ಕೌಶಲಗಳನ್ನು ಪಡೆದುಕೊಳ್ಳುವ ಸೌಲಭ್ಯವಿದೆ. ನಾಯಿ ತನ್ನ ಯಜಮಾನ ಯಾರು ಎನ್ನುವುದನ್ನು ಗುರುತಿಸಬಲ್ಲುದು, ತನ್ನ ಆಹಾರದ ವೇಳೆ ಯಾವುದು ಎಂದು ನೆನಪಿಟ್ಟುಕೊಳ್ಳಬಲ್ಲುದು, ತಾನು ಹೇಗೆ ನಡೆದುಕೊಂಡರೆ ಯಜಮಾನ ಮೆಚ್ಚಿಯಾನು ಎಂದು ಗ್ರಹಿಸಬಲ್ಲುದು. ಇವೆಲ್ಲ ಕಲಿಕೆಯ ಪ್ರಕಾರಗಳೇ. ಮಗು ಆಹಾರ ಬೇಕಾದಾಗ ಅಳಬೇಕು, ತಾಯಿಯನ್ನು ಕಂಡಾಗ ನಸುನಗಬೇಕು, ಎತ್ತಿಕೊಳ್ಳಬೇಕಾದರೆ ಕೂಗಬೇಕು ಎಂದೆಲ್ಲ ಕಲಿಯುತ್ತದೆ. ಒಳಗಿನ ಅಥವಾ ಹೊರಗಿನ ಪ್ರಚೋದನೆಗಳಿಗೆ ಯಾವ, ಎಂಥ ಪ್ರತಿಕ್ರಿಯೆ ಹೆಚ್ಚು ಫಲಕಾರಿಯಾದೀತು ಎನ್ನುವುದನ್ನು ಮನದಟ್ಟು ಮಾಡಿಕೊಂಡು, ಆಯಾ ಪ್ರಚೋದನೆಗಳಿಗೆ ಅದೇ, ಅಂಥದೇ ಪ್ರತಿಕ್ರಿಯೆಯನ್ನು ಮಾಡುತ್ತ ಬರುವುದೇ ಕಲಿಕೆ. ಕಲಿಯದಿದ್ದರೆ ಜೀವಿಯ ಬದುಕು ಯಶಸ್ವಿಯಾಗದು.

ಮಗು ಹುಟ್ಟಿದಾಗ ಕುಳಿತುಕೊಳ್ಳಲಾರದು, ನಿಲ್ಲಲಾರದು, ನಡೆಯಲಾರದು, ಓಡಲಾರದು, ಸೈಕಲ್ ಸವಾರಿಮಾಡಲಾರದು, ಯಂತ್ರವನ್ನು ನಡೆಸಲಾರದು; ಮಾತನಾಡಲಾರದು, ಮನೆಯವರ ಆಚಾರವಿಚಾರಗಳನ್ನು ಅರಿಯಲಾರದು, ಬೇರೆಯವರೊಡನೆ ವ್ಯವಹರಿಸಲಾರದು. ಇವೆಲ್ಲ ಕೌಶಲಗಳು. ಮಗು ಬೆಳೆದಂತೆ, ಕಾಲಕ್ರಮದಲ್ಲಿ ಇವೆಲ್ಲ ಒದಗುತ್ತವೆ. ಹೊರಗಿನ ಸನ್ನಿವೇಶದಿಂದ ಪ್ರಚೋದನೆ ಇಲ್ಲದಿದ್ದರೆ, ಬೇರೆಯವರ ನೆರವಿಲ್ಲದಿದ್ದರೆ, ಈ ಕೌಶಲಗಳನ್ನು ಬೇರೆಯವರಲ್ಲಿ ನೋಡದಿದ್ದರೆ ಮಗು ಇದನ್ನೆಲ್ಲ ಪಡೆದುಕೊಳ್ಳಲಾರದು. ಸ್ವಭಾವ ಎಷ್ಟು ಬಲವಾಗಿದ್ದರೂ, ಪ್ರವೃತ್ತಿ ಎಷ್ಟು ಪ್ರಬಲವಾಗಿದ್ದರೂ ಆವರಣದ ನೆರವಿಲ್ಲದೆ ಕಲಿಯುವುದು ಸಾಧ್ಯವಿಲ್ಲ. ಕಲಿಕೆಯಲ್ಲಿಯೂ ಪ್ರವರ್ತನೆಯ ಪಾತ್ರ ಹೆಚ್ಚಿನದು.

ಕಲಿಕೆಯು ಕೆಲಸದಲ್ಲಿ ಕೌಶಲಗಳನ್ನು ಪಡೆಯುವುದೇ. ಕೆಲಸ ಮಾಡುವುದಿರಲಿ, ಮೋಟಾರ್ ನಡೆಸುವುದಿರಲಿ, ಬಾಣ ಬಿಡುವುದಿರಲಿ. ಕಾವ್ಯವಾಚನವಾಗಲಿ ವೀಣೆ ನುಡಿಸುವುದಿರಲಿ, ಕ್ರಿಕೆಟ್ ಆಡುವುದಿರಲಿ ಅದರಲ್ಲಿ ಕೌಶಲವು ತಾನಾಗಿ ಬರುವುದಿಲ್ಲ. ಪ್ರತಿಭೆಯಿದ್ದರೂ ಅಭ್ಯಾಸವಿಲ್ಲದೆ ವಿದ್ಯೆ ಸಿದ್ಧಿಸುವುದಿಲ್ಲ. ಕೆಲವು ಕ್ರಿಯಾತ್ಮಕವಾದ ಕೌಶಲಗಳು (motor skills) ಹಸ್ತಲಾಘವ, ದೈಹಿಕಚಾತುರ್ಯ. ಮೊದಲಾದುವು. ಇನ್ನು ಕೆಲವು ಇಂದ್ರಿಯಗಳಿಂದ ಪಡೆದುಕೊಂಡ ಜ್ಞಾನವನ್ನವಲಂಬಿಸಿ ಸಿದ್ಧವಾದ ಕ್ರಿಯಾತ್ಮಕವಾದ ಕೌಶಲಗಳು; ಇವನ್ನು ಐಂದ್ರಿಯಕ್ರಿಯಾತ್ಮಕ ಕೌಶಲಗಳು (sensory-motor skills) ಎನ್ನುತ್ತಾರೆ. ಕಾಡಿನಲ್ಲಿ ಬೇಟೆಯಾಡುತ್ತ ಪ್ರಾಣಿ ಓಡುವುದನ್ನು ನೋಡಿ ಬಾಣ ಹೊಡೆಯುವಾಗ ಈ ಕೌಶಲ ಕೆಲಸಕ್ಕೆ ಬರುತ್ತದೆ; ಪ್ರಾಣಿ ನಿಂತಲ್ಲಿ ನಿಲ್ಲದೆ ವೇಗವಾಗಿ ಓಡುತ್ತಿದ್ದರೂ ಕುಶಲನಾದ ಬೇಡ ಅದನ್ನು ಹೊಡೆದುರುಳಿಸುತ್ತಾನೆ. ಪೇಟೆ ಪ್ರದೇಶದಲ್ಲಿ ಕಾರು ನಡೆಸುವುದೂ ಇಂಥ ಕೌಶಲವೇ. ಮತ್ತೆ ಕೆಲವು ಭಾಷಾತ್ಮಕವಾದ ಕೌಶಲಗಳು (verbal skills). ಭಾಷೆ ಇಲ್ಲಿ ಪ್ರಮುಖವಾಗಿ ಕೆಲಸಕ್ಕೆ ಬರುತ್ತದೆ. ಕಾವ್ಯವಾಚನ, ಗ್ರಂಥಪಠಣ, ಉಪನ್ಯಾಸ ಮೊದಲಾದುವು ನಿದರ್ಶನಗಳು. ಇಲ್ಲಿ ಭಾಷೆಯ ಪಾತ್ರ ಹೆಚ್ಚಾದರೂ, ಐಂದ್ರಿಯ ಕ್ರಿಯಾತ್ಮಕ ಕೌಶಲಗಳು ಇದ್ದೇ ಇರುತ್ತವೆ. ಸಂದರ್ಭಶುದ್ಧಿ ಎಲ್ಲ ಕೌಶಲಗಳಲ್ಲಿಯೂ ಅಗತ್ಯವೇ.

ಆವರಣದಿಂದ ಒದಗುವ ಪ್ರಚೋದನೆಗಳಿಗೆ ಮೇಲ್ತರದ ಪ್ರಾಣಿಯು ಪ್ರತಿಕ್ರಿಯೆ ನಡೆಸುವ ಸಮಯದಲ್ಲಿ, ಪ್ರಾಣಿಯು ಸಂದರ್ಭದ ಅಗತ್ಯವೇನು, ತನ್ನ ಪ್ರತಿಕ್ರಿಯೆಯಿಂದ ತನಗೆಷ್ಟು ಪ್ರಯೋಜನವಾಯಿತು, ಪ್ರತಿಕ್ರಿಯೆ ಸಮರ್ಪಕವೋ ಹೇಗೆ ಎನ್ನುವುದನ್ನು ಕಂಡುಕೊಳ್ಳುತ್ತದೆ. ಹೀಗೆ ಕಂಡುಕೊಂಡಾಗ ಪ್ರತಿಕ್ರಿಯೆಯನ್ನು ಮಾರ್ಪಡಿಸಿಕೊಂಡರೆ ಇನ್ನಷ್ಟು ಹೆಚ್ಚಿನ ಪ್ರಯೋಜನ ಎಂದು ನಿರ್ಧರಿಸಿ ಅದೇ ಪ್ರತಿಕ್ರಿಯೆಯಲ್ಲಿ ಬದಲಾವಣೆಗಳನ್ನು ಮೂಡಿಸಿಕೊಳ್ಳುತ್ತದೆ. ಎಂದರೆ ವರ್ತನೆಯಲ್ಲಿ ಪ್ರೌಢಿಮೆ ವ್ಯಕ್ತವಾಗುತ್ತದೆ. ಇದರ ಪ್ರಯೋಜನವು ಕೌಶಲವನ್ನು ವಶಪಡಿಸಿಕೊಳ್ಳುವುದು; ಇದೇ ಕಲಿಕೆಯೆನಿಸಿಕೊಳ್ಳುತ್ತದೆ. ಪ್ರತಿಕ್ರಿಯೆಯನ್ನು ಮಾಡದೆ ಪ್ರಾಣಿಯು ಸಂದರ್ಭವನ್ನು ಪರಿಶೀಲಿಸುತ್ತಲೇ ಇದ್ದಾಗಲೂ ಕಲಿಕೆ ನಡೆಯುವುದೆಂದು ಮನಃಶಾಸ್ತ್ರದ ಪ್ರಯೋಗಗಳು ಸ್ಪಷ್ಟಪಡಿಸಿವೆ. ಸಂದರ್ಭದ ಪ್ರಚೋದನೆಗೆ ಒಡನೆಯೇ ಪ್ರತಿಕ್ರಿಯೆಯನ್ನು ಮಾಡದೆ, ನಿಧಾನಿಸಿದಾಗ ಪ್ರಾಣಿಯು ಒಳಗೇ ಯಾವ ಪ್ರತಿಕ್ರಿಯೆಯಿಂದ ಏನು ಪ್ರಯೋಜನ ಎಂಬುದನ್ನು ನಿರ್ಧರಿಸುತ್ತ ಇರುತ್ತದೆ. ಅನಂತರ ಮಾಡಿದ ಪ್ರತಿಕ್ರಿಯೆ ಸಫಲವಾಗಿ ಸಮರ್ಪಕವಾಗಿ ಇರುವುದೇ ಕಲಿಕೆಗೆ ನಿದರ್ಶನ.

## ೨

### ಪ್ರಾಣಿಗಳಲ್ಲಿ ಕಲಿಕೆ

ಮೇಲ್ಮಟ್ಟದ ಪ್ರಾಣಿಗಳ ವರ್ತನೆಯನ್ನು ನೋಡಿದರೆ ಅವು ಕಲಿಯುತ್ತವೆ ಎನ್ನುವುದು ತಿಳಿಯುತ್ತದೆ. ಆವರಣದಿಂದ ಒದಗಿದ ಪ್ರಚೋದನೆಯು ಪ್ರಾಣಿಯಲ್ಲಿ ಒತ್ತಡವನ್ನು ಉಂಟುಮಾಡುತ್ತದೆ; ಈ ಒತ್ತಡವನ್ನು ಇಳಿಸಬೇಕಾದರೆ ಪ್ರತಿಕ್ರಿಯೆ ಮಾಡಬೇಕು. ಇದು ಆವರಣದೊಂದಿಗೆ ಹೊಂದಾಣಿಕೆಯ ಅಗತ್ಯ. ಆವರಣದೊಂದಿಗೆ ಚೆನ್ನಾಗಿ ಹೊಂದಿಕೊಂಡರೆ ತಂತಮ್ಮ ಬಯಕೆಗಳು ತೀರುವುವು, ಆವರಣದಿಂದ ಒದಗಿದ ಒತ್ತಡ ಇಳಿಯುತ್ತದೆ ಎನ್ನುವುದನ್ನು ಪ್ರಾಣಿ ಅರಿತು, ಹೊಂದಾಣಿಕೆ ಸಮರ್ಪಕವಾಗಿ ಆಗುವವರೆಗೂ ಪ್ರತಿಕ್ರಿಯೆಯನ್ನು ಮಾರ್ಪಡಿಸಿಕೊಳ್ಳುತ್ತಿರುತ್ತದೆ. ಪ್ರಾಣಿಗಳಲ್ಲಿ ನರಮಂಡಲದ ವ್ಯವಸ್ಥೆ ಇನ್ನೂ ಅಪಕ್ವವಾದುದರಿಂದ ಈ ಮಾರ್ಪಾಡಿಗೆ ಮಿತಿಯುಂಟು; ಅವುಗಳು ಕಲಿಯುವ ಕೌಶಲಕ್ಕೂ ಮಿತಿಯುಂಟು. ಆದರೆ ಮನುಷ್ಯನ ನೆಲೆಯಲ್ಲಿ ನಡೆಯುವ ಕಲಿಕೆಗೂ ಪ್ರಾಣಿಗಳ ಕಲಿಕೆಗೂ ಸಾಮ್ಯಸಾಧರ್ಮ್ಯಗಳಿಲ್ಲದೆ ಇಲ್ಲ. ನಿದರ್ಶನಕ್ಕೆ ಕಲಿಕೆ ಪ್ರವರ್ತನಾಧೀನವಾದುದು ಎನ್ನುವ ಮಾತು ಪ್ರಾಣಿಗಳಲ್ಲಿಯೂ ನಿಜ, ಮನುಷ್ಯರಲ್ಲಿಯೂ ನಿಜ. ಹೊರಗಿನ ಪ್ರೇರಣೆಯಿಲ್ಲದೆ, ಒಳಗಿನ ಪ್ರವರ್ತನೆಯಿಲ್ಲದೆ ಕಲಿಕೆಯು ಎಲ್ಲಿಯೂ ಸಾಧ್ಯವಿಲ್ಲ. ಮಕ್ಕಳು ಕಲಿಯುವಾಗ ಎಷ್ಟು ಪ್ರಲೋಭನೆಗಳನ್ನು ತೋರಿಸಬೇಕು? ಪ್ರಾಣಿಗಳು ಸರ್ಕಸ್ಸಿನಲ್ಲಿ ಆಟವಾಡಲು ಕಲಿಯುವಾಗ ಅವಕ್ಕೂ ಆಹಾರದ, ವಿಹಾರದ, ಸೌಖ್ಯದ ಪ್ರಲೋಭನೆಗಳು ಇರಲೇಬೇಕು. ಮಕ್ಕಳೂ ಪ್ರಾಣಿಗಳೂ ಮೆಚ್ಚಿಗೆಗಾಗಿ ಕಲಿಯುವುದೂ ಉಂಟು. ಹಣ, ಆಹಾರ, ಮೊದಲಾದ ಪುರಸ್ಕಾರಗಳೂ ಪ್ರಲೋಭನೆಗಳಂತಿದ್ದು ಕಲಿಕೆಯನ್ನು ಕಾರ್ಯಗತ ಮಾಡುತ್ತವೆ. ಕೆಲವೊಮ್ಮೆ, ಹಳೆಯ ಪ್ರತಿಕ್ರಿಯೆಯಿಂದ ಒದಗಿದ ದುಃಖದ, ಸಂಕಟದ ನೆನಪು ಹೊಸ ಪ್ರತಿಕ್ರಿಯೆಯಲ್ಲಿ ಮಾರ್ಪಾಟನ್ನು ತರುತ್ತದೆ; ಮತ್ತೆ ಶಿಕ್ಷೆಯನ್ನೋ ದುಃಖದ ಪರಿಸ್ಥಿತಿಯನ್ನೋ ತಪ್ಪಿಸಿಕೊಳ್ಳುವ ಆತಂಕ ಕಲಿಕೆಗೆ ಸ್ಫೂರ್ತಿಯನ್ನು ಕೊಡುತ್ತದೆ.

ಪ್ರಾಣಿಗಳ ಕಲಿಕೆಯ ವಿಚಾರವಾಗಿ ಹಲವಾರು ಸ್ವಾರಸ್ಯವಾದ ಪ್ರಯೋಗಗಳನ್ನು ನಡೆಸಿದ್ದಾರೆ. ಇವುಗಳಲ್ಲಿ ಇಲಿ ಮೊದಲಾದ ಕೆಳವರ್ಗದ ಪ್ರಾಣಿಗಳ ಕಲಿಕೆಯನ್ನು ಅಧ್ಯಯನಮಾಡಲು ವ್ಯೂಹ (maze)ದ ಸಂವಿಧಾನವನ್ನು ಬಳಸುತ್ತಾರೆ. ವ್ಯೂಹವೆಂದರೆ ತೊಡರಾದ ಒಂದು ಮಾರ್ಗಣವ್ಯವಸ್ಥೆ (ಚಿತ್ರ ೫) ಹಲಗೆಗಳಿಂದ ಮಾಡಿದ ಈ ವ್ಯೂಹದೊಳಗೆ ಇಲಿ 'ಪ್ರವೇಶ' ಎನ್ನುವ ಕಡೆ ಹೊಕ್ಕು 'ಆಹಾರ' ಎಂದು ತೋರಿಸುವ ಸ್ಥಳವನ್ನು ಮುಟ್ಟಬೇಕು; ಅಲ್ಲಿ ಅದಕ್ಕೆ

ಪ್ರಿಯವಾದ ಆಹಾರ ದೊರೆಯುತ್ತದೆ. ಅದನ್ನು ನೇರವಾದ ದಾರಿಯಿಂದ, ಅಡ್ಡದಾರಿ ಹಿಡಿಯದೆ, ನೆಟ್ಟಗೆ ಸೇರಲು ಇಲಿ ಕಲಿಯಬೇಕಾದುದು ಪ್ರಯೋಗದ ಉದ್ದೇಶ. ಆಹಾರ ಇರುವ ಮೂಲೆ ಒಂದಿದ್ದರೆ. ಆಹಾರವಿಲ್ಲದಿರುವ ಕುರುಡು ಮೂಲೆಗಳು ನಾಲ್ಕಾರು; ಈ ಮೂಲೆಗಳನ್ನು ಮುಟ್ಟಿ ಪ್ರಯೋಜನವಿಲ್ಲವೆನ್ನುವುದನ್ನು ಇಲಿ ಕಲಿಯಬೇಕು, ಈ ಮೂಲೆಗಳಿಗೆ ಹೋಗುವ ಕುರುಡುದಾರಿಯನ್ನೂ ಅರಿತು ಅವುಗಳನ್ನು ಹಿಡಿಯದಿರುವುದನ್ನೂ ಕಲಿಯಬೇಕು. ವ್ಯೂಹದೊಳಗೆ ಪ್ರವೇಶ ಮಾಡಿದೊಡನೆ ಅತ್ತಿತ್ತ ಅಡ್ಡಾಡದೆ, ಕುರುಡುದಾರಿಗಳನ್ನು ಹಿಡಿದು ಒಳಗೆ ಹೋಗಿ ಹಿಂದಿರುಗಿ ಬರದೆ. ನೆಟ್ಟಗೆ ಆಹಾರದಮೂಲೆಗೇ ಓಡಿದರೆ ಇಲಿ ವ್ಯೂಹವನ್ನು ಕಲಿಯಿತೆಂದರ್ಥ.

ಕಲಿಯುವ ಮುನ್ನ ಇಲಿ ಇರುವ ದಾರಿಗಳನ್ನೆಲ್ಲ ಒಳಹೊಕ್ಕು, ಅಲೆದಾಡಿ ಕಡೆಗೆ ಆಕಸ್ಮಿಕವಾಗಿ ಆಹಾರವನ್ನು ಮುಟ್ಟುತ್ತದೆ. ಯಾವುದು ನೇರವಾದ ದಾರಿ ಎನ್ನುವುದು ಅದಕ್ಕೆ ತಿಳಿಯಬೇಕಾದರೆ ಹೀಗೆ ಹತ್ತಾರು ಬಾರಿ ಅಲೆದಾಡಬೇಕಾಗುತ್ತದೆ. ಈ ನಿರರ್ಥಕ ಅಲೆದಾಟಕ್ಕೆ ಪ್ರಯತ್ನ-ಸ್ಖಾಲಿತ್ಯ (trial and error) ಎಂದು ಹೆಸರಿಟ್ಟಿದ್ದಾರೆ. ಆಹಾರವನ್ನು ಪಡೆಯಲು ಇಲಿ ಪ್ರಯತ್ನಿಸುವಾಗ ದಾರಿಗಳಲ್ಲಿ ಹಲವು ಸ್ಖಾಲಿತ್ಯಗಳು (ತಪ್ಪುದಾರಿಗಳು) ಎಂದು ಅದಕ್ಕೆ ತಟ್ಟನೆ ತಿಳಿಯುವುದಿಲ್ಲ. ಮತ್ತೆ ಮತ್ತೆ ಈ ದಾರಿಗಳಲ್ಲಿ ಅಲೆದಾಡಿ ಅವುಗಳ ವ್ಯರ್ಥತ್ವವನ್ನು ಮನದಟ್ಟು ಮಾಡಿಕೊಳ್ಳುತ್ತದೆ. ಆಹಾರ ದೊರೆತೊಡನೆ ಅದರ ಪ್ರಯತ್ನ ಫಲಕಾರಿಯಾಯಿತು. ಪ್ರಯೋಗದಲ್ಲಿ ಇಲಿ ಅಲೆದಾಡಿದ ಮಾರ್ಗವನ್ನೆಲ್ಲ ಗುರುತಿಸಿ, ಒಟ್ಟು ನೇರವಾದ ದಾರಿಗಿಂತ ಎಷ್ಟು ಹೆಚ್ಚು ಅಲೆದಾಡಿದೆ ಎಂದು ನಿರ್ಧರಿಸುತ್ತಾರೆ; ಅದು ತಪ್ಪು ದಾರಿಗಳನ್ನು ಹಿಡಿದದ್ದು ಎಷ್ಟು ಬಾರಿ ಎಂದು ಗುರುತಿಸಿಕೊಳ್ಳುತ್ತಾರೆ; ಆಹಾರವನ್ನು ಮುಟ್ಟಲು ಒಟ್ಟು ಎಷ್ಟು ವೇಳೆ ಹಿಡಿಯಿತು ಎಂದು ನಿರ್ಧರಿಸುತ್ತಾರೆ. ಪ್ರತಿ ಪ್ರಯತ್ನಕ್ಕೂ ಈ ಎಲ್ಲ ಅಂಶಗಳನ್ನೂ ಗುರುತಿಸಿಕೊಂಡಾಗ ಕ್ರಮೇಣ ತಪ್ಪುಗಳೂ, ಕಾಲವೂ, ನಿರರ್ಥಕ ಅಲೆದಾಟವೂ ಕಮ್ಮಿಯಾಗುವುದು ಸ್ಪಷ್ಟವಾಗುತ್ತದೆ. ತಪ್ಪದೆ, ತೀರ ಕಮ್ಮಿ ವೇಳೆಯಲ್ಲಿ, ನೇರವಾಗಿ ಆಹಾರ ಮುಟ್ಟುವುದನ್ನು ಮೂರುಬಾರಿ ಎಡೆಬಿಡದೆ ಮಾಡಿದರೆ ಇಲಿ ವ್ಯೂಹವನ್ನು ಕಲಿಯಿತು ಎಂದರ್ಥ. ಅಲ್ಲಿಂದ ಮುಂದೆ ವ್ಯೂಹದಲ್ಲಿ ಆಹಾರವನ್ನು ಪಡೆಯುವುದು ಅದಕ್ಕೆ ಅಭ್ಯಾಸವಾಗಿ ಬಿಡುತ್ತದೆ.

ಕಲಿಯುವುದು ಎಲ್ಲ ಪರಿಸ್ಥಿತಿಯಲ್ಲಿಯೂ ಒಂದೇ ಬಗೆಯಾಗಿರುವುದಿಲ್ಲ. ನಿದರ್ಶನಕ್ಕೆ, ಇಲಿಗೆ ಹೊಟ್ಟೆ ತುಂಬಿದ್ದಾಗ ವ್ಯೂಹದಲ್ಲಿ ಆಹಾರವನ್ನು ಹುಡುಕುವುದರಲ್ಲಿ ಅದಕ್ಕೆ ಆಸಕ್ತಿಯಿರುವುದಿಲ್ಲ; ಕುತೂಹಲದಿಂದ ಅಡ್ಡಾಡೀತು ಅಷ್ಟೆ. ಅದೇ ಹಸಿವೆಯಿದ್ದಾಗ ಆಹಾರ ಹುಡುಕುವ ಪ್ರಯತ್ನ ಬಿರುಸಾಗಿ ನಡೆಯುತ್ತದೆ; ಆಗ ಅದು ಕಲಿಯುವುದು ಸುಲಭ. ಈ ಕಾರಣದಿಂದ ವ್ಯೂಹಪ್ರಯೋಗಗಳಲ್ಲಿ



ಚಿತ್ರ ೫

ಬಿಳಿ ಇಲಿಯ ಕಲಿಕೆಯ ಅಧ್ಯಯನಕ್ಕೆಂದು ಕ್ಲಾರ್ಕ್ ವಿಶ್ವವಿದ್ಯಾನಿಲಯದಲ್ಲಿ ೧೯೦೦ ರಲ್ಲಿ ಮಾಡಿದ ವ್ಯೂಹ. ಇದೇ ಮೊಟ್ಟಮೊದಲನೆಯದು. ಇದನ್ನು ಮಾಡಿದಾತ ಸ್ಮಾಲ್ ಎನ್ನುವ ಮನೋವಿಜ್ಞಾನಿ.

ಇಲಿಯನ್ನು ಇಪ್ಪತ್ತುನಾಲ್ಕು ಗಂಟೆಗಳ ಕಾಲ ಉಪವಾಸವಿರಿಸಿ ಅನಂತರ ವ್ಯೂಹ ದೊಳಗೆ ಬಿಡುತ್ತಾರೆ: ಆಹಾರದ ಹುಡುಕಾಟಕ್ಕೆ ಆಂತರಿಕವಾದ ಪ್ರವರ್ತನೆಯಿರುತ್ತದೆ. ಮನುಷ್ಯರಲ್ಲಿಯೂ ಹೀಗೆಯೇ: ಪ್ರವರ್ತನೆ ಬಲವಾಗಿದ್ದಾಗ, ಪ್ರಯೋಜನವಿದ್ದಾಗ ಕಲಿಯುವುದು ಸುಲಭ. ಆಹಾರವೊಂದು ಇಲಿಗೆ ಪ್ರಲೋಭನೆಯಿದ್ದಂತೆ ಮನುಷ್ಯರಿಗೂ ಆವರಣದಲ್ಲಿ ಪ್ರಲೋಭನೆಯಿರುತ್ತದೆ. ಉದ್ಯೋಗಕ್ಕೆಂದು ಓದುವಾಗ ಬಡಹುಡುಗರು ಕಲಿಯುವಷ್ಟು ಶ್ರದ್ಧೆಯಿಂದ, ಯಶಸ್ಸಿನಿಂದ ಶ್ರೀಮಂತರ ಮಕ್ಕಳು ಕಲಿಯುವುದಿಲ್ಲ. ಬಡವರಿಗೆ ಉದ್ಯೋಗ ಬೇಗ ದೊರಕುವ ಪ್ರಲೋಭನೆಯಿರುವಾಗ ಒಳಗಿನ ಪ್ರವರ್ತನೆ ಅದಕ್ಕೆ ನೆರವಾಗುತ್ತದೆ. ಹಸಿದ ಇಲಿಯ ಪ್ರವರ್ತನೆಯೂ ಇದೇ ರೀತಿಯದು.

ವ್ಯೂಹದಲ್ಲಿ ತಪ್ಪುದಾರಿಗಳ ಕೊನೆಯಲ್ಲಿ ಬಿಸಿಮುಟ್ಟಿಸುವ ವಿಧಾನವನ್ನು ಬಳಸುತ್ತಾರೆ. ಹೊಟ್ಟೆತುಂಬಿದ ಇಲಿಯೂ ವ್ಯೂಹದೊಳಗೆ ಅಡ್ಡಾಡುವಾಗ ನೇರವಾದ ದಾರಿಯನ್ನು ಕಲಿಯಬೇಕೆಂದು ಪ್ರಯೋಗದ ಉದ್ದೇಶವಾದರೆ, ತಪ್ಪುದಾರಿಯಲ್ಲಿ ಇಲಿ ನಡೆದಾಗ ಅದರ ಕೊನೆಯಲ್ಲಿ ವಿದ್ಯುದ್ವ್ಯವಸ್ಥೆಯಿಂದ ಬಿಸಿ ತಾಕುವಂತೆ ಮಾಡುತ್ತಾರೆ: ಇಲಿ ಬೆದರಿ ಹಿಂದಿರುಗುತ್ತದೆ. ಮತ್ತೆ ಅದೇ ದಾರಿಯಲ್ಲಿ ಹೊರಟಾಗ ಬಿಸಿಯ ನೆನಪಾಗಿ ಅರ್ಧದಾರಿಯಲ್ಲೇ ಹಿಂದಿರುಗಬಹುದು. ನೇರವಾದ ದಾರಿಯೊಂದನ್ನು ಬಿಟ್ಟು ಉಳಿದ ದಾರಿಗಳಲ್ಲೆಲ್ಲ ಹೀಗೆಯೇ ಆತಂಕವನ್ನುಂಟುಮಾಡಿದಾಗ ಇಲಿ ನೇರವಾದ ದಾರಿಯಲ್ಲಿಯೇ ಹೋಗಲು ಕಲಿಯುತ್ತದೆ. ಇಲ್ಲಿ ಇಲಿಗೆ ಆಹಾರದ ಪ್ರಲೋಭನೆಯಿರದಿದ್ದರೂ, ಅಪಘಾತವನ್ನು ತಪ್ಪಿಸಿಕೊಳ್ಳುವ ಆತಂಕ ಇರುತ್ತದೆ. ಮಕ್ಕಳಲ್ಲಿ ಕೂಡ ಶಿಕ್ಷೆಯನ್ನು ತಪ್ಪಿಸಿಕೊಳ್ಳುವ ಕಾತರದಿಂದ ಕಲಿಯುವುದು ಫಲಕಾರಿಯಾಗುತ್ತದೆ. ಪ್ರಾಣಿಯಾಗಲೀ, ಮನುಷ್ಯನಾಗಲಿ ಪುರಸ್ಕಾರವನ್ನು ಪಡೆಯಬೇಕು, ಶಿಕ್ಷೆಯಿಂದ ಪಾರಾಗಬೇಕು ಎನ್ನುವ ಎರಡು ಪ್ರಲೋಭನೆಗಳಿಂದಲೇ ಕಲಿಯಲು ಮೊದಲಿಡುವುದು.

ಮನುಷ್ಯರ ಕಲಿಕೆಯನ್ನು ಅಧ್ಯಯನಮಾಡಲೂ ವ್ಯೂಹಪದ್ಧತಿಯನ್ನು ಬಳಸುತ್ತಾರೆ. ಆದರೆ ಈ ವ್ಯೂಹರಚನೆ ಜಟಿಲವಾಗಿರುತ್ತದೆ. (ಚಿತ್ರ-೬) ಕಾಗದದ ಮೇಲೆ ವ್ಯೂಹವನ್ನು ಬರೆದು ಹುಡುಗನಿಗೆ ಅದನ್ನು ಕಲಿಯುವಂತೆ ಹೇಳಿದರೆ, ಪೆನ್ಸಿಲ್‌ನಿಂದ ದಾರಿಯನ್ನು ತಿದ್ದುವಮೊದಲು ಇತರ ದಾರಿಗಳ ಮೇಲೆ ಕಣ್ಣಾಡಿಸಿ ತನಗೆ ಸರಿಯೆಂದು ತೋರಿದ ದಾರಿಯನ್ನು ನಿರ್ಧರಿಸಿಕೊಳ್ಳುತ್ತಾನೆ. ಇಲ್ಲಿಯೂ ಪ್ರಯತ್ನ ಮತ್ತು ಸ್ಖಾಲಿತ್ಯ ನಡೆಯುತ್ತದೆ; ಆದರೆ ಆಲೋಚನೆಯ ಪಾತ್ರ ಹೆಚ್ಚು. ಓಡಾಡಿ, ಅಲೆದಾಡಿ ಕಲಿಯುವುದು ಪ್ರಾಣಿಗಳ ಪದ್ಧತಿಯಾದರೆ ಆಲೋಚನೆಮಾಡಿ ಕಲಿಯುವುದು ಮನುಷ್ಯರ ಪದ್ಧತಿ. ಕೈಯಿಡುವ ಅಥವ ಕಾಲಿಡುವ ಮುನ್ನ ಮನಸ್ಸು ಮುಂದೆ ಹೋಗುತ್ತದೆ, ಮನಸ್ಸು ಮಾರ್ಗದರ್ಶನ ಮಾಡುತ್ತದೆ. ಮನುಷ್ಯರಿಗಾಗಿ ಸಿದ್ಧಪಡಿಸಿದ ವ್ಯೂಹ ಪದ್ಧತಿಯಲ್ಲಿ ಕಾಗದ-ಪೆನ್ಸಿಲ್ ವ್ಯೂಹಗಳೂ, ಮೇಲುಬ್ಬಿರುವ ತಂತೀವ್ಯೂಹ

ಗಳೂ ಪ್ರಸಿದ್ಧವಾಗಿವೆ; ಕಣ್ಣು ಕಟ್ಟಿಕೊಂಡು ಕಡ್ಡಿಯಿಂದ ನಡೆಸುವ ವ್ಯೂಹಗಳೂ ಉಂಟು.

ಪ್ರಾಣಿಗಳ ಕಲಿಕೆಯನ್ನು ಅಧ್ಯಯನ ಮಾಡಲು ಸಮಸ್ಯಾಪೆಟ್ಟಿಗೆಗಳನ್ನೂ ಬಳಸುತ್ತಾರೆ. ಪೆಟ್ಟಿಗೆಯಲ್ಲಿ ಬೆಕ್ಕನ್ನೋ ನಾಯಿಯನ್ನೋ ಕಪಿಯನ್ನೋ ಕೂಡಿ ಅವು ಪೆಟ್ಟಿಗೆಯಿಂದ ಹೊರಬಂದೊಡನೆ ಆಹಾರವನ್ನೋ ಮತ್ತೆ ಯಾವ ಪುರಸ್ಕಾರವನ್ನೋ ನೀಡಿದರೆ ಆ ಪ್ರಾಣಿಗಳು ಕಲಿಯುವುವು. ಪೆಟ್ಟಿಗೆಗೆ ಸುಲಭವಾಗಿ, ಆದರೆ ಸ್ವಲ್ಪ ಚಾತುರ್ಯದಿಂದ, ತೆಗೆಯಬಹುದಾದ ಅಗುಳಿ-ಚಿಲಕದ ವ್ಯವಧಾನವಿರುತ್ತದೆ; ಕೆಲವು ಪೆಟ್ಟಿಗೆಗಳಲ್ಲಿ ನಾಲ್ಕು ಹಗ್ಗಗಳು ಜೋಲಾಡುತ್ತಿದ್ದು ಅವುಗಳಲ್ಲಿ ಒಂದನ್ನು ಎಳೆದರೆ ಬಾಗಿಲು ತಾನಾಗಿ ತೆರೆಯುವ ವ್ಯವಸ್ಥೆಯಿರುತ್ತದೆ; ಪ್ರಾಣಿ ಈ ಒಂದು ಹಗ್ಗವನ್ನು ಉಳಿದ ಮೂರರಿಂದ ಬೇರ್ಪಡಿಸಿ, ಪೆಟ್ಟಿಗೆಯಲ್ಲಿ ಬಿಟ್ಟೊಡನೆ ಅದನ್ನು ಎಳೆದರೆ ಆಗ ಕಲಿಕೆ ಸಿದ್ಧವಾಯಿತೆಂದರ್ಥ. ಇಂಥ ಸಂದರ್ಭದಲ್ಲಿ ಅಡ್ಡಾದಿಡ್ಡಿ ಪ್ರಯತ್ನ ನಡೆಯುವುದು ಬಹಳ; ಪ್ರಯತ್ನ-ಸ್ಖಾಲಿತ್ಯ ಪದ್ಧತಿಯೇ ಇಲ್ಲಿ ವಿಶೇಷವಾಗಿ ಬಳಕೆಗೆ ಬರುವ ಪದ್ಧತಿ. ಆದರೆ ಕೆಲವೊಮ್ಮೆ ಮೇಲ್ತರದ ಪ್ರಾಣಿಗಳು (ಕಪಿಗಳು ಮೊದಲಾದವು), ಅವಬೋಧ ( insight ) ಕ್ರಮದಿಂದ ಸಂದರ್ಭದ ಸ್ವಾರಸ್ಯವನ್ನರಿತು ಅರ್ಥಗ್ರಹಣವನ್ನು ತಟ್ಟನೆ ಮಾಡಿಕೊಳ್ಳುತ್ತವೆ. ಕೊಯ್ಲರ್ ಎಂಬ ಜರ್ಮನ್ ವಿಜ್ಞಾನಿ ನಡೆಸಿದ ಪ್ರಯೋಗಗಳಲ್ಲಿ ಚಿಂಪಾಂಜಿ ಜಾತಿಯ ಕಪಿಗಳು ಸಮಸ್ಯೆಗಳನ್ನು ಈ ರೀತಿಯೇ ಪೂರಣಮಾಡಿದುವು. ಅವಬೋಧ ಅನುಕ್ರಮವಾಗಿ ಬರತಕ್ಕದ್ದಲ್ಲ; ತಟ್ಟನೆ ತೋರುವಂಥದು. ಮನುಷ್ಯರಲ್ಲಿ ಈ ಪದ್ಧತಿಯೇ ತುಂಬ ಬಳಕೆಯಲ್ಲಿದೆ. ಮನುಷ್ಯರ ಕಲಿಕೆಯನ್ನೂ ಸಮಸ್ಯಾಪೆಟ್ಟಿಗೆಗಳ ಮೂಲಕ ಅಧ್ಯಯನಮಾಡಿದ್ದಾರೆ. ಆದರೆ ಇಲ್ಲಿನ ಸಮಸ್ಯೆಗಳು ಕ್ಲಿಷ್ಟವಾದುವು. ಕ್ರಿಯಾತ್ಮಕವಾದ ಪ್ರತಿಕ್ರಿಯೆಗಳೊಂದಿಗೆ ನಿರ್ಧಾರಣ, ಆಲೋಚನೆ ಮೊದಲಾದ ಮಾನಸಪ್ರವೃತ್ತಿಗಳೂ ಸೇರಿಬರುತ್ತವೆ.

ವ್ಯೂಹ ಕಲಿಕೆಯಿಂದ ಸ್ಪಷ್ಟವಾಗುವ ಒಂದು ವಿವರವೆಂದರೆ ಕಲಿಕೆವೃತ್ತ (learning curve). ಕಲಿಯುವ ಕ್ರಮವನ್ನು, ಎಂದರೆ ಅಭ್ಯಾಸ ವಶವಾಗುವ ಬಗೆಯನ್ನು, ಈ ವೃತ್ತ ನಿರ್ದೇಶಿಸುತ್ತದೆ. ಅಭ್ಯಾಸಮಾಡುವಾಗ ಒದಗುವ ತಪ್ಪುಗಳನ್ನೂ ಕಳೆದ ವೇಳೆಯನ್ನೂ ಗುರುತಿಸಿದಾಗ ಇವುಗಳಿಂದ ಫಲಿತವಾಗುವ ವೃತ್ತ ಬರುಬರುತ್ತ, ಕುಗ್ಗುತ್ತದೆ. ಮೊದಲನೆಯ ಅಭ್ಯಾಸದಲ್ಲಿ ಹತ್ತು ತಪ್ಪುಗಳಾದರೆ, ಅರ್ಧಗಂಟೆ ಹಿಡಿಸಿದರೆ, ನಾಲ್ಕನೆಯ ಅಭ್ಯಾಸದಲ್ಲಿ ಐದೇ ತಪ್ಪುಗಳಾಗಬಹುದು, ಕಾಲುಗಂಟೆ ಹಿಡಿಸಬಹುದು. ಎಂಟನೆಯ ಅಭ್ಯಾಸದಲ್ಲಿ ಒಂದೇ ತಪ್ಪು, ಐದೇ ನಿಮಿಷ ಆದೀತು. ಹತ್ತನೆಯ ಅಭ್ಯಾಸದಲ್ಲಿ ಯಾವ ತಪ್ಪೂ ಇಲ್ಲದೆ ಎರಡೇ ನಿಮಿಷದಲ್ಲಿ ಇಲಿ ಓಡಿ ಆಹಾರವನ್ನು ಮುಟ್ಟಲು ಕಲಿತೀತು. ಎಂದರೆ, ತಪ್ಪನ್ನೂ ಕಾಲವನ್ನೂ ವೃತ್ತದಲ್ಲಿ ನಿರ್ದೇಶಿಸಿದರೆ ಇದು ಬರುಬರುತ್ತ ಇಳಿಮುಖವಾಗುತ್ತದೆ (ಚಿತ್ರ - ೭ ).



ಚಿತ್ರ-೬ (೧)

ಮನುಷ್ಯರಲ್ಲಿ ಕಲಿಕೆಯನ್ನು ಅಧ್ಯಯನಮಾಡುವಾಗ ಈ ವ್ಯೂಹವನ್ನು ಬಳಸುತ್ತಾರೆ. → ಎನ್ನುವಲ್ಲಿಂದ ಆರಂಭಿಸಿ ● ಎಂದು ಕಾಣಿಸಿರುವಕಡೆ ನೇರವಾದ ದಾರಿಯಲ್ಲಿ ಲೋಹದ ಕಡ್ಡಿ (stylus) ಯನ್ನು ನಡೆಸಿಕೊಂಡು ಹೋಗಬೇಕಾದುದು ಇಲ್ಲಿನ ಸಮಸ್ಯೆ. ತಪ್ಪುದಾರಿ (ಬಳಸುದಾರಿ) ಹಿಡಿದರೆ ಶಬ್ದವಾಗುವ ಅಥವಾ ಸ್ವಲ್ಪ ಬಿಸಿ ತಾಕುವ ವ್ಯವಧಾನವಿರುತ್ತದೆ. ಕಣ್ಣಿಗೆ ಬಟ್ಟೆಕಟ್ಟಿಕೊಂಡು ಈ ವ್ಯೂಹವನ್ನು ನಿರ್ವಹಿಸಬೇಕು.




ಚಿತ್ರ ೭

## ಕಲಿಕೆಯ ವೃತ್ತ

ಆರಂಭದಲ್ಲಿ ತುಂಬ ಸ್ಖಾಲಿತ್ಯಗಳಿದ್ದು ಜರುಬರುತ್ತ ಪ್ರಯತ್ನ ಮುಂದುವರೆಸಿದಂತೆ ಸ್ಖಾಲಿತ್ಯಗಳು ಕಮ್ಮಿಯಾಗುತ್ತ ಬರುತ್ತವೆ. ಮೊದಲಲ್ಲಿ ಸ್ಖಾಲಿತ್ಯಗಳ ಇಳಿವರಿ ವೇಗವಾಗಿದ್ದು, ಮುಂದೆ ಹೋದಂತೆ ಇದರ ವೇಗ ಕುಗ್ಗುತ್ತದೆ. ಎಂಟು ಪ್ರಯತ್ನಗಳವರೆಗೆ ಇದ್ದ ಇಳಿಜಾರು ೧೬ ನೆಯ ಪ್ರಯತ್ನದಿಂದ ಮುಂದೆ ಇಲ್ಲ; ಕಲಿಕೆಯ ವೇಗ ಮಂದವಾಯಿತೆಂದರ್ಥ. ೨೦ ನೆಯ ಪ್ರಯತ್ನದ ವೇಳೆಗೆ ಒಂದೂ ಸ್ಖಾಲಿತ್ಯವಿಲ್ಲದೆ ಕೆಲಸ ನಡೆವಾಗ ಕಲಿಕೆ ಸಿದ್ಧಿಸಿದೆ. ಸ್ಖಾಲಿತ್ಯದಂತೆ ಕಾಲವೂ ಅನುಕ್ರಮವಾಗಿ ಕುಗ್ಗುತ್ತದೆ; ಆದರೆ ಇವಕ್ಕೆ ಮಿತಿಯುಂಟು.

ಕಲಿಕೆಯು ವೃತ್ತ ಇಳಿಮುಖವಾದಂತೆ ಅಭ್ಯಾಸ ವಶವಾಯಿತು, ಕಲಿಕೆ ಸಿದ್ಧಿಸಿತು ಎಂದರ್ಥ. ಆದರೆ ಇದು ಸಾಕಷ್ಟು ಅಭ್ಯಾಸಮಾಡಿದರೆ ಸಂಪೂರ್ಣವಾಗಿ ಇಳಿದೇ ಹೋಗುತ್ತದೆ. ಎಂದು ಪ್ರಾಣಿಗಳ ವಿಚಾರದಲ್ಲಿ ಹೇಳುವ ಹಾಗಿಲ್ಲ. ತಂತಮ್ಮ ಬುದ್ಧಿಶಕ್ತಿಯನ್ನವಲಂಬಿಸಿ ಪ್ರಾಣಿಗಳು ಅನುಕ್ರಮವಾಗಿ ತಪ್ಪುಗಳನ್ನು ಕಮ್ಮಿಮಾಡಿ ಕಾಲವನ್ನೂ ತೀರ ಅಲ್ಪ ಪ್ರಮಾಣದಲ್ಲಿ ತೆಗೆದುಕೊಳ್ಳುತ್ತವೆ; ಆದರೆ ವ್ಯೂಹವನ್ನು ಪ್ರವೇಶಮಾಡಿದೊಡನೆ ಆಹಾರದ ಮೂಲೆಯನ್ನು ಮುಟ್ಟುವುದು ಸಾಧ್ಯವಿಲ್ಲವಷ್ಟೆ. ಕಾಲದ ಕಲಿಕೆವೃತ್ತ ಸಂಪೂರ್ಣವಾಗಿ ಆಧಾರರೇಖೆಯಿಂದ ಕೆಳಗಿಳಿಯುವುದು ಸಾಧ್ಯವಿಲ್ಲ; ಏಕೆಂದರೆ ವ್ಯೂಹವನ್ನು ಸಂಚರಿಸುವಾಗ ಕಾಲ ಎಂದೂ ಶೂನ್ಯವಾಗುವುದಿಲ್ಲ. ಕೆಲವು ಸಮಸ್ಯೆಗಳೇ ಕ್ಲಿಷ್ಟವಾಗಿದ್ದಾಗ ತಪ್ಪುಗಳೇ ಇಲ್ಲದೇ ಇರುವುದೂ ಕಷ್ಟವಾಗಬಹುದು, ಅಸಾಧ್ಯವಾಗಬಹುದು. ಇಂಥಹ ಪರಿಸ್ಥಿತಿಯಲ್ಲಿ ದೈಹಿಕಮಿತಿ (physiological limit) ಎಂಬುವುದಿರುತ್ತದೆ. ಇದನ್ನು ಮೀರಿ ಕಲಿಯುವುದು ಸಾಧ್ಯವಿಲ್ಲ. ಪಾಠವನ್ನು ಕಲಿಯುವಾಗಲೂ ಒಂದು ನಿರ್ದಿಷ್ಟ ಅವಧಿಯಲ್ಲಿ ಎಷ್ಟು ಪ್ರಮಾಣದ ಪಾಠವನ್ನು ಕರಗತ ಮಾಡಿಕೊಳ್ಳಬಹುದು ಎನ್ನುವುದು ಈ ಮಿತಿಯನ್ನವಲಂಬಿಸುತ್ತದೆ.

ಕೆಲವೊಮ್ಮೆ ಕಲಿಕೆಯ ವೃತ್ತವನ್ನು ರಚಿಸುವಾಗ ಒಂದು ಘಟ್ಟವನ್ನು ಮುಟ್ಟಿ ಅಲ್ಲಿಯೇ ಮತ್ತೆ ಕೆಲವು ಅಭ್ಯಾಸಗಳವರೆಗೆ ವೃತ್ತ ನಿಂತುಬಿಡುತ್ತದೆ; ಪ್ರಗತಿ ಕಾಣಿಸುವುದಿಲ್ಲ, ಎಂದರೆ ವೃತ್ತ ಇಳಿಮುಖವಾಗುವುದಿಲ್ಲ. ಕೆಲವು ಅಭ್ಯಾಸಗಳ ನಂತರ ಮತ್ತೆ ಪ್ರಗತಿ ಕಾಣಿಸಿ, ವೃತ್ತ ಇಳಿಮುಖವಾಗಲಾರಂಭಿಸುತ್ತದೆ. ಹೀಗೆ ವೃತ್ತ ಸಮನಾಗಿ ಏರಿಳಿತವಿಲ್ಲದೆ ನಿಲ್ಲುವುದಕ್ಕೆ ಪ್ರಸ್ಥನೆಲೆ (plateau) ಎಂದು ಹೆಸರು. ಇದಕ್ಕೂ ದೈಹಿಕಮಿತಿಗೂ ಭೇದವುಂಟು. ಯಾವುದೋ ಕಾರಣದಿಂದ ಕಲಿಕೆಯು ಪ್ರಸ್ಥನೆಲೆಯಲ್ಲಿ ನಿಂತಾಗ ಮತ್ತೆ ಪ್ರಲೋಭನೆಗಳಿಂದಲೋ, ವಿಶ್ರಾಂತಿಯಿಂದಲೋ ವೃತ್ತ ಇಳಿಮುಖವಾಗಲಾರಂಭಿಸಬಹುದು. ಆದರೆ ದೈಹಿಕಮಿತಿಯಲ್ಲಿ ಹೀಗಾಗುವುದು ಸಾಧ್ಯವಿಲ್ಲ. ಕಲಿಕೆವೃತ್ತಗಳಿಂದ ಸ್ಪಷ್ಟವಾಗುವ ಮುಖ್ಯವಿವರವೆಂದರೆ ವೈಯಕ್ತಿಕ ಭೇದ. ಪ್ರತಿವ್ಯಕ್ತಿಯೂ ಕಲಿಯುವ ಸಂವಿಧಾನವನ್ನು ತನಗೆ ಅನುಕೂಲವಾದಂತೆ ಸಿದ್ಧಪಡಿಸಿಕೊಳ್ಳುತ್ತಾನೆ.

೭

## ಭಾಷೆಯ ಕಲಿಕೆ

ಮನುಷ್ಯನ ನೆಲೆಯಲ್ಲಿ ಕಲಿಯುವುದು ಸರಳವಾಗಿರುವುದಿಲ್ಲ. ಯಾಂತ್ರಿಕ ಸಾಮಗ್ರಿಗಳೊಂದಿಗೆ ಕೆಲಸಮಾಡುವಾಗ ಕ್ರಿಯಾತ್ಮಕಕೌಶಲ ಸಂಪೂರ್ಣವಾಗಿರುತ್ತದೆ; ಕಣ್ಣು-ಕೈಗಳ, ಎರಡು ಕೈಗಳ, ಕೈ-ಕಾಲುಗಳ ಸಂಯೋಜನೆ ಅಗತ್ಯವಾಗುತ್ತದೆ. ನಮ್ಮ

ಪ್ರತಿಕ್ರಿಯೆಯಲ್ಲಿ ಅಂಗಾಂಗಳ ಸೂಕ್ಷ್ಮವ್ಯಾಪಾರ ಒದಗಿ ಬರುತ್ತದೆ. ವಿಮಾನವನ್ನು ನಡೆಸುವ ಚಾಲಕ ಎಷ್ಟು ಜಾಗರೂಕನಾಗಿರಬೇಕು, ಕುಶಲನಾಗಿರಬೇಕು! ಹೀಗೆಯೇ ಕೆಲಸ ಆರಂಭದಲ್ಲಿ ಸರಳವಾಗಿ ವಿಭಿನ್ನವಾಗಿದ್ದರೂ ಬರುಬರುತ್ತ ಸಂಕೀರ್ಣವಾಗಿ, ಜಟಿಲವಾಗಿರುವ ಸಂಭವವುಂಟು. ಇವನ್ನು ಕಲಿಯುವ ವಿಧಾನವೂ ಅಷ್ಟೇ ಸಂಕೀರ್ಣವಾಗಿರುವುದು ಸಹಜ. ಮಿಂಚಿನಂತೆ ನಿರ್ಧಾರಮಾಡಿ ವೇಗದಿಂದ ಕೆಲಸಮಾಡುವ ಸಂದರ್ಭಗಳು ಬರುವಾಗ, ಕಲಿಕೆ ಮತ್ತು ಅವಧಾನ ತುಂಬ ಮುಖ್ಯವಾಗುತ್ತವೆ. ಇಲ್ಲಿ ಪ್ರತಿಕ್ರಿಯೆಯಿಂದ ಎಂಥ ಫಲ ಒದಗೀತು ಎನ್ನುವ ನಿರೀಕ್ಷೆಯನ್ನು ನೆನಪಿನಲ್ಲಿ ನಿಲ್ಲಿಸಿಕೊಂಡು ಕಲಿಕೆ ಸಾಗುತ್ತದೆ. ನೆನಪು ಅಭ್ಯಾಸಕ್ಕೆ ನೆರವಾಗುತ್ತದೆ. ಮತ್ತೆ ಇಂಥದೇ ಸಂದರ್ಭಒದಗೀತು ಎನ್ನುವ ನಿರೀಕ್ಷೆ ತನ್ನ ಪ್ರಭಾವವನ್ನು ಬೀರುತ್ತದೆ.

ಮಗು ಭಾಷೆಯನ್ನು ಕಲಿಯುವಾಗ ಶಬ್ದಗಳನ್ನು ಸೇರಿಸಿ ವಾಕ್ಯಗಳನ್ನು ಮಾಡಿ, ಅರ್ಥವನ್ನು ಅಭಿವ್ಯಕ್ತಗೊಳಿಸುವುದು ಸಂಕೀರ್ಣವಾದ ಕಲಿಕೆಯೇ. ಕೇಳಿದ ಮಾತುಗಳನ್ನು ಕೇಳಿದಂತೆಯೇ ಮಗು ಆಡುವಾಗ ನೆನಪು ನೆರವಾಗತ್ತದೆ. ಪುನರುಚ್ಚಾರಣೆ ಸಂಪೂರ್ಣವಾಗಿಯೇ ದೇಹಸಂಬಂಧಿಯಾದ ವ್ಯಾಪಾರವಲ್ಲ; ಮಾನಸಿಕ ಪ್ರವೃತ್ತಿಗಳೂ ಇಲ್ಲಿ ಸೇರುತ್ತವೆ. ಮಾತಾಡಲು ಅವಶ್ಯವಾದ ಅಂಗಗಳೂ ಮಸ್ತಿಷ್ಕವೂ ಬೆಳೆದು ಪ್ರೌಢವಾದಾಗಲೇ ಮಗು ಸಮರ್ಪಕವಾಗಿ ಮಾತನಾಡಬಲ್ಲುದು. ಒಂದು ಮಾತನ್ನು ಹೇಳುವಾಗ ಎಷ್ಟು ಉಸಿರೆಳೆದುಕೊಳ್ಳಬೇಕು, ಬಾಯಿಯನ್ನು ಎಷ್ಟು ತೆರೆಯಬೇಕು, ತುಟಿಗಳನ್ನು ಹೇಗೆ ಸೇರಿಸಬೇಕು, ನಾಲಿಗೆ ಮತ್ತು ಹಲ್ಲುಗಳ ಸಂಪರ್ಕ ಎಷ್ಟಿರಬೇಕು ಇವನ್ನೆಲ್ಲ ಮಗು ಕಲಿಯಬೇಕಾಗುತ್ತದೆ. ಇದು ಒಮ್ಮೆಲೆ ದಕವಾಗುವ ಸಿದ್ಧಿಯಲ್ಲ; ಅಭ್ಯಾಸದಿಂದಲೇ ಅನುಕ್ರಮವಾಗಿ ಬರತಕ್ಕದ್ದು. ಮಗು ತನ್ನ ತೊದಲುನುಡಿಯಲ್ಲಿ ಮಾತುಗಳನ್ನು ಸ್ಥಳ ತಪ್ಪಿಸಿ, ಕಲೆಸಿ ಹೇಳಿದಾಗ ಈ ಶರೀರ-ಮನಸ್ಸುಗಳ ಸಂಯೋಜನೆ ಸಮರ್ಪಕವಾಗಿಲ್ಲ ಎಂದರ್ಥ. ಮಾತನ್ನು ಸರಿಯಾಗಿ ಉಚ್ಚರಿಸಲು ಕಲಿಯುವಾಗ ಮಗು ಪ್ರಯತ್ನ-ಸ್ಖಾಲಿತ್ಯ ಪದ್ಧತಿಯನ್ನೇ ಬಳಸುತ್ತದೆ. ಇದರ ಜೊತೆಗೆ ಬುದ್ಧಿಶಕ್ತಿ ಬೆಳೆದು ಬಂದಾಗ ಅರ್ಥವನ್ನು ಗಮನದಲ್ಲಿಟ್ಟುಕೊಂಡು ಮಾತನ್ನು ಬಳಸುವ ಸಿದ್ಧಿಯನ್ನು ಪಡೆಯುತ್ತದೆ. ಒಂದೇ ಮಾತಿನಿಂದ ನಾನಾರ್ಥಗಳು ಆಗುವಂತಿದ್ದರೆ, ಅಥವಾ ಏಕಾರ್ಥವನ್ನು ಕೊಡುವ ಹಲವು ಮಾತುಗಳಿದ್ದರೆ ಯಾವ ಮಾತನ್ನು ಯಾವ ಸಂದರ್ಭದಲ್ಲಿ ಬಳಸಬೇಕೆಂದು ಮಗು ತಿಳಿಯಲು ಅಭ್ಯಾಸ ಒಂದೇ ಸಾಧನವಲ್ಲ, ಬುದ್ಧಿಶಕ್ತಿಯೂ ಕಾರಣವಾಗುತ್ತದೆ.

ಭಾಷಾತ್ಮಕವಾದ ಪ್ರತಿಕ್ರಿಯೆಯನ್ನು ಅಧ್ಯಯನ ಮಾಡುವಾಗ ಸಾರ್ಥಪದಗಳು, ನಿರರ್ಥಕಪದಗಳು (ಶಬ್ದಪುಂಜ) ಇವುಗಳನ್ನುಪಯೋಗಿಸಿ ಕಲಿಕೆಯಲ್ಲಿ ಅರ್ಥದ ಪಾತ್ರವೇನೆಂದು ನಿರ್ಧರಿಸುತ್ತಾರೆ. ಪ್ರಯೋಗಶಾಲೆಯಲ್ಲಿ ಕಲಿಕೆಯನ್ನು ಅನುಸಂಧಾನ ಮಾಡುವಾಗ ನಿರರ್ಥಕಪದಗಳನ್ನು ಬಳಸುವ ಪದ್ಧತಿ ಎಬಿಂಗ್‌ಹಾವ್ಸ್ ಎಂಬ ವಿಜ್ಞಾನಿಯಿಂದ ಮೊದಲಾಯಿತು. ಒಮ್ಮೆ ಇವನ್ನು ನೋಡಿ, ಒಂದೇ ಕಣ್ಣೋಟದಲ್ಲಿ

ಒಂದೊಂದು ಶಬ್ದಪುಂಜವನ್ನು ಗ್ರಹಿಸಿ ಮತ್ತೆ ಅವನ್ನು ಸ್ಮರಣೆಗೆ ತಂದುಕೊಳ್ಳುವುದು ಇಲ್ಲಿನ ಪದ್ಧತಿ. ಸಾರ್ಥವಾದ ಪದವನ್ನೂ ನಿರರ್ಥಕವಾದ ಶಬ್ದಪುಂಜವನ್ನೂ ಎರಡೆರಡಾಗಿ ಒಟ್ಟಿಗೆ ಗ್ರಹಿಸುವಾಗ ಒದಗುವ ಪ್ರವೃತ್ತಿಗಳೇ ಪರಭಾಷೆಯನ್ನು ನಾವು ಕಲಿಯುವಾಗಲೂ ಒದಗುತ್ತವೆ. ಈ ಜೋಡಿ ಸಂಯೋಜನ ಪದ್ಧತಿಯಿಂದ ಅನೇಕ ಸ್ವಾರಸ್ಯವಾದ ಅಂಶಗಳು ಹೊರಬಿದ್ದಿವೆ.

ಮಕ್ಕಳು ಕಲಿಯುವಾಗ ಪ್ರಾಣಿಗಳು ಅನುಸರಿಸುವ 'ಅನುಕರಣ' ಪದ್ಧತಿಯನ್ನೇ ಬಳಸುತ್ತಾರೆ. ಅನುಕರಣಮಾಡುವುದನ್ನೂ ಮೊದಲು ಕಲಿಯಬೇಕು. ಅನಂತರ ಹಾಗೆ ಕಲಿತ ಅಭ್ಯಾಸಗಳನ್ನು ಪ್ರಯೋಗಿಸಬೇಕು. ತಾನು ಕೇಳಿದ ಶಬ್ದಗಳನ್ನು ಉಚ್ಚರಿಸಲು ಮಗುವಿಗೆ ಅನುಕರಣವಲ್ಲದೆ ಬೇರೆದಾರಿಯಿಲ್ಲ. ಶಬ್ದದ ಅರ್ಥ ತಿಳಿಯದಿದ್ದರೂ ಆ ಶಬ್ದಗಳನ್ನು ವ್ಯವಹಾರಮಾಡುವ ಮಕ್ಕಳನ್ನು ನೀವು ನೋಡಿಲ್ಲವೆ? 'ದೊಡ್ಡವರಂತೆ ಮಾತಾಡುತ್ತದೆ ಈ ಮಗು' ಎನ್ನುತ್ತಾರೆ. ಇಲ್ಲಿ ಅನುಕರಣವೇ ಮುಖ್ಯ ಪ್ರವೃತ್ತಿ. ಮನುಷ್ಯನು ತನ್ನ ವರ್ಗದ ಸಂಸ್ಕೃತಿಯನ್ನು (ಎಂದರೆ ಆಚಾರವ್ಯವಹಾರಗಳನ್ನು, ನೀತಿನಿಯಮಗಳನ್ನು, ಭಾಷೆಯ ಬೆಡಗು ಬಿನ್ನಾಣಗಳನ್ನು, ಕಥೆ-ಹಾಡುಗಳನ್ನು) ಕಲಿಯುವಾಗ ಅನುಕರಣಶೀಲನಾಗಿಯೇ ಇರುತ್ತಾನೆ. ಪಕ್ಕದವನು ಮಾಡಿದಂತೆ ಮಾಡುವ ಈ ಪದ್ಧತಿಯನ್ನು ಪ್ರಯೋಗಗಳಿಂದ ಅಧ್ಯಯನಮಾಡಿದ್ದಾರೆ. ವ್ಯಾಯಾಮ, ಉದ್ಯಮ ಮೊದಲಾದ ಕ್ಷೇತ್ರಗಳಲ್ಲಿ ಜನರಿಗೆ ಶಿಕ್ಷಣಕೊಡುವ ಸಂದರ್ಭದಲ್ಲಿ ಚಲಚಿತ್ರದ ಮೂಲಕ ಅವರು ಇರಬೇಕಾದ ರೀತಿ, ಕೆಲಸಮಾಡಬೇಕಾದ ಬಗೆ, ಇವುಗಳನ್ನು ಪ್ರದರ್ಶಿಸುತ್ತಾರೆ. ಹೊಸದಾಗಿ ಕೆಲಸಕ್ಕೆ ಸೇರಿದ ವಿದ್ಯಾರ್ಥಿಗೆ ಅಥವಾ ಕಾರ್ಮಿಕನಿಗೆ ಸರಿಯಾದ ರೀತಿ ಯಾವುದು, ಕೌಶಲವೆಂದರೆ ಏನು, ಎನ್ನುವುದು ತಿಳಿದು, ತಾನು ಕೆಲಸಕ್ಕೆ ಕೈಹಾಕಿದಾಗ ಪ್ರಯತ್ನ-ಸ್ಖಾಲಿತ್ಯಗಳಲ್ಲಿ ಕಾಲ ಕಳೆಯದೆ ಕೆಲಸವನ್ನು ತಾನು ನೋಡಿದಂತೆ ಮಾಡಲೆತ್ನಿಸುತ್ತಾನೆ. ಇದು ಅನುಕರಣ ಪದ್ಧತಿಯನ್ನು ಅಳವಡಿಸಿಕೊಂಡಿರುವ ಒಂದು ನಿದರ್ಶನ.

೪

## ಅಭ್ಯಾಸ

ಕಲಿಕೆಯಿಂದ ಉಂಟಾಗುವುದು ಅಭ್ಯಾಸ. 'ಮಾಡಿಮಾಡಿ ಅಭ್ಯಾಸವಾಗಿಬಿಟ್ಟಿದೆ' ಎನ್ನುತ್ತಾರೆ. ಸೈಕಲ್‌ಸವಾರಿ ಮಾಡುವುದು ಮೊದಮೊದಲು ಕಷ್ಟವೇ; ಆಯ ತಪ್ಪದಂತೆ, ಎದುರಿನ ಅಡ್ಡಿಯನ್ನು ತಪ್ಪಿಸಿಕೊಂಡು, ಬಳಸಿ, ಬೀಳದಂತೆ ಎರಡೇ ಚಕ್ರಗಳ ಮೇಲೆ ಮುಂದೆ ಸಾಗಲು ನಮ್ಮ ಗಮನವೆಲ್ಲ ಕೆಲಸದ ಮೇಲೇ ಇರಬೇಕಲ್ಲವೆ? ಗಮನ ಅತ್ತಿತ್ತ ಹರಿದರೆ ಅನಾಹುತವೇ. ಆದರೆ ಇದನ್ನು ಒಮ್ಮೆ ಕಲಿತುಬಿಟ್ಟನಂತರ ದಾರಿಯಲ್ಲಿ ಹೋಗುತ್ತ ಸೈಕಲ್‌ಸವಾರಿಯ ಮೇಲೆ ಗಮನವನ್ನು ಕೇಂದ್ರೀಕರಿಸದೆ ಅಡ್ಡಿಆತಂಕಗಳನ್ನು ನಿಭಾಯಿಸಿಕೊಂಡು ಹೋಗಬಹುದಲ್ಲವೆ? ಮಗುವಿಗೆ

ಮಾತನಾಡಲು ಕಲಿಯುವುದು ಎಷ್ಟು ಕಷ್ಟ? ಆದರೆ ಮಾತನ್ನೊಮ್ಮೆ ಕಲಿತಿತೆಂದರೆ ಊರಮಾತನ್ನೆಲ್ಲ ಸರಾಗವಾಗಿ ಆಡಬಲ್ಲದು! ಇದು ಅಭ್ಯಾಸದ ಮಾತು. ನಮ್ಮ ನಿತ್ಯಜೀವನವನ್ನು ಪರಿಶೀಲಿಸಿ ನೋಡಿದರೆ ಇಂಥ ಅಭ್ಯಾಸಗಳೇ ನಮ್ಮ ಆಧಾರ; ನಮ್ಮ ಚಾತುರ್ಯವೆಲ್ಲ ಅಭ್ಯಾಸಗಳ ಮೇಲೇ ನಿಂತಿದೆ ಎನ್ನುವುದು ಸ್ಪಷ್ಟವಾಗುತ್ತದೆ. ನಮ್ಮ ನಿರ್ಧಾರಕ್ಕೆ ಕಾಯದೆ ಎಷ್ಟೋ ಕೆಲಸಗಳು ತಾವಾಗಿ ನಡೆದು ಹೋಗುತ್ತವೆ.

ಈ ಸಂದರ್ಭದಲ್ಲಿ ನಮ್ಮ ಮಾನಸಪ್ರವೃತ್ತಿಗಳನ್ನು ಅವಲಂಬಿಸದೆ ಕೇವಲ ದೈಹಿಕವ್ಯಾಪಾರಗಳ ನೆಲೆಯಲ್ಲಿ ನಡೆಯುವ ಅಧ್ಯಾರೋಪಿತ-ಪ್ರತಿಕ್ಷೇಪ (conditioned reflex) ವನ್ನು ಕುರಿತು ಎರಡು ಮಾತು ಹೇಳಬೇಕು. ನಾವು ಸೈಕಲ್ ಸವಾರಿ ಮಾಡುವಾಗ ನಮ್ಮ ಅರಿವಿಲ್ಲದೆ ಕಾಲುಗಳು ಕೆಲಸಮಾಡುತ್ತವೆ, ನಮ್ಮ ನಿರ್ಧಾರವನ್ನು ನಿರೀಕ್ಷಿಸದೆ ಕೈಗಳು ಕೆಲಸಮಾಡಿ ಅಪಘಾತವನ್ನು ತಪ್ಪಿಸುತ್ತವೆ. ಇದು ಅಧ್ಯಾರೋಪಿತ ಪ್ರತಿಕ್ಷೇಪವೇ. ಕಲಿಕೆಯಲ್ಲಿ ಒದಗಿದ ಪ್ರತಿಕ್ಷೇಪಗಳು ಸ್ಥಿರವಾಗಿ ನಿಂತುಬಿಡುತ್ತವೆ; ಕಶೇರುಕದ ನೆಲೆಯಲ್ಲಿಯೇ ಪ್ರಚೋದನೆ-ಪ್ರತಿಕ್ರಿಯೆಗಳು ನಡೆಯುತ್ತವೆ; ಮಸ್ತಿಷ್ಕವನ್ನು ಮುಟ್ಟುವುದೇ ಇಲ್ಲ. ಬೆಕ್ಟೆರಿವ್ ಮತ್ತು ಪಾವ್‌ಲೋವ್ ಎಂಬ ರಷ್ಯದೇಶದ ದೇಹವಿಜ್ಞಾನಿಗಳು ನಾಯಿಗಳ ಮೇಲೆ ಪ್ರಯೋಗಗಳನ್ನು ನಡೆಸಿ ಈ ಅಧ್ಯಾರೋಪಿತ-ಪ್ರತಿಕ್ಷೇಪ ಸಿದ್ಧಾಂತವನ್ನು ಮಂಡಿಸಿದರು. ನಾಯಿ ಮಾಂಸದ ತುಂಡನ್ನು ನೋಡಿದಾಗ ಅದರ ಬಾಯಿಯಲ್ಲಿ ನೀರೂರುತ್ತದೆ; ಇದು ಸಹಜ ಪ್ರತಿಕ್ರಿಯೆ, ನಾಯಿಯ ತಿಳಿವಿಲ್ಲದೆ ಇದು ನಡೆಯುವುದರಿಂದ ಇದನ್ನು ಪ್ರತಿಕ್ಷೇಪವೆನ್ನುತ್ತಾರೆ. ನಾಯಿಗೆ ಪ್ರಯೋಗಶಾಲೆಯಲ್ಲಿ ಮಾಂಸದ ತುಂಡನ್ನು ತೋರಿಸಿದಾಗಲೆಲ್ಲ ಘಂಟೆಯನ್ನೂ ಬಾರಿಸಿದರೆ ಆಹಾರಕ್ಕೂ ಧ್ವನಿಗೂ ನಾಯಿಯ ಮನಸ್ಸಿನಲ್ಲಿ ಸಂಬಂಧವೇರ್ಪಡುತ್ತದೆ; ಮುಂದೆ ಮಾಂಸದ ತುಂಡನ್ನು ತೋರಿಸದೆ ಘಂಟೆಯನ್ನು ಬಾರಿಸಿದರೂ ಅದರ ಬಾಯಿಯಿಂದ ಜೊಲ್ಲು ಸುರಿಯುತ್ತದೆ. ಘಂಟೆಯ ಸದ್ದು ಕೇಳಿದಾಗ ಬಾಯಿ ನೀರೂರುವುದು ಸಹಜಪ್ರತಿಕ್ರಿಯೆಯೇನಲ್ಲ; ಅದನ್ನು ನಾಯಿ ಈಗ ಕಲಿತಿದೆ. ಸಹಜವಾದ ಪ್ರತಿಕ್ಷೇಪದ ಮೇಲೆ ಇದು ಅಧ್ಯಾರೋಪಿತ. ಈ ಕಾರಣದಿಂದ ಇದನ್ನು ಅಧ್ಯಾರೋಪಿತ ಪ್ರತಿಕ್ಷೇಪ ಎನ್ನುತ್ತಾರೆ. ಪ್ರಾಣಿಗಳ ಮತ್ತು ಮಕ್ಕಳ ಕಲಿಕೆಯಲ್ಲಿ ಇದು ಪ್ರಮುಖವಾದ ಪದ್ಧತಿ. ಮಕ್ಕಳು ಭಾಷೆಯನ್ನು ಕಲಿಯುವುದು ವಿಶೇಷವಾಗಿ ಹೀಗೆಯೇ, ಕ್ರಿಯಾತ್ಮಕವಾದ ಕೌಶಲಗಳನ್ನೂ ಹೀಗೆಯೇ ಕಲಿಯುವುದು. ಈ ಕಲಿಕೆಯಲ್ಲಿ ಅಭ್ಯಾಸ ಬೇರೂರುತ್ತದೆ. ಅಭ್ಯಾಸವಾದಾಗ ಕೆಲಸಮಾಡುವಾಗಲೆಲ್ಲ ನಮ್ಮ ಚಿಂತನೆ, ನಿರ್ಧಾರ, ಸಂಕಲ್ಪಗಳ ಅಗತ್ಯವಿಲ್ಲ; ಅದಕ್ಕಾಗಿ ವ್ಯಯವಾಗುವ ವೇಳೆ, ಶ್ರಮ ಎರಡೂ ಉಳಿಯುತ್ತವೆ. ಇದೇ ಅಭ್ಯಾಸದ ಪ್ರಯೋಜನ.

ಒಂದು ಕೌಶಲವನ್ನು ಕೈವಶಮಾಡಿಕೊಂಡರೆ ಇತರ ಕೌಶಲಗಳ ಮೇಲೆ ನಮ್ಮ ಪ್ರಭುತ್ವವನ್ನು ಪಡೆದುಕೊಳ್ಳುವುದು ಸುಲಭ. ಒಮ್ಮೆ ಕಲಿಯಲಾರಂಭಿಸಿದರೆ, ಈ

ಕಲಿಕೆಯು ಮುಂದೆ ಕಲಿಯುವಾಗ ಪ್ರಯೋಜನಕಾರಿಯಾಗುತ್ತದೆ. ಶಾಲೆಯಲ್ಲಿ ಮಕ್ಕಳು ಪದ್ಯಗಳನ್ನೂ ಮಗ್ಗಿಯನ್ನೂ ಕಂಠಪಾಠಮಾಡಿ ಕಲಿತರೆ ಮುಂದೆ ಅದೇ ರೀತಿಯ ಸಾಮಗ್ರಿಗಳನ್ನು ಹೆಚ್ಚು ಸೌಕರ್ಯದಿಂದ ಕಲಿಯಬಹುದು. ಕಲಿಕೆ ಅಲ್ಲಿಗೇ ನಿಲ್ಲುವುದಿಲ್ಲ; ಅದೇ ಒಂದು ಪ್ರವೃತ್ತಿಯಾಗಿ ಅನುಕೂಲವಾದ ಕಡೆ ಪ್ರವಹಿಸುತ್ತದೆ. ಇದಕ್ಕೆ ಕಲಿಕೆಯ ವರ್ಗಾವಣೆ ( transfer of training ) ಎನ್ನುತ್ತಾರೆ. ಪ್ರಾಣಿ ಒಂದು ಬಗೆಯ ಕೆಲಸವನ್ನು ಮಾಡಲು ಕಲಿತರೆ, ಮುಂದೆ ಅದೇ ರೀತಿಯ ಮತ್ತೊಂದು ಕೆಲಸವನ್ನು ಕಲಿಯುವಾಗ ಮೊದಲಿನಷ್ಟು ಕಾಲವಾಗಲೀ ಕಷ್ಟವಾಗಲೀ ಆಗುವುದಿಲ್ಲ. ಮನುಷ್ಯರೂ ಒಂದು ವಾಹನವನ್ನು ನಡೆಸಲು ಕಲಿತರೆ ಉಳಿದ ವಾಹನಗಳನ್ನು ನಡೆಸಲು ಕಲಿಯುವುದು ಸುಲಭ. ಒಂದು ಭಾಷೆಯನ್ನು ಚೆನ್ನಾಗಿ ಕಲಿತರೆ ಅದಕ್ಕೆ ಸಂಬಂಧಪಟ್ಟ ಉಳಿದ ಯಾವ ಭಾಷೆಯನ್ನಾಗಲೀ ಕಲಿಯುವುದು ಕಷ್ಟವಿಲ್ಲ.

ವರ್ಗಾವಣೆ ಫಲಿಸಬೇಕಾದರೆ ಕಲಿಯುವ ಸಾಮಾಗ್ರಿಯಲ್ಲಿ ಸಾಮ್ಯವಿರಬೇಕು. ಬೇರೆ ಬೇರೆ ಬಗೆಯ ಕೆಲಸಗಳಾದರೆ, ಅಥವಾ ಅದನ್ನು ಕಲಿಯುವ ವಿಧಾನಗಳು ಬೇರೆಬೇರೆಯಾದರೆ ಮೊದಲಿನ ಕಲಿಕೆ ಕೆಲಸಮಾಡುವುದಿಲ್ಲ. ಕೆಲಸದ ಹಿನ್ನೆಲೆಯ ತತ್ತ್ವಗಳು ಒಂದೇ ಆಗಿದ್ದರೂ ವರ್ಗಾವಣೆ ಸುಲಭ. ಸಮಸ್ಯಾಪೂರಣ ಎಂಥದಾದರೂ ಕೆಲವರು ಸುಲಭವಾಗಿ ಮಾಡುತ್ತಾರೆ; ರೇಖೆಗಳದ್ದು ಇರಲಿ, ಪದ್ಯದಲ್ಲಿರಲಿ, ಸಂಖ್ಯಾ ಸ್ವರೂಪದ್ದಿರಲಿ, ಒಗಟಾಗಿರಲಿ ಯಾವುದಾದರೂ ಅವರಿಗೆ ಸುಲಭವೇ. ಕಲಿಕೆಯ ವರ್ಗಾವಣೆಯು ಸಾಧ್ಯವಾದುದರಿಂದಲೇ ಮನುಷ್ಯನ ಪ್ರಗತಿ ಇಷ್ಟು ತೀವ್ರ ವಾಗಿರುವುದು. ಈ ವರ್ಗಾವಣೆಯೂ ಮಸ್ತಿಷ್ಕವು ಪ್ರೌಢವಾಗಿರುವುದರಿಂದಲೇ ಸಾಧ್ಯವಾಗಿದೆ. ಉಳಿದ ಪ್ರಾಣಿಗಳಲ್ಲಿ ಅವುಗಳ ಮಸ್ತಿಷ್ಕದ ವಿಕಾಸವನ್ನವಲಂಬಿಸಿ ವರ್ಗಾವಣೆ ನಿಂತಿದೆ. ಕಲಿಕೆಯ ಸಮಸ್ಯೆಯಲ್ಲಿ ತುಂಬ ಮುಖ್ಯವಾದ ವರ್ಗಾವಣೆಯ ಬಗ್ಗೆ ಹಲವಾರು ಪ್ರಯೋಗಗಳನ್ನು ನಡೆಸಿ ವರ್ಗಾವಣೆಯ ಸಂವಿಧಾನ ವಿವರಗಳನ್ನು ನಿರ್ದೇಶಿಸಿದ್ದಾರೆ.

ವರ್ಗಾವಣೆ ಕಲಿಕೆಗೆ ನೆರವಾಗುವಂತೆಯೇ, ರೂಢಿಯು ಮುಂದಿನ ಕಲಿಕೆಗೆ ಅಡ್ಡಿಯಾಗಿ ಪರಿಣಮಿಸಬಹುದು ( habit interference ). ಚಿಕ್ಕಂದಿನಲ್ಲಿ ಬೇರೂರಿದ ಅಭ್ಯಾಸಗಳು ಸಂದರ್ಭವು ಮಾರ್ಪಟ್ಟು ಸಮಸ್ಯೆಗಳು ಬೇರೆ ಆದಾಗಲೂ ಬದಲಾಯಿಸದೆ ತಮ್ಮ ಪ್ರಭಾವವನ್ನು ಬೀರುವುದರಿಂದ ಕಲಿಕೆ ಕಷ್ಟವಾಗುತ್ತದೆ. ಬಲಗೈಯಲ್ಲಿ ಬರೆಯಲು ಅಭ್ಯಾಸವಾಗಿರುವ ನಮಗೆ ಎಡಗೈಯಿಂದ ಬರೆಯುವುದನ್ನು ಕಲಿಯುವುದು ಸುಲಭವಲ್ಲ. ಒಂದು ಭಾಷೆಯನ್ನು ಚೆನ್ನಾಗಿ ಕಲಿತು ಅದನ್ನೇ ಬಳಸುತ್ತಿದ್ದವರು ಹೊಸದೊಂದು ಭಾಷೆಯಲ್ಲಿ ವ್ಯವಹರಿಸತೊಡಗಿದಾಗ ಮೊದಲ ಭಾಷೆಯ ಮಾತುಗಳೇ ಮತ್ತೆ ಮತ್ತೆ ತಲೆಹಾಕುತ್ತವೆ. ಬೇರೂರಿದ ಅಭ್ಯಾಸ ಬಿಡುವುದು ಕಷ್ಟ. ಅಭ್ಯಾಸದಿಂದ ನಮ್ಮ ಕ್ರಿಯಾತ್ಮಕ ಪ್ರವೃತ್ತಿಗಳು ಮಾರ್ಪಟ್ಟಿರುತ್ತವೆ; ಕಲಿಕೆಯಲ್ಲಿ ಇವು ಮತ್ತೆ ಮಾರ್ಪಡಬೇಕಾಗುತ್ತದೆ. ಇದೇ ತೊಂದರೆಗೆ

ಕಾರಣವಾಗುವುದು. ವರ್ಗಾವಣೆಯಲ್ಲಿರುವ ಮೂಲಭೂತ ನಿಯಮಗಳೇ ಇಲ್ಲಿಯೂ ಕೆಲಸಮಾಡುತ್ತವೆ. ನಿವರ್ತನಕ್ಕೆ, ಅಭ್ಯಾಸಮಾಡಿದ ಸಾಮಾಗ್ರಿಯೂ ಹೊಸದಾಗಿ ಕಲಿಯಬೇಕಾದ ಸಾಮಾಗ್ರಿಯೂ ಸದೃಶವಾಗಿದ್ದರೆ ಅಭ್ಯಾಸದಿಂದ ತೊಂದರೆ. ಕನ್ನಡ ಕಲಿತವರು ತೆಲುಗನ್ನು ಕಲಿಯುವಾಗ, ಕನ್ನಡದ ಮಾತುಗಳೇ ಬರುವುದು ಸಹಜ. ಆದರೆ ಕನ್ನಡ ಬಲ್ಲವರು ಇಂಗ್ಲೀಷನ್ನು ಮಾತನಾಡುವಾಗ ಕನ್ನಡ ಶಬ್ದಗಳ ಬಳಕೆ ಕಮ್ಮಿ. ಕನ್ನಡ-ತೆಲುಗು ಎರಡೂ ಸದೃಶವಾದ ಭಾಷೆಗಳು, ಒಂದೇ ಭಾಷಾವರ್ಗಕ್ಕೆ ಸೇರಿದುವು; ಕನ್ನಡ-ಇಂಗ್ಲಿಷ್ ಹಾಗಲ್ಲ. ಭಾಷೆಯ ಅಭ್ಯಾಸ ಗಣಿತದ ಕಲಿಕೆಗೆ ಅಡ್ಡಿಮಾಡುವುದಿಲ್ಲ. ಪ್ರಾಣಿಗಳಲ್ಲಿ ಇಂಥ ಆತಂಕ ಹೆಚ್ಚು. ನಾಯಿಗೆ ಒಬ್ಬ ಯಜಮಾನನ ಬಳಕೆಯಾಗಿಬಿಟ್ಟರೆ ಅದು ಬೇರೆ ಯಜಮಾನನಿಗೆ ಹೊಂದಿಕೊಳ್ಳುವುದು ಕಷ್ಟ; ಸರ್ಕಸಿನಲ್ಲಿಯೂ ಒಂದು ಕೆಲಸವನ್ನು ಕಲಿತ ಪ್ರಾಣಿಗೆ ಮತ್ತೊಂದು ಕೆಲಸವನ್ನು ಹೇಳಿಕೊಡಬೇಕೆಂದರೆ ಮೊದಲಿನ ಕೆಲಸವೇ ಮತ್ತೆ ಮತ್ತೆ ಮುನ್ನುಗ್ಗಿ ಬರುತ್ತದೆ; ಬುದ್ಧಿಶಕ್ತಿ ಸಾಕಷ್ಟು ಇಲ್ಲದ ಮನುಷ್ಯರಿಗೂ ಇದೇ ಮಾತು ಅನ್ವಯಿಸುತ್ತದೆ. ಒಂದರ ಗೀಳೇ ಅವರನ್ನು ಕಾಡುತ್ತದೆ. ಹೊಸ ಸಂದರ್ಭಗಳಿಗೆ ಹೊಂದಿಕೊಂಡು ಹೋಗಬೇಕಾದರೆ ಬುದ್ಧಿಶಕ್ತಿ ಹೆಚ್ಚಿನ ಪ್ರಮಾಣದಲ್ಲಿರಬೇಕು. 'ಹುಟ್ಟಿದ ಸುಳಿ ಸುಟ್ಟರೂ ಹೋಗದು' ಎನ್ನುವ ಗಾದೆ ಅಭ್ಯಾಸದ ಪ್ರಭಾವವನ್ನು ಹೇಳುವುದೇ ಆಗಿದೆ.

ಪರಿಚ್ಛೇದ ಏಳು

# ಸ್ಮೃತಿ - ವಿಸ್ಮೃತಿ

೧

## ನೆನಪಿನ ಸ್ವಾರಸ್ಯ

'ಇದ್ದುದು ಯಾವುದೂ ಅಳಿಸಿಹೋಗದು' ಎನ್ನುವ ಭೌತಿಕ ಸಿದ್ಧಾಂತ ಮಾನಸಿಕ ನೆಲೆಯಲ್ಲಿಯೂ ನಿಜ. ನಮಗೆ ಒದಗುವ ಅನುಭವಗಳು ಚಂಚಲವಾಗಿ ತೋರಿಯಡಗುತ್ತವೆ; ಆದರೆ ಅವುಗಳ ವಾಸನೆ ಚೇತನಕ್ಕೆ ಅಂಟಿಕೊಂಡೇ ಇರುತ್ತದೆ. ಎಷ್ಟು ಅಲ್ಪವಾಗಲೀ, ಕ್ಷಣಿಕವಾಗಲೀ ಅನುಭವ ಉಳಿದೇ ಉಳಿಯುತ್ತದೆ. ಆದರೆ ಉಳಿದುದೆಲ್ಲ ಮತ್ತೆ ಮೇಲೆ ಬರಲಾರದು. ಹಳೆಯ ಅನುಭವ ನೆನಪಿಗೆ ಬಂದಾಗಲೂ ಹರಕುಮುರುಕಾಗಿ, ಅಂಕುಡೊಂಕಾಗಿ ಬರುತ್ತದೆ. ನೆನಪು - ಮರವೆ (ಸ್ಮೃತಿ-ವಿಸ್ಮೃತಿ) ಎರಡೂ ವಿರುದ್ಧ ತತ್ತ್ವಗಳು ಬಾಳಿನುದ್ದಕ್ಕೂ ನಮ್ಮನ್ನು ಹೆಣಗಾಡಿಸುತ್ತವೆ. ನೆನಪೆಂದರೆ ಏನು? ಎಂಥ ಅನುಭವ ನೆನಪಿನಲ್ಲಿ ಉಳಿದೀತು? ಮರವೆಯ ನಿಯಮ ಏನು? ನೆನಪಿಗೆ ಥಟ್ಟನೆ ಬಾರದ ಅನುಭವವನ್ನು ಅರಿಯುವ ಕ್ರಮ ಇದೆಯೆ? ಈ ಮೊದಲಾದ ಸಮಸ್ಯೆಗಳನ್ನೆಲ್ಲ ಮನಃಶಾಸ್ತ್ರ ಎತ್ತಿಕೊಂಡು ವಿಚಾರಮಾಡಿದೆ.

ಹಿಂದಿನ ಪರಿಚ್ಛೇದದಲ್ಲಿ ಕಲಿಕೆಯ ಪ್ರಸ್ತಾಪ ಮಾಡಿದೆವು. ಪ್ರಾಣಿ ಅಭ್ಯಾಸದಿಂದ ಕಲಿಯುತ್ತದೆ. ಎಂದರೆ ಅನುಭವವಾದೊಡನೆ ಮಾರ್ಪಾಡಾಗಿ ಈ ಮಾರ್ಪಾಟಿನ ನೆಲೆಯಲ್ಲಿ ಮುಂದಿನ ಪ್ರತಿಕ್ರಿಯೆಗಳು ನಡೆಯುತ್ತವೆ. ಮಾರ್ಪಾಟು

ಶಾರೀರಕವಾಗಿ ಉಳಿಯುವುದೇ, ಕ್ರಿಯಾತ್ಮಕವಾಗಿ ಮೈದಳೆಯುವುದೇ ಕಲಿಕೆಯ ಸಾರ. ಕಲಿಕೆಗೆ ಸ್ಮೃತಿಯೇ ಅಧಿಷ್ಠಾನ. ಸ್ಮೃತಿಯಲ್ಲಿ ಮುಖ್ಯ ವಿಷಯ ಉಳಿಯುವುದು. ನಡೆದ ಅನುಭವ ಸೂತ್ರಪ್ರಾಯವಾಗಿ, ಸೂಕ್ಷ್ಮಾಕಾರದಲ್ಲಿ, ನರಮಂಡಲದ ವ್ಯವಸ್ಥೆಯಲ್ಲಿ ಮುದ್ರಿತವಾಗಿ ಉಳಿಯುತ್ತದೆ. ಹೊರಗಿನ ವಿವರವಾದರೂ ಅದು ಜೀವಿಯ ಆಂತರಿಕಸ್ವತ್ತಾಗಿ ಉಳಿದು, ಜೀವಿ ಬಯಸಿದಾಗ ಮೇಲೆ ಬರಬಲ್ಲದು. ಅನುಭವವಿದ್ದರೂ ನೆನಪಿನಲ್ಲಿ ಉಳಿಯದಿದ್ದರೆ, ಅಥವಾ ಅದು ಬೇಕೆಂದಾಗ ಮೇಲೆ ಬರದಿದ್ದರೆ ವಿಸ್ಮೃತಿ ಅಥವಾ ಮರವೆ ಎನಿಸಿಕೊಳ್ಳುತ್ತದೆ. ದೈಹಿಕಕ್ರಿಯೆ ಸ್ಮೃತಿಯಲ್ಲಿ ನಡೆದಂತೆಯೇ ವಿಸ್ಮೃತಿಯಲ್ಲಿಯೂ ನಡೆಯುತ್ತದೆ. ಒಂದರಲ್ಲಿ ನರಕಣಗಳು ವಾಸನೆಯನ್ನು ಧರಿಸುತ್ತವೆ, ಹಿಡಿಯುತ್ತವೆ; ಇನ್ನೊಂದರಲ್ಲಿ ನರಕಣಗಳು ವಾಸನೆಯನ್ನು ಅಳಿಸಿಹಾಕುತ್ತವೆ, ತೊಡೆದುಹಾಕುತ್ತವೆ. ಸ್ಮೃತಿ ವಿಸ್ಮೃತಿಗಳಲ್ಲಿ ದೈಹಿಕವಾದ ಕ್ರಿಯೆ ಏನು ಎನ್ನುವುದೇನೋ ಈ ವರೆಗೆ ನಿರ್ಧಾರವಾಗಿಲ್ಲ.

ಜೀವಿ ಬಾಳಲು ಎರಡೂ ಅಗತ್ಯ. ಆದುದನ್ನು ನೆನಪಿನಲ್ಲಿಟ್ಟುಕೊಳ್ಳದಿದ್ದರೆ ಕಲಿಯುವುದೂ ಸಾಧ್ಯವಿಲ್ಲ, ವ್ಯವಹಾರಮಾಡುವುದೂ ಸಾಧ್ಯವಿಲ್ಲ. ಆವರಣದ ಒಂದೊಂದು ವಿವರವೂ ಒಂದೊಂದು ಬಾರಿ ಕಂಡಾಗಲೂ ಹೊಸದಾಗಿಯೇ ಕಂಡರೆ ವ್ಯವಹಾರ ತುಂಬ ನಿಧಾನವಾಗುತ್ತದೆ. ಶ್ರಮಸಾಧ್ಯವಾಗುತ್ತದೆ; ಕೌಶಲಕ್ಕೆ ಅವಕಾಶವಿರುವುದಿಲ್ಲ. ಹಾಗೆಯೇ ನಡೆದುದೆಲ್ಲ ನೆನಪಿನಲ್ಲಿ ಉಳಿದರೆ ಮನಸ್ಸು ಕುರುಕ್ಷೇತ್ರವಾಗಿಬಿಡುತ್ತದೆ; ನೆನಪುಗಳ ಗೊಂದಲವೋ ತಿಕ್ಕಾಟವೋ ಸೆಣಸಾಟವೋ ಹೇಳತೀರುವುದಿಲ್ಲ., ಹೊಸ ಹೊಸ ಅನುಭವಗಳು ಆದಂತೆಲ್ಲ ಹಳೆಯದು ಮರೆಯಬೇಕು; ಹಳೆಯ ವಾಸನೆಗಳ ಮೇಲೆ ಹೊಸ ವಾಸನೆಗಳು ಮೂಡಿ ಬರಬೇಕು. ನೆನಪಿಗಿಂತ ಹೆಚ್ಚಾಗಿ ಮರವೆ ನಮ್ಮ ಬಾಳುವೆಯಲ್ಲಿ ಕೆಲಸ ಮಾಡುವುದರಿಂದಲೇ ನಮಗೆ ಸುಖ, ಶಾಂತಿ, ಸಮಾಧಾನ.

ಯಾವ ಅನುಭವ ನೆನಪಿನಲ್ಲಿ ಉಳಿಯುತ್ತದೆ, ಯಾವುದು ಮರೆತು ಹೋಗುತ್ತದೆ ಎಂದು ಖಚಿತವಾಗಿ ಹೇಳಲು ಬರುವುದಿಲ್ಲ. ಅನುಭವ ದೃಢವಾಗಿದ್ದರೆ, ಪ್ರಭಾವಶಾಲಿಯಾಗಿದ್ದರೆ, ಗಾಢಪ್ರವರ್ತನೆಗಳಿಗೆ ಸಂಬಂಧಿಸಿದ್ದಾದರೆ. ಹೊಸದಾಗಿದ್ದರೆ ನೆನಪಿರುವುದು ಸುಲಭ; ಅನುಭವದಲ್ಲಿ ಸ್ವಾರಸ್ಯ ಇಲ್ಲದಿದ್ದರೆ ಅದು ಆಸಕ್ತಿಯನ್ನು ಕೆರಳಿಸದಿದ್ದರೆ, ಹಳೆಯದಾದರೆ ಮರೆತು ಹೋಗುವುದು ಸಹಜ. ಅನುಭವವಿದ್ದ ಹಾಗೆಯೇ ನೆನಪು ಉಳಿಯುವುದೆಂದು ಹೇಳುವಹಾಗಿಲ್ಲ; ಅಷ್ಟೇ ಪರಿಪೂರ್ಣವಾಗಿ ಸ್ಪಷ್ಟವಾಗಿ ನೆನಪು ಉಳಿಯುವುದಿಲ್ಲ; ಒಂದೊಂದು ನೆನಪೂ ಬೇರೆಬೇರೆಯಾಗಿ ಇರುವುದಿಲ್ಲ. ನೆನಪುಗಳು ಅಸ್ಪಷ್ಟವಾಗಿಯೇ ಇರುವುದು ಹೆಚ್ಚು; ಒಂದೇ ವಿಚಾರವಾಗಿ ಬಂದ ಅನುಭವಗಳು ಕಲಿಯುವುದೂ ಸಹಜ. ಅನುಭವಕ್ಕಿಂತ ನೆನಪು ಬೇರೆಯಾಗಿಯೇ ಇರುತ್ತದೆ. ನೆನಪು ಬರುಬರುತ್ತ ಸಂಕುಚಿತವಾಗುವುದು ಸ್ವಭಾವ. ವಿವರಗಳು ಮಾಸಿ, ಮೊದಲು ಸ್ಫುಟವಾಗಿದ್ದುದು ಅಸ್ಪಷ್ಟವಾಗಿಬಿಡುತ್ತದೆ; ಮುಖ್ಯ ವಿವರಗಳು ಮಾತ್ರ

ಉಳಿದು, ಇತರ ವಿವರಗಳು ಜಾರಿಹೋಗುತ್ತವೆ. ನೆನಪಿಗೆ ತಂದುಕೊಳ್ಳಬೇಕೆಂದು ಪ್ರಯತ್ನಪಟ್ಟಾಗ ಪ್ರಯಾಸದಿಂದ ವಿವರಗಳನ್ನು ಹಿಡಿಯಬೇಕಾಗುತ್ತದೆ; ಇದ್ದ ವಿವರಗಳು ಸಿಗದೆ ಚಿತ್ರಣದ ಪೂರ್ಣತೆಗಾಗಿ ಹಲವು ವಿವರಗಳನ್ನು ಕಲ್ಪಿಸಿಕೊಳ್ಳುವ ಸಂಭವವೂ ಉಂಟು. ನೆನಪೆಂದರೆ ಕೇವಲ ಪ್ರತಿಕೃತಿಯಲ್ಲ; ಕಲ್ಪನೆಯ ಅಂಶವೂ ಆದರಲ್ಲಿ ಸೇರುತ್ತದೆ.

ಸಂಪೂರ್ಣವಾಗಿ ಪ್ರತಿಕೃತಿಯ ನೆನಪು ಸಾಧ್ಯವಿಲ್ಲವೆಂದಲ್ಲ. ಕೆಲವೊಮ್ಮೆ ಅನುಭವ ಕಣ್ಣಿಗೆ ಕಟ್ಟಿದಂತೆ ಉಳಿದು ಬಿಡುತ್ತದೆ. ಛಾಯಾಚಿತ್ರದಂತಿರುವ ಸ್ಮೃತಿ ಕೆಲವರಿಗಿರುವುದುಂಟು. ನೋಡಿದುದನ್ನು ನೋಡಿದಂತೆಯೇ ವಿವರಿಸುವುದು ಅವರಿಗೆ ಸಾಧ್ಯ; ಒಂದು ಪುಸ್ತಕವನ್ನು ಓದಿದರೆ ಇಂಥ ಪುಟದಲ್ಲಿ ಇಷ್ಟನೆಯ ಸಾಲಿನಲ್ಲಿ ಈ ವಾಕ್ಯ ಇದೆ ಎಂದು ಓದಿದ ಎಷ್ಟೋ ಕಾಲದನಂತರ ಹೇಳಿಯಾರು ಅವರು. ಕೆಲವು ಮಕ್ಕಳಲ್ಲಿ ಈ ಬಗೆಯ ಸ್ಮೃತಿಚಿತ್ರಗಳು ( eidetic imagery ) ಒದಗುತ್ತವೆ. ಮಗು ದಾರಿಯಲ್ಲಿ ಹೋಗುತ್ತ ಅಂಗಡಿಯ ಮೇಲಿನ ಬೋರ್ಡನ್ನು ನೋಡಿ, ಮನೆಗೆ ಬಂದು ಆ ಬೋರ್ಡಿನ ಬಣ್ಣ, ಅದರಲ್ಲಿರುವ ಹೆಸರು, ಮಿಕ್ಕ ವಿವರಗಳು ಎಲ್ಲವನ್ನೂ ಆಗಲೇ ನೋಡುತ್ತಿರುವಂತೆ ಹೇಳಬಲ್ಲುದು. ಬೋರ್ಡು ಮುಂದಿಲ್ಲವಾದುದರಿಂದ ಅದು ನೆನಪೇ ಎನ್ನುವುದರಲ್ಲಿ ಸಂಶಯವಿಲ್ಲ. ಆದರೆ ಸಣ್ಣ ಮಗು ಬೋರ್ಡಿನ ಮೇಲೆ ಬರೆದಿದ್ದುದನ್ನು ಓದಿ ಅರ್ಥಮಾಡಿಕೊಳ್ಳದೆ ಇರುವಾಗಲೂ ಹೆಸರಿನ ಅಕ್ಷರಗಳನ್ನೆಲ್ಲ ಚ-ಚು ತಪ್ಪದೆ, ತಡವರಿಸದೆ, ಓದಿದಂತೆಯೇ ಹೇಳಿಬಿಡುತ್ತದೆ. ನೆನಪು ಚಿತ್ರದಂತೆಯೇ ಉಳಿದುಬಿಟ್ಟಿದೆಯೆನ್ನುವುದು ವಿವರಣೆ. ಇದು ಆರು ವರ್ಷ ತುಂಬದ ಮಕ್ಕಳಲ್ಲಿ ಕಾಣಬರುವ ಸಾಮರ್ಥ್ಯವೆಂದೂ, ಆ ವಯಸ್ಸು ಮೀರಿದ ಮೇಲೆ ಕಾಣುವುದು ಕಷ್ಟವೆಂದೂ ಹೇಳುತ್ತಾರೆ. ವಾಹನದ ಅಪಘಾತವಾದಾಗ, ಅದಕ್ಕೆ ತುತ್ತಾಗಿ ಪ್ರಜ್ಞೆ ತಪ್ಪಿದ ಮನುಷ್ಯ ಆಸ್ಪತ್ರೆಯಲ್ಲಿ ಜ್ಞಾನ ತಿಳಿದು ಎದ್ದಾಗ ಅಪಘಾತದ ಎಲ್ಲ ವಿವರಗಳನ್ನೂ, ಅಪಘಾತವಾದ ಸ್ಥಳದ ವರ್ಣನೆಯನ್ನೂ, ಹೀಗೆಯೇ ಸ್ಮೃತಿ ಚಿತ್ರದಂತೆ ನಿರೂಪಿಸುವ ಸಂದರ್ಭಗಳೂ ಉಂಟು. ಆದರೆ ಇವೆಲ್ಲ ವಿಶೇಷ ಸಾಮರ್ಥ್ಯದ ಮಾತು. ಸಾಮಾನ್ಯವಾಗಿ ನೆನಪೆಂದರೆ ಮಸುಕು ಮಾಸಲಾಗಿ, ನಿರ್ಜೀವವಾಗಿ, ಅರ್ಧಮರ್ಧ ಕಾಣಿಸಿಕೊಳ್ಳುವ ವಿವರಗಳ ಅಸ್ಪಷ್ಟ, ಅನಿರ್ದಿಷ್ಟ ಜಾಲ.

೨

### ಧಾರಣ, ಸ್ಮರಣ

ಅನುಭವದಿಂದ ನಮ್ಮ ಮನಸ್ಸಿನ ಮೇಲೆ ಮುದ್ರಿಕೆಯೊಂದು ಸಂಭವಿಸಿ, ಇದರ ಕೆಲವು ಅಂಶಗಳು ಬೇರೂರಿ, ಮತ್ತೆ ಈ ಅಂಶಗಳು ನಮ್ಮ ಅರಿವಿನಲ್ಲಿಯೋ ಕೆಲಸದಲ್ಲಿಯೋ ಕಾಣಿಸಿಕೊಂಡರೆ ಅದು ಸ್ಮೃತಿ, ನೆನಪು. ಮುದ್ರಿಕೆ ಯಾವ ರೀತಿಯಲ್ಲಿ ಉಳಿಯುತ್ತದೆ ಎಂಬುದು ವಿವಾದಾಸ್ಪದವಾದ ಪ್ರಶ್ನೆ. ಕೆಲವು ವಿಜ್ಞಾನಿಗಳು

ವಾಸನೆಯೆನ್ನುವುದು ಮಸ್ತಿಷ್ಕದ ನರಕಣಗಳಲ್ಲಿ ಸಂಭವಿಸುವ ಮುದ್ರಿಕೆಯೆಂದು ವಾದಿಸಿದ್ದಾರೆ; ಮನುಷ್ಯನ ಮಸ್ತಿಷ್ಕದಲ್ಲಿ ಸುಮಾರು ಹತ್ತು ಬಿಲಿಯನ್ ನರಕಣಗಳಿವೆಯೆಂದೂ ಇವುಗಳ ವ್ಯಾಪಾರ ವಿಶೇಷವೇ ಸ್ಮೃತಿಯೆಂದೂ ವಿವರಿಸುತ್ತಾರೆ. ಧ್ವನಿ ಮುದ್ರಿಕೆಗಳ ಯಾಂತ್ರಿಕ ವ್ಯವಸ್ಥೆಯಲ್ಲಿ ಆ ಶಬ್ದಗಳ ಪುನಃಪ್ರಚೋದನೆ ಸಾಧ್ಯವಿರುವಂತೆಯೇ, ಸ್ಮೃತಿ ಮುದ್ರಿಕೆಗಳೂ ಸ್ಮರಣದಿಂದ ಪುನಃಪ್ರಚೋದಿತವಾಗ ಬಲ್ಲುವು. ಅನುಭವದ ಧಾರಣೆ ( retention ) ಒಳಗೆ ನಡೆದಿದೆ ಎನ್ನಲು ಸ್ಮರಣವೇ ( recall ) ನಿದರ್ಶನ. ಈ ಧಾರಣ-ಸ್ಮರಣ ಸಾಮರ್ಥ್ಯ ಮಸ್ತಿಷ್ಕಕ್ಕೆ ಸಂಬಂಧಿಸಿದ್ದು. ಮೂಲಭೂತವಾಗಿ ಸ್ಮೃತಿ ಸಂಜ್ಞೆಗಳು ಮೆದುಳಿನಲ್ಲಿ ಒದಗಿರುತ್ತವೆ. ಸ್ಮೃತಿ ಸಂಜ್ಞೆಗೆ ಎನ್‌ಗ್ರಾಮ್ ( engram ) ಎನ್ನುವ ಹೆಸರು ಬಂದಿದೆ. ಇದು ನರಕಣದೊಳಗೆ ಆಗಿರುವ ಮಾರ್ಪಾಟು, ಅಲ್ಲಿ ಸಂಕೇತರೂಪವಾಗಿ ಅಡಗಿರುವ ಮುದ್ರಿಕೆ. ಗಾನ ಮುದ್ರಿಕೆಯ ಮೇಲೆ ಗೆರೆಗಳಿರುವಂತೆ ನರಕಣಗಳ ಜಾಲದಲ್ಲಿಯೂ ಸ್ಮೃತಿರೇಖೆ ಗಳಿರುತ್ತವೆ; ಈ ಗೆರೆಯ ಮೇಲೆ ಮುಳ್ಳು ಹರಿದಾಡಿದಾಗ ಮುದ್ರಿತವಾದ ಹಾಡು ಮತ್ತೆ ಕೇಳಿಸುವಂತೆ ಸ್ಮರಣೆಯ ಸಮಯದಲ್ಲಿ ಈ ರೇಖೆಗಳು ಪುನಃಪ್ರಚೋದಿತ ವಾಗುತ್ತವೆ.

ಸ್ಮೃತಿಗೆ ನಿದರ್ಶನವಾಗಿ ನಾವು ಹಿಂದಿನ ಅನುಭವಗಳನ್ನು ಮತ್ತೆ ನೆನಪಿಗೆ ತಂದುಕೊಳ್ಳುತ್ತೇವೆ, ಅದನ್ನು ಮಾತಿನಲ್ಲಿ ಮೂಡಿಸುತ್ತೇವೆ ; ಹಿಂದೆ ನೋಡಿದುದನ್ನು ಜ್ಞಾಪಿಸಿಕೊಳ್ಳುತ್ತೇವೆ. ಈ ಶಕ್ತಿಯಿರದಿದ್ದರೆ ಪರಿಚಿತರಿಗೂ ಅಪರಿಚಿತರಿಗೂ ಭೇದವಿಲ್ಲ. ಆದರೆ ಮಾತಿನಲ್ಲಿ ಹೇಳಿದಾಗಲೇ ನೆನಪ್ಪು, ಇಲ್ಲವಾದರೆ ನೆನಪೇ ಇಲ್ಲ ಎನ್ನುವಹಾಗಿಲ್ಲ. ಮಕ್ಕಳೂ ಪ್ರಾಣಿಗಳೂ ಕೆಲಸದ ಮೂಲಕ ನೆನಪನ್ನು ನಿದರ್ಶಿಸುತ್ತಾರೆ. ಹಿಂದೆ ಮಾಡಿದ ಕೆಲಸವನ್ನು ಹಾಗೆಯೆ ಮತ್ತೊಮ್ಮೆ ಮಾಡಿದರೆ ನೆನಪಿದೆಯೆಂದರ್ಥವಲ್ಲವೆ ? ಹಿಂದೆ ಸಂಭವಿಸಿದ ಪ್ರಚೋದನೆಗೆ ಪ್ರತಿಕ್ರಿಯೆಯನ್ನು ಮಾಡುವಾಗ ಹಿಡಿದಷ್ಟು ಕಾಲ, ಪಟ್ಟಷ್ಟು ಶ್ರಮ ಮತ್ತೆ ಅದೇ ಪ್ರಚೋದನೆ ಸಂಭವಿಸಿದಾಗ ಮಾಡುವ ಪ್ರತಿ ಕ್ರಿಯೆಯಲ್ಲಿ ಇರುವುದಿಲ್ಲ. ಒಂದು ಕೆಲಸವನ್ನೋ ಕೌಶಲವನ್ನೋ ಕಲಿತಿದ್ದೂ, ಅದು ಬಳಕೆಯಲ್ಲಿಲ್ಲದಾಗ ಮತ್ತೆ ಅದನ್ನು ಕಲಿಯ ಬೇಕಾಗುತ್ತದೆ ; ಆದರೆ ಈಗ ಕಲಿಕೆ ತುಂಬ ಸುಲಭ. ಒಮ್ಮೆ ಕಲಿತು ಮರೆತಿದ್ದುದನ್ನು ಮತ್ತೆ ಕಲಿಯುವುದು ಕಷ್ಟವಲ್ಲ. ಸಂಗೀತಾಭ್ಯಾಸದಲ್ಲಿ ಕೆಲವು ಹಾಡುಗಳನ್ನು ಕಲಿತು ಹಲವಾರು ವರ್ಷ ಕಳೆದನಂತರ ಅದೇ ಹಾಡುಗಳು ಹೊಸದಾಗಿ ಕಾಣುವ ಸಂದರ್ಭ ಹಲವರಿಗಿರುತ್ತವೆ. ಆಗ ಮತ್ತೆ ಕಲಿಯಲು ಮೊದಲು ಮಾಡಿದರೆ ಸ್ವಲ್ಪ ಸಮಯದಲ್ಲೇ ಅವನ್ನು ದಕ್ಕಿಸಿಕೊಳ್ಳಬಹುದಲ್ಲವೆ ? ಪುನಃ ಕಲಿಕೆಯಲ್ಲಿ ಸಂಭವಿಸುವ ಕಾಲಶ್ರಮವು ಉಳಿತಾಯವಾಗುವುದು. ಇದೂ ಧಾರಣ-ಸ್ಮರಣಕ್ಕೆ ನಿದರ್ಶನ. ಕಲಿತಿದ್ದುದನ್ನು ಮತ್ತೆ ಕಲಿಯುವಾಗ ಹೆಚ್ಚಿನ ಪ್ರಯೋಜನವುಂಟೆಂದೂ, ಸ್ಮೃತಿ ಧಾರಣೆ ದೃಢವಾಗುವುದೆಂದೂ ಪ್ರಯೋಗಗಳಿಂದ ತಿಳಿದುಬಂದಿದೆ.

ಇಲಿಗಳು ವ್ಯೂಹವನ್ನು ಮೊದಲಬಾರಿಗೆ ಕಲಿಯಲು ಎಷ್ಟು ಅಭ್ಯಾಸಗಳು ಅಗತ್ಯವಾಗಿದ್ದುವೋ, ಅದರ ಕಾಲುಭಾಗದಷ್ಟು ಮಾತ್ರ ಎರಡನೆಬಾರಿ ಕಲಿಯಲು ಅಗತ್ಯವಾಗುತ್ತದೆ. ಮನುಷ್ಯರ ಮೇಲೆ ನಡೆಸಿದ ಪ್ರಯೋಗಗಳೂ ಹೆಚ್ಚುಕಡಿಮೆ ಇದೇ ತಾತ್ಪರ್ಯವನ್ನು ಸೂಚಿಸುತ್ತವೆ. ಧಾರಣೆ ದೃಢವಾಗಿಲ್ಲದಿದ್ದಾಗ ಮತ್ತೆ ಕಲಿಯುವ ಅಗತ್ಯ ಬೀಳುತ್ತದೆ; ಮೊದಲನೆಯ ಕಲಿಕೆಗೂ ಮುಂದಿನ ಕಲಿಕೆಗೂ ಹೆಚ್ಚು ಕಾಲದ ಅಂತರ ಇಲ್ಲದಿದ್ದಾಗ ಮೇಲೆ ಹೇಳಿದ ಸೌಲಭ್ಯವುಂಟು; ಅಂತರ ಹೆಚ್ಚಾದಂತೆ ಸೌಲಭ್ಯವೂ ಕಮ್ಮಿಯಾಗುತ್ತ ಬರುತ್ತದೆ. ಒಂದು ಪಾಠವನ್ನು ಮೇಲೆ ಮೇಲೆ ನಾಲ್ಕಾರು ಬಾರಿ ಓದಿದರೆ ಅದು ದೃಢವಾದ ಧಾರಣೆಗೆ ಕ.ರಣವಾಗುತ್ತದೆ, ಶಿಕ್ಷಣ ಕ್ಷೇತ್ರದಲ್ಲಿ 'ಉಳಿಕೆಯ ಪದ್ಧತಿ' (saving method) ಈ ನಿಯಮವನ್ನೇ ಅವಲಂಬಿಸಿ ನಿಂತಿರುವ ಪದ್ಧತಿ.

ಕೆಲವೊಮ್ಮೆ ಕಲಿತದ್ದು, ನೆನಪಿಗೆ ಅಥವಾ ಕೆಲಸಕ್ಕೆ ತಟ್ಟನೆ ಬರುವುದಿಲ್ಲ. ಸ್ವಲ್ಪ ಸಮಯದನಂತರ ಇದ್ದಕ್ಕಿದ್ದಂತೆ ಸ್ಫುರಣವಾಗುತ್ತದೆ. ಇದು ಹಲವರ ಅನುಭವದಲ್ಲಿದೆ. ಹಾಗೆಯೇ ಒಂದು ಪ್ರಚೋದಕ ಸಾಮಗ್ರಿಯಿದ್ದು ಅದನ್ನು ಪ್ರಾಣಿ ಕಂಡು ಆ ಸಾಮಗ್ರಿ ಮರೆಯಾದಮೇಲೂ ಅದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡುವುದು ಸಾಧ್ಯ. ಮೊದಲಿನದು ತಡವಾದ ನೆನಪಾದರೆ ಎರಡನೆಯದು ತಡವಾದ ಪ್ರತಿಕ್ರಿಯೆ (delayed reaction). ಇದು ಮಕ್ಕಳಲ್ಲಿಯೂ ಪ್ರಾಣಿಗಳಲ್ಲಿಯೂ ವಿಶೇಷವಾಗಿ ಕಂಡುಬರುವ ಸಾಮರ್ಥ್ಯವೆಂದು ಹೇಳುತ್ತಾರೆ. ಇದನ್ನು ಪ್ರಯೋಗಗಳಿಂದ ಅಧ್ಯಯನಮಾಡುವುದು ಸಾಧ್ಯ. ಹಂಟರ್ ಎಂಬಾತ ಪ್ರಾಣಿಗಳಲ್ಲಿ ಈ ಸಾಮರ್ಥ್ಯವನ್ನು ಕಂಡುಹಿಡಿಯಲು ನಡೆಸಿದ ಪ್ರಯೋಗಗಳು ಪ್ರಸಿದ್ಧವಾಗಿವೆ. ಒಂದು ಪ್ರಯೋಗದಲ್ಲಿ ಪೆಟ್ಟಿಗೆಯ ವ್ಯವಸ್ಥೆ ಹೀಗಿದ್ದಿತು. ಪ್ರಾಣಿ ಒಳಗೆ ಹೊಕ್ಕೊಡನೆ ಒಂದು ಕಡೆ ದೀಪವಿಟ್ಟ ಕೋಣೆ, ಆಹಾರವಿಟ್ಟಿರುವ ಸ್ಥಳ ಅದು; ಮತ್ತೊಂದು ಕಡೆ ಕತ್ತಲೆಕೋಣೆ, ಅಲ್ಲಿ ವಿದ್ಯುಚ್ಛಕ್ತಿಯ ಬಿಸಿ ತಗುಲುವ ವ್ಯವಸ್ಥೆ. ಪ್ರಾಣಿ ಪೆಟ್ಟಿಗೆಯನ್ನು ಹೊಕ್ಕು ಈ ಎರಡೂ ಕೋಣೆಗಳನ್ನು ನೋಡಿದೊಡನೆ ದೀಪವನ್ನು ಆರಿಸಿಬಿಡುತ್ತಿದ್ದರು. ಅಭ್ಯಾಸಗಳಲ್ಲಿ ಈ ಎರಡು ಕೋಣೆಗಳಿರುವ ಸ್ಥಳಗಳನ್ನೂ ಪಲ್ಲಟಮಾಡುತ್ತಿದ್ದರು. ಆದರೂ ಪ್ರಾಣಿ ದೀಪವಿಟ್ಟಿದ್ದ ಕೋಣೆಗೇ ಹೋಗುವುದನ್ನು ಕಲಿಯಿತು. ಪ್ರಚೋದನೆ ಎದುರಿಗಿಲ್ಲದಿದ್ದಾಗಲೂ ಅದರ ಸ್ಮೃತಿ ಪ್ರತಿಕ್ರಿಯೆಗೆ ಕಾರಣವಾಯಿತು. ಪ್ರಯೋಗದಲ್ಲಿ ದೀಪವನ್ನು ಆರಿಸುವುದಕ್ಕೂ ಪ್ರಾಣಿಯು ಪ್ರತಿಕ್ರಿಯೆಯನ್ನು ಮಾಡುವುದಕ್ಕೂ ಅನುಕ್ರಮವಾಗಿ ಅಂತರವನ್ನು ಹೆಚ್ಚಿಸಿದಾಗ ಈ ತಡವಾದ ಪ್ರತಿಕ್ರಿಯೆಗೆ ದೈಹಿಕಮಿತಿಯಿದ್ದುದು ಸ್ಪಷ್ಟವಾಯಿತು.

ನಾಯಿ, ಬೆಕ್ಕು, ಇಲಿ ಇವುಗಳ ಮೇಲೆ ಈ ಪ್ರಯೋಗಗಳು ನಡೆದುವು. ದೀಪವಿದ್ದ ಕೋಣೆಯ ಕಡೆಗೇ ನಾಯಿಯೂ ಇಲಿಯೂ ಮುಖತಿರುಗಿಸಿಕೊಂಡಿದ್ದಾಗ

ಈ ದೈಹಿಕಸಿದ್ಧತೆ ಪ್ರತಿಕ್ರಿಯೆಗೆ ನೆರವಾಯಿತು; ದೀಪ ಆರಿಹೋದಮೇಲೂ ಈ ದೈಹಿಕಸಿದ್ಧತೆ ಅಳಿದು ಹೋಗುವುದಿಲ್ಲ, ಮಕ್ಕಳಲ್ಲಿ ಇದೇ ಪ್ರಯೋಗವನ್ನು ನಡೆಸಿದಾಗ ಈ ದೈಹಿಕಸಿದ್ಧತೆಯ ಅಗತ್ಯವಿರಲಿಲ್ಲ. ಹೊರಗಿನ ಯಾವ ನೆರವೂ ಇಲ್ಲದೆ ಮಕ್ಕಳು ತಮ್ಮ ನೆನಪಿನಿಂದಲೇ ಹಿಂದೆ ದೀಪವಿದ್ದ ಕೋಣೆಗೇ ಹೋಗುತ್ತಿದ್ದರು. ಈ ನೆನಪು ಸಾಂಕೇತಿಕಕ್ರಿಯೆ; ಬಾಹ್ಯ ಪ್ರಚೋದನೆಗೆ ಬದಲಾಗಿ ಆಂತರ ಪ್ರವೃತ್ತಿಯೊಂದು ಮೈದಳೆದು, ಪ್ರತಿಕ್ರಿಯೆಗೆ ಮಾರ್ಗದರ್ಶನ ಮಾಡುವ ಸೌಲಭ್ಯ ಮನುಷ್ಯರಿಗುಂಟು. ಇದು ಸ್ಮೃತಿಯ ಒಂದು ಮುಖ. ಮನಸ್ಸಿನಲ್ಲಿ ಧರಿಸಿಕೊಂಡ ಪ್ರಚೋದನೆಯ ಸಾಂಕೇತಿಕಪ್ರತಿಕೃತಿಯೇ ಕೆಲಸಮಾಡುವ ಸಂದರ್ಭ ಇದು. ಕಾಲದ ಅಂತರವೂ ಮನುಷ್ಯರ ಪ್ರತಿಕ್ರಿಯೆಗೆ ಅಡ್ಡಿ ಬರುವುದಿಲ್ಲ, ಎಷ್ಟು ತಡವಾದರೂ ಮೂಲ ಪ್ರಚೋದನೆಯನ್ನು ಸ್ಮೃತಿ ಉಳಿಸಿಕೊಳ್ಳುತ್ತದೆ. ಒಂದು ವರ್ಷದ ಮಗುವಿಗೆ ತಡದ ಅವಧಿ ಕೆಲವು ನಿಮಿಷಗಳವರೆಗೆ ಮಾತ್ರ; ಐದಾರು ವರ್ಷದ ಮಗು ಒಂದು ತಿಂಗಳ ಮೇಲೂ ಪ್ರತಿಕ್ರಿಯೆಯನ್ನು ಮಾಡಬಲ್ಲದು. ದೊಡ್ಡವರು ವರ್ಷಗಳಾದ ಮೇಲೂ ಪ್ರಚೋದನೆಯ ಸ್ಮೃತಿಯನ್ನು ಉಳಿಸಿಕೊಂಡು ಪ್ರತಿಕ್ರಿಯೆ ಮಾಡ ಬಲ್ಲರು.

೩

## ಮರವೆ ಸಹಜವೇ ?

ಅನುಭವವು ನಮ್ಮ ಗಮನವನ್ನು ಸಾಕಷ್ಟು ಸೆಳೆಯದಿದ್ದರೆ ಅದರ ವಿಚಾರವಾಗಿ ಸ್ಮರಣೆ ದುರ್ಬಲವಾಗಿರುತ್ತದೆ. ಪ್ರವರ್ತನೆಯಿಂದಲೇ ಕಲಿಕೆ ಸಾಧ್ಯವೆನ್ನುವುದನ್ನು ನೋಡಿದ್ದೇವಷ್ಟೆ. ಆದರೆ ಪ್ರವರ್ತನೆಯಿದ್ದರೂ ಕಲಿಕೆಯ ಪದ್ಧತಿ ತನ್ನ ಪ್ರಭಾವವನ್ನು ಬೀರುತ್ತದೆ. ಕೆಲವು ಪದ್ಧತಿಗಳು ಸ್ಮರಣೆಗೆ ತುಂಬ ನೆರವಾಗುತ್ತವೆ. ವಿತರಣ ಪದ್ಧತಿಯಲ್ಲಿ ಸಮೂಹಪದ್ಧತಿಗಿಂತ ಹೆಚ್ಚಿನ ಕಲಿಕೆಯಿರುವುದು ಪ್ರಯೋಗಗಳಿಂದ ಸಿದ್ಧವಾಗಿದೆ. ಅಲ್ಪಕಾಲಾವಧಿಯಲ್ಲಿ ಕಲಿತಿದ್ದುದನ್ನು ಸ್ಮರಿಸಿಕೊಂಡು ಮತ್ತೆ ಕಲಿಯುವುದು ವಿತರಣ ಪದ್ಧತಿ; ದೀರ್ಘಕಾಲದ ಅವಧಿಯಲ್ಲಿ ಕಲಿತು ಸ್ಮರಣೆಗೆ ತಂದುಕೊಳ್ಳುವುದು ಸಮೂಹಪದ್ಧತಿ. ಸಾಕಾದ ಅಭ್ಯಾಸಗಳಿಗಿಂತ ಹೆಚ್ಚು ಅಭ್ಯಾಸ ಮಾಡುವುದು ಇನ್ನೊಂದು ಪದ್ಧತಿ. ಒಂದು ಪದ್ಯವನ್ನು ಕಂಠಗತ ಮಾಡಿಕೊಳ್ಳಲು ಹತ್ತುಸಾರಿ ಓದಬೇಕಾದರೆ, ಹದಿನೈದು ಬಾರಿ ಓದಿದರೆ ಕಲಿಕೆ ಇನ್ನಷ್ಟು ದೃಢವಾಗು ತ್ತದೆ. ಹೀಗೆ ಅಧಿಕ ಕಲಿಕೆಯಿಂದ ಸ್ಮರಣೆ ದೃಢವಾಗುತ್ತದೆ. ಆದರೆ ಇದು ನಿರಂತರ ವಾಗಿ ಅಥವಾ ಉತ್ತರೋತ್ತರವಾಗಿ ನಿಜವಾದ ಮಾತಲ್ಲ. ಅಧಿಕಾಧಿಕವಾಗಿ ಕಲಿಯು ತ್ತಿದ್ದರೆ ಅದರಿಂದ ಹೆಚ್ಚುಹೆಚ್ಚಿನ ಪ್ರಯೋಜನವಿರುವುದಿಲ್ಲ. ಒಂದು ನೆಲೆಯವರೆಗೆ ಮಾತ್ರ ಸ್ಮರಣೆಗೆ ಇದು ನೆರವಾಗುತ್ತದೆ; ಅದನ್ನು ಮೀರಿದರೆ ಪ್ರಯೋಜನ ಕಮ್ಮಿ.

ಸ್ಮರಣೆ ಸಾಧ್ಯವಿಲ್ಲವಾದರೆ ಅದು ವಿಸ್ಮೃತಿ. ಹಿಂದೆ ಕಲಿತದ್ದನ್ನು ಯಾವ ಕಾರಣದಿಂದಲಾದರೂ ನೆನಪಿಗೆ ತಂದುಕೊಳ್ಳುವುದು ಅಸಾಧ್ಯವಾದರೆ ಅದೇ ಮರವೆ

ಯಲ್ಲವೆ? ಸ್ಮೃತಿ ಇಳಿಮುಖವಾದಂತೆ ವಿಸ್ಮೃತಿ ಏರುತ್ತದೆ. ನಿರರ್ಥಕವಾದ ಶಬ್ದಪುಂಜಗಳನ್ನು ಕಲಿತು ಅವು ನೆನಪಿನಿಂದ ಜಾರುವುದನ್ನುಕುರಿತು ಸಂಶೋಧನೆಗಳನ್ನು ನಡೆಸಿದವರಲ್ಲಿ ಎಬಿಂಗ್‌ಹಾವುಸ್ ಪ್ರಮುಖ. ಮೊದಮೊದಲು ಇಂಥ ಶಬ್ದಪುಂಜಗಳು ವೇಗವಾಗಿ ವಿಸ್ಮೃತವಾಗುವುದೆಂದೂ, ಅನಂತರ ವಿಸ್ಮೃತಿಯ ವೇಗ ಕಮ್ಮಿಯಾಗುವುದೆಂದೂ ಇವನ ಸಿದ್ಧಾಂತ. ಅರ್ಥವಿರುವ ಪದಗಳಾದರೆ ಅವು ಅಷ್ಟು ಬೇಗ ನೆನಪಿನಿಂದ ಜಾರುವುದಿಲ್ಲ. ಕಲಿಯುವ ಸಾಮಗ್ರಿಯಲ್ಲಿಯೂ ಒಂದು ಶೈಲಿ, ಒಂದು ವ್ಯವಸ್ಥೆ, ಒಂದು ತಾತ್ಪರ್ಯ ಇವುಗಳ ಅರಿವಾದರೆ ಮರವೆ ಅಷ್ಟು ಬೇಗ ಮೂಡಲಾರದು. ಈ ಅರಿವು ಮೂಡಿದಾಗ ಕಲಿಯುವುದೂ ಸುಲಭ. ಅರ್ಥವಾಗದೆ ಪಾಠವನ್ನು ಗಟ್ಟಿಮಾಡುವುದೂ ಕಷ್ಟ; ಗಟ್ಟಿಮಾಡಿದಮೇಲೂ ಅದು ನೆನಪಿನಲ್ಲಿ ಹೆಚ್ಚುಕಾಲ ಉಳಿಯುವುದು ಕಷ್ಟ. ಕೆಲವೊಮ್ಮೆ ನಿರರ್ಥಕಶಬ್ದಪುಂಜಗಳನ್ನು ಕಲಿಯುವ ಹವ್ಯಾಸಕ್ಕೆ ತೊಡಗಿದ ಮನುಷ್ಯ ಅವುಗಳಲ್ಲಿ ತನ್ನದೇ ಆದ ಅರ್ಥಗಳನ್ನು ಕಂಡುಕೊಳ್ಳುತ್ತಾನೆ, ಅವುಗಳಲ್ಲಿ ಯಾವುದೋ ಒಂದು ಕ್ರಮವನ್ನು ಅಧ್ಯಾರೋಪ ಮಾಡುತ್ತಾನೆ. ಇದರಿಂದ ಕಲಿಯುವುದೂ ನೆನಪಿನಲ್ಲಿಟ್ಟುಕೊಳ್ಳುವುದೂ ಸರಾಗವಾಗುತ್ತದೆ. ಏನೇ ಆಗಲಿ ಅರ್ಥಕ್ಕೂ ಸ್ಮೃತಿಗೂ ನಿಕಟಸಂಬಂಧವಿರುವುದು ಪ್ರಯೋಗಗಳಿಂದ ಸ್ಪಷ್ಟವಾಗಿದೆ.

ಮರವೆಗೆ ಮುಖ್ಯ ಕಾರಣ ಅಸ್ಪಷ್ಟವಾದ ಅನುಭವಮುದ್ರಿಕೆ. ನೋಡುವ ಅಥವಾ ಕೇಳುವ ವಿಚಾರದಲ್ಲಿ ಗಮನವಿಲ್ಲದಿದ್ದರೆ, ಆಸಕ್ತಿಯಿಲ್ಲದಿದ್ದರೆ ಅನುಭವದ ಜಾಡು ಮಾಸಲು ಮಾಸಲಾಗಿರುತ್ತದೆ; ಹೀಗಾದಾಗ ಮರವೆ ಈ ಜಾಡನ್ನು ಪೂರ್ಣವಾಗಿ ಅಳಿಸಿಬಿಡುತ್ತದೆ. ನಮ್ಮ ಚಿತ್ತಸ್ಥಿತಿ ಅಲ್ಲೋಲಕಲ್ಲೋಲವಾಗಿದ್ದಾಗ, ಭಾವಗಳ ಗೊಂದಲ ಅತಿಯಾಗಿದ್ದಾಗ, ಉದ್ವೇಗ-ಉದ್ರೇಕಗಳು ಜೀವಿಯನ್ನು ಬವಣೆಪಡಿಸುತ್ತಿದ್ದಾಗ ಆವರಣದ ಒಂದೇ ಭಾಗದಲ್ಲಿ, ಕೆಲವೇ ವಿವರಗಳಲ್ಲಿ ನಮ್ಮ ಅವಧಾನವೆಲ್ಲ ಪರ್ಯಾಪ್ತವಾಗಿರುತ್ತದೆ; ಅಂಥ ಸಮಯದಲ್ಲಿ ಉಳಿದ ವಿವರಗಳಮೇಲೆ ನಮ್ಮ ಗಮನ ಹರಿಯುವುದಿಲ್ಲ, ಹರಿದರೂ ನಿಲ್ಲುವುದಿಲ್ಲ. ಹೀಗಾಗಿ ಆ ವಿವರಗಳು ಕಂಡುಪಾದರೂ ನೆನಪಿನಲ್ಲಿರುವುದಿಲ್ಲ. ಹೀಗೆ ಅವಧಾನವಿಲ್ಲದ ಅನುಭವ ವಿಸ್ಮೃತವಾಗುವುದು ಒಂದು ಬಗೆಯಾದರೆ (anterograde amnesia), ಭಾವೋದ್ರೇಕಕ್ಕೆ ಅಲ್ಲೋಲಕಲ್ಲೋಲ ಪರಿಸ್ಥಿತಿಗೆ ಮೊದಲು ಒದಗಿದ ಅನುಭವಗಳೂ ವಿಸ್ಮೃತವಾಗುವುದು ಇನ್ನೊಂದು ಬಗೆ (retrograde amnesia). ಉದ್ರೇಕದಲ್ಲಿ ಇಡೀ ಜೀವ ಅಸ್ತವ್ಯಸ್ತವಾಗುತ್ತದೆ; ಅಶಾಂತವಾದ ನೆಲೆಯಲ್ಲಿ ಸ್ಥಿತಿ ಕ್ಲಿಷ್ಟವಾಗುತ್ತದೆ.

ಅನುಭವದ ಲಕ್ಷಣ, ಭಾವೋದ್ರೇಕಗಳು ವಿಸ್ಮೃತಿಗೆ ಕಾರಣವಾದಂತೆಯೇ ಕೇವಲ ಕಾಲವೂ ಕಾರಣವಾಗಬಹುದು; ಕಲಿತು ಬಹಳವೇಳೆಯಾದರೆ ಮರವೆಯುಂಟಾಗುವುದು ಸಹಜವಲ್ಲವೆ? ಅನುಭವಮುದ್ರಿಕೆಗಳನ್ನು, ಎಂದರೆ ವಾಸನೆಗಳನ್ನು, ಮತ್ತೆ

ಮತ್ತೆ ಬಳಸುತ್ತಿದ್ದರೆ ನೆನಪಿಗೆ ನೆರವಾಗುತ್ತದೆ; ಅವು ಬಳಕೆಯಲ್ಲಿರದಿದ್ದರೆ ಮರವೆಗೆ ತುತ್ತಾಗುತ್ತವೆ. ಒಬ್ಬ ವ್ಯಕ್ತಿಯನ್ನು ಪದೇ ಪದೇ ಕಾಣುತ್ತಿದ್ದರೆ ಅವನ ಹೆಸರು ಜ್ಞಾಪಕದಲ್ಲಿರುತ್ತದೆ, ಅವನನ್ನು ಕಂಡು ಬಹುಕಾಲವಾದರೆ ಮರೆತುಹೋಗುತ್ತದೆ. ಆದರೆ ಕಾಲವೊಂದೇ ವಿಸ್ಮೃತಿಗೆ ಕಾರಣ ಎನ್ನಲಾಗದು. ಈ ಕಾಲದಲ್ಲಿ ಏನು ನಡೆಯಿತು ಎನ್ನುವುದೂ ಗಮನಿಸಬೇಕಾದ ಅಂಶವೇ. ಕೆಲವು ಪ್ರಯೋಗಗಳಲ್ಲಿ ಒಂದು ಪಾಠವನ್ನು ಕಲಿತು ಅನಂತರ ಕೆಲಸದ ಜಂಜಡದಲ್ಲಿ ನಿರತನಾಗಿರುವಾಗ ನೆನಪು ಹೇಗಿರುತ್ತದೆ, ಪಾಠವನ್ನು ಕಲಿತೊಡನೆ ನಿದ್ದೆ ಮಾಡಿದವನ ನೆನಪು ಹೇಗಿರುತ್ತದೆ, ಎನ್ನುವುದನ್ನು ಅಧ್ಯಯನ ಮಾಡಿದ್ದಾರೆ. ಪಾಠ ಕಲಿತು ಕೆಲಸಮಾಡುತ್ತಿದ್ದು ಅಥವಾ ನಿದ್ದೆಮಾಡುತ್ತಿದ್ದು ಒಂದು ಘಂಟೆ, ಎರಡು ಘಂಟೆ, ನಾಲ್ಕು ಘಂಟೆ, ಎಂಟು ಘಂಟೆಗಳ ನಂತರ ಪರೀಕ್ಷೆಮಾಡಿದಾಗ, ನಿದ್ದೆಯಾದನಂತರ ಸ್ಮೃತಿ ಚೆನ್ನಾಗಿರುತ್ತಿದ್ದಿತೆಂದು ವ್ಯಕ್ತವಾಯಿತು. ಕಲಿತದ್ದು ಸಮಾನ ಕಷ್ಟದ ನಿರರ್ಥಕಶಬ್ದಪುಂಜಗಳು ; ಕಲಿತ ನಂತರ ಕೆಲಸಮಾಡತೊಡಗಿದರೆ ಮರೆಯುವ ಸಂಭವ ಹೆಚ್ಚು, ನಿದ್ರೆಮಾಡಿದರೆ ಕಲಿತದ್ದು ಉಳಿಯುತ್ತದೆ ಎನ್ನುವುದು ತಾತ್ಪರ್ಯ. ಎಚ್ಚರ ಇದ್ದಷ್ಟೂ ಮರವೆ ಹೆಚ್ಚು. ಕಲಿತು ಒಂದೇ ಘಂಟೆ ಎಚ್ಚರವಾಗಿದ್ದು ನಂತರ ಮಲಗಿಕೊಂಡರೆ ಎಷ್ಟು ಉಳಿತಾಯವೋ ಅಷ್ಟು ಎರಡು ಘಂಟೆ ಎಚ್ಚರವಾಗಿದ್ದಾಗ ಇರುವುದಿಲ್ಲ ; ನಾಲ್ಕು ಘಂಟೆ ಎಚ್ಚರದ ಅವಧಿಯಾದರೆ ನೆನಪು ಇನ್ನೂ ಕಮ್ಮಿ. ಈ ಪ್ರಯೋಗಗಳಿಂದ ಮರವೆಯ ಸ್ವರೂಪ ಸ್ಪಷ್ಟವಾಯಿತು. ಕಾಲಕ್ರಮದಲ್ಲಿ ಹಳೆಯ ಮುದ್ರಿಕೆಗಳು ನಶಿಸಿಹೋದರೇ ವಿಸ್ಮೃತಿ ಎನ್ನುವುದು ಸಾಮಾನ್ಯಕಲ್ಪನೆಯಷ್ಟೆ ; ಆದರೆ ಹಳೆಯ ಮುದ್ರಿಕೆಗಳ ಮೇಲೆ ಹೊಸಮುದ್ರಿಕೆಗಳು ಮೂಡಿಕೊಂಡು ಹಳೆಯವನ್ನು ತೊಡೆದುಹಾಕಿದಾಗ ವಿಸ್ಮೃತಿ ಎನ್ನುವುದು ಈ ಪ್ರಯೋಗಗಳಿಂದ ಸಿದ್ಧವಾಯಿತು.

೪

## ಸ್ಮೃತಿನಿರೋಧ

ವಿಸ್ಮೃತಿಯೆನ್ನುವುದು ತಾನಾಗಿ ನಡೆಯುವ ಸಹಜ ಕ್ರಿಯೆಯಾದರೆ ಸ್ಮೃತಿಯನ್ನು ನಿರೋಧ (inhibition) ಪಡಿಸುವಂಥ ಸಂದರ್ಭಗಳೂ ಪ್ರವೃತ್ತಿಗಳೂ ಉಂಟು. ಪ್ರಾಣಿ ಒಂದು ಕೆಲಸವನ್ನು ಕಲಿತೊಡನೆ ಅದಕ್ಕೆ ವಿದ್ಯುಚ್ಛಕ್ತಿಯ ಬಿಸಿಯನ್ನು ಮುಟ್ಟಿಸಿದರೆ ಅದು ಕಲಿತದ್ದೆಲ್ಲ ನಾಶವಾಗುತ್ತದೆ. ಕಲಿತೊಡನೆ ಕಲಿತದ್ದು ಬೇರೂರಲು ಸಮಯ ಬೇಕು ; ಈ ಕಾರಣದಿಂದಲೇ ನಿದ್ರೆ ಫಲಕಾರಿಯಾಗುತ್ತದೆ ಕಲಿತೊಡನೆ ಮತ್ತೊಂದು ಕೆಲಸ ಆರಂಭವಾದರೆ, ಅಥವಾ ಒಂದು ಪಾಠವನ್ನು ಕಲಿತು ಒಡನೆಯೇ ಮತ್ತೊಂದು ಪಾಠವನ್ನು ಕಲಿಯಲು ಆರಂಭಿಸಿದರೆ ಮೊದಲು ಕಲಿತದ್ದು ನಷ್ಟವಾಗುತ್ತದೆ; ಸ್ಮೃತಿ ಸಂಘಟಿತವಾಗಲು ಅವಕಾಶ ವಿರುವುದಿಲ್ಲ. ಈ ರೀತಿಯ ಹಾನಿಗೆ ನಿರೋಧವೆಂದು ಕರೆಯಬಹುದು. ಕಾಲೇಜು

ಹುಡುಗರ ಮೇಲೆ ಸ್ವಾರಸ್ಯವಾದ ಹಲವಾರು ಪ್ರಯೋಗಗಳನ್ನು ನಡೆಸಿದ್ದಾರೆ. ನಿರರ್ಥಕ ಪದಗಳನ್ನು ಅವರು ನಿರ್ದಿಷ್ಟಕಾಲದವರೆಗೆ ಕಲಿತು ಮುಗಿಸಿದನಂತರ ಅವರು ಕುಳಿತ ಕುರ್ಚಿಯನ್ನು ಬೀಳಿಸಿ, ಹಿಂದೆ ಪಿಸ್ತೂಲಿನ ಗುಂಡು ಹಾರಿಸಿ, ದೀಪಗಳನ್ನೆಲ್ಲ ಆರಿಸಿ ಕಗ್ಗತ್ತಲೆಯನ್ನು ಮಾಡಿ, ಸೂರಿನಿಂದ ಪಾತ್ರೆಪಡಗ ಬೀಳುವಂತೆ ಗಡಗಡ ಸದ್ದುಮಾಡಿ ಅವರನ್ನು ಬೆದರಿಸುವುದು ಒಂದು ಪ್ರಯೋಗ. ಈ ಗದ್ದಲ - ಗೊಂದಲ ಮುಗಿದೊಡನೆ ಕಲಿತ ಪದಗಳನ್ನು ಜ್ಞಾಪಿಸಿಕೊಳ್ಳುವಂತೆ ಹೇಳಿದಾಗ, ಅವರ ನೆನಪಿನಲ್ಲಿ ಉಳಿದಿದ್ದ ಪದಗಳು ಸ್ವಲ್ಪವೇ ಎನ್ನುವುದು ಸ್ಪಷ್ಟವಾಯಿತು. ಅಷ್ಟೇಕೆ, ಒಂದು ಪಾಠವನ್ನು ಕಲಿತು ಒಡನೆಯೇ ತಮಾಷೆಯಾಗಿ ನಗುತ್ತಿದ್ದು ಆಟವಾಡಿ ಬಿಟ್ಟರೆ ಕಲಿತ ಪಾಠವೆಲ್ಲ ಗಾಳಿಗೆ ಹೋದೀತು. ಈ ಬಗೆಯಲ್ಲಿ ಕಲಿತ ನಂತರ ಮಾಡಿದ ಕೆಲಸದಿಂದ ನೆನಪು ನಿರುದ್ಧವಾಗುವುದು ( retroactive inhibition ) ಅಭ್ಯಾಸ ಗಳಲ್ಲಿಯೂ ಕಾಣಬರುತ್ತದೆ. ಒಂದು ಅಭ್ಯಾಸ ಹಿಂದಿನ ಮತ್ತೊಂದು ಅಭ್ಯಾಸವನ್ನು ಅಡ್ಡಗಿಸುತ್ತದೆ.

ಆದರೆ ಮೊದಲು ಕಲಿತದ್ದಕ್ಕೂ ಅನಂತರ ಮಾಡುವ ಕೆಲಸಕ್ಕೂ ಸಂಬಂಧ ಅಥವಾ ಸಾದೃಶ್ಯವಿರದಿದ್ದರೆ ಈ ಬಗೆಯ ನಿರೋಧ ಒದಗಲಾರದು. ಕನ್ನಡದ ಪಾಠವನ್ನು ಕಲಿತೊಡನೆ ಮಗ್ಗಿಯನ್ನು ಕಲಿಯಲಾರಂಭಿಸಿದರೆ ಅದರಿಂದ ಕನ್ನಡದ ಪಾಠಕ್ಕೇನು ಕೊರತೆಯಿಲ್ಲ. ಒಂದು ಕನ್ನಡ ಪಾಠದ ನಂತರ ಮತ್ತೊಂದು ಕನ್ನಡಪಾಠ ಬಂದರೆ ಮೊದಲನೆಯ ಪಾಠ ನೆನಪಿನಲ್ಲಿ ನಿಲ್ಲುವುದು ಕಷ್ಟ. ಒಂದು ಪಾಠವನ್ನು ಕಲಿತು ಸ್ವಲ್ಪ ಸಮಯ ಬಿಟ್ಟು ಅನಂತರ ಮತ್ತೊಂದು ಪಾಠವನ್ನು ಕಲಿಯ ಲಾರಂಭಿಸಿದರೆ ಅದರಿಂದ ಅನುಕೂಲವಿದೆ; ಮೊದಲನೆಯ ಪಾಠ ಬೇರೂರಲು ಅವಕಾಶವಿರುತ್ತದೆ. ಯಾವುದನ್ನಾದರೂ ಕಲಿಯುವಾಗ ಹಳೆಯವನ್ನು ಮರತೇ ಹೊಸದಾದ ಪ್ರವೃತ್ತಿಗಳನ್ನು ಬೆಳೆಸಿಕೊಳುತ್ತೇವೆ. ಹಳೆಯವೂ ಹೊಸವೂ ಒಟ್ಟಿಗೆ ಇರುವಂಥ ಸಂದರ್ಭಗಳು ಕಡಿಮೆ. ಕಲಿಯು ವಾಗ ಮರವೆ ಹೀಗೆ ಇದ್ದೇ ಇರುತ್ತದೆ. ಹಳೆಯದು ಬೇರೂರಿದ್ದರೆ ಅದನ್ನು ಮರೆಯುವುದು ಕಷ್ಟ ; ಬೇರೂರಲು ಕಾಲಾವಕಾಶ ಬೇಕು. ಕಾಲಾವಕಾಶ ಕೊಡದೆ ಮತ್ತೆ ಕಲಿಯಲಾರಂಭಿಸಿದರೆ ಹಿಂದಿನದು ಉಳಿಯು ಲಾರದು. ಮರವೆಗೆ ಇದೇ ಮುಖ್ಯಕಾರಣ. ಕೆಲವೊಮ್ಮೆ ಭಾವೋದ್ರೇಕ ಅಥವಾ ಅಪಘಾತ ಒದಗಿ ಕಲಿತದ್ದನ್ನು ಅಳಿಸಿಬಿಡುವಾಗಲೂ ಇದೇ ನಿಯಮ ಕೆಲಸ ಮಾಡುತ್ತದೆ.

ಯಾವುದಾದರೂ ಹೊಸವಿಚಾರವನ್ನು ಕಲಿಯುವಾಗ, ಇದಕ್ಕಿಂತ ಮೊದಲು ನಡೆದ ಕೆಲಸ ಪ್ರಭಾವಶಾಲಿಯಾಗಿದ್ದರೆ ಈ ಕೆಲಸ ಹೊಸದಾಗಿ ಕಲಿತದ್ದನ್ನು ಉಳಿಸು ವುದಿಲ್ಲ. ಒಂದು ಪಾಠವನ್ನು ಚೆನ್ನಾಗಿ ಕಲಿತು ಒಡನೆಯೇ ಮತ್ತೊಂದು ಪಾಠವನ್ನು ಕಲಿಯಲಾರಂಭಿಸಿದರೆ ಎರಡನೆಯ ಪಾಠಕ್ಕೆ ನೆನಪಿನ ಪುಣ್ಯವಿರುವುದಿಲ್ಲ, ಮೊದಲು

ಕಲಿತದ್ದು ಮುಂದಿನ ಕಲಿಕೆಯಲ್ಲಿಯೂ ಮತ್ತೆ ಮತ್ತೆ ತಲೆಹಾಕುತ್ತಿರುತ್ತದೆ. ಎರಡು ಮೂರು ಪಾಠಗಳಲ್ಲಿನ ವಿವರಗಳನ್ನು ಕಲಬೆರಕೆ ಮಾಡಿ ವಿಧ್ಯಾರ್ಥಿ ಬರೆಯುವಾಗ ಈ ಬಗೆಯ ಸ್ಮೃತಿನಿರೋಧವೇ ಕಾರಣ. ಮೇಲಿನದಕ್ಕೆ ವಿರುದ್ಧವಾದ ಈ ಸ್ಮೃತಿನಿರೋಧ (proactive inhibition) ದಲ್ಲಿಯೂ ಎರಡು ಕಲಿಕೆಗಳ ಘರ್ಷಣೆಯಿರುತ್ತದೆ; ಇದು ಮರವೆಗೆ ನೆರವಾಗುತ್ತದೆ.

ಕೆಲವುವೇಳೆ ಕಲಿತದ್ದು ನೆನಪಿನಲ್ಲಿ ಮುದ್ರಿಕೆಗಳ ರೂಪದಲ್ಲಿ ಉಳಿದಿದ್ದರೂ, ಅನುಭವದ ವಾಸನೆ ಸಾಕಷ್ಟು ಸ್ಥಿರವಾಗಿದ್ದರೂ ಜ್ಞಾಪಿಸಿಕೊಳ್ಳುವುದು ಕಷ್ಟವಾಗುತ್ತದೆ. ಅನುಭವವು ಅಹಿತವಾಗಿದ್ದರೆ, ದಾರುಣವಾಗಿದ್ದರೆ ಅದನ್ನು ಮತ್ತೆ ನೆನಪಿಗೆ ತಂದುಕೊಳ್ಳುವುದು ಇಷ್ಟವಿಲ್ಲದ ಕೆಲಸ, ಆದರಿಂದ ಮನಸ್ಸಿಗೆ ದುಗುಡವಾಗುತ್ತದೆ, ಭಾರವಾಗುತ್ತದೆ,ಇಂಥ ದಾರುಣವಾದ ಅನಿಷ್ಟವಾದ ಅನುಭವಗಳು ನಮ್ಮ ಸುಪ್ತಚೇತನಕ್ಕೆ ಪ್ರವೇಶಿಸದಂತೆ ಅದುಮಿ ಹಿಡಿದಿಟ್ಟಿರುತ್ತದೆ (repressive forgetting); ಮರೆಯ ಬೇಕೆಂಬ ಬಯಕೆ ಅಥವಾ ತವಕವೇ ಈ ಮರವೆಗೆ ಕಾರಣ.

## ಪರಿಚ್ಛೇದ ಎಂಟು

# ಆಲೋಚನೆ, ಕಲ್ಪನೆ

೧

**ಆಲೋಚನೆಯ ಅಗತ್ಯವೇನು?**

ಮನುಷ್ಯನ ನೆಲೆಯಲ್ಲಿ ಮಸ್ತಿಷ್ಕ ಅಚ್ಚುಕಟ್ಟಾಗಿರುವುದರಿಂದ, ಪ್ರೌಢವಾಗಿರುವುದರಿಂದ ಆಲೋಚನೆ ಸಾಧ್ಯವಾಗಿದೆ. ಆವರಣದಿಂದ ಪ್ರಚೋದನೆ ಆಂತರಿಕವಾದ ಪ್ರವರ್ತನೆ ಇವುಗಳನ್ನವಲಂಬಿಸಿ ನೀಚವರ್ಗದ ಪ್ರಾಣಿ ತನ್ನ ಪ್ರತಿಕ್ರಿಯೆಯನ್ನು ಸಿದ್ಧಪಡಿಸಿಕೊಳ್ಳುತ್ತದೆ. ಪ್ರಚೋದನೆಗೂ ಪ್ರತಿಕ್ರಿಯೆಗೂ ಮಧ್ಯೆ ಯಾವ ವ್ಯಾಪಾರವೂ ನಡೆಯದಿದ್ದರೆ ಅದು ಪ್ರತಿಕ್ಷೇಪ; ಇಲ್ಲಿ ಪ್ರಾಣಿಗೆ ಪ್ರತ್ಯಕ್ಷ, ನಿರ್ಧಾರ, ಸಂಕಲ್ಪ, ಪೂರ್ವ ಸ್ಮೃತಿ ಇವುಗಳ ಸೌಲಭ್ಯವಿಲ್ಲ; ಬಲವಂತವಾಗಿ ಪ್ರಚೋದನೆ ಪ್ರತಿಕ್ರಿಯೆಯನ್ನು ಉಂಟುಮಾಡಿಸುತ್ತದೆ. ಆದರೆ ವಿಕಾಸಕ್ರಮದಲ್ಲಿ ಪ್ರಾಣಿ ಬೆಳೆದು ಬಂದಂತೆ ಸ್ವತಂತ್ರವಾಗಿ ವ್ಯವಹರಿಸುವ ಸಾಮರ್ಥ್ಯ ಒದಗಿಬರುತ್ತದೆ. ಆಗ ಆವರಣದಲ್ಲಿನ ಪ್ರಚೋದನೆಯನ್ನು ಪರಿಶೀಲಿಸಿ, ಪ್ರತಿಕ್ರಿಯೆಯ ಔಚಿತ್ಯವನ್ನು ಗಮನಿಸಿ, ಆವರಣಕ್ಕೂ ತನಗೂ ಹೊಂದಾಣಿಕೆಯನ್ನು ಕಲ್ಪಿಸುವ ಸೌಲಭ್ಯ ಪ್ರಾಣಿಗಿರುತ್ತದೆ. ನರಮಂಡಲದ ವ್ಯವಸ್ಥೆ, ಮಸ್ತಿಷ್ಕ, ಕಶೇರುಕ ಇವುಗಳ ಪ್ರೌಢಿಮೆ ಈ ಸೌಲಭ್ಯಕ್ಕೆ ಕಾರಣ. ನರಮಂಡಲದ ವ್ಯವಸ್ಥೆಯಲ್ಲಿ ಪಂಚೇದ್ರಿಯಗಳು ಮೈದಳೆದು ಆವರಣದ ವಿವಿಧ ವಿವರಗಳನ್ನು ಗ್ರಹಿಸುವುದಕ್ಕೆ ನೆರವಾಗುತ್ತವೆ. ಕರ್ಮೇಂದ್ರಿಯಗಳು

( ಕೈ, ಕಾಲು ಇತ್ಯಾದಿ ) ಮೈದಳೆದು ಪ್ರತಿಕ್ರಿಯೆಯನ್ನು ಪ್ರಭಾವಶಾಲಿಯಾಗಿ ಮಾಡಲು ನೆರವಾಗುತ್ತವೆ. ಆವರಣವನ್ನು ಅರಿಯುವುದು ಮತ್ತು ಕೆಲಸಮಾಡುವುದು ಇವುಗಳ ನಡುವೆ ಸಂಯೋಜನೆಯ, ನಿರ್ಧಾರದ, ಸಂಕಲ್ಪದ ಪಾತ್ರವನ್ನು ಮಸ್ತಿಷ್ಕ ವಹಿಸಿಕೊಳ್ಳುತ್ತದೆ. ಆವರಣದ ಅರಿವು ಸಂಪನ್ನವಾಗಬೇಕಾದರೆ ಇಂದ್ರಿಯಗಳಿಂದ ಸ್ವೀಕೃತವಾದ ವಿವರಗಳನ್ನು ಮನಸ್ಸು ತೀಡಿ, ತಿಕ್ಕಿ, ಹೆಣೆದು, ಕಡೆದು, ಕಲೆಸಿ, ಬೆರೆಸಿ, ಕುಗ್ಗಿಸಿ, ಹಿಗ್ಗಿಸಿ ಅರ್ಥನಿಷ್ಪತ್ತಿ ಮಾಡಬೇಕು. ಈ ಎಲ್ಲ ಕೆಲಸಗಳಿಗೂ ಒಂದು ಹೆಸರು ಆಲೋಚನೆ.

ಆಲೋಚನೆಯೆನ್ನುವ ಮಾತಿನಲ್ಲಿ ನೋಡುವುದು ಎನ್ನುವ ಅರ್ಥ ಕೂಡಿ ಕೊಂಡು ಬಂದಿದೆ. ಕಣ್ಣಿನಿಂದ ಕಾಣುವುದು ಇಂದ್ರಿಯವೇದನೆ ; ಮನಸ್ಸಿನಿಂದ ಕಾಣುವುದು ಆಲೋಚನೆ. ಕಣ್ಣಿನಿಂದ ಕಂಡ ವಿವರ ಹೊರಗಿನ ಜಗತ್ತಿಗೆ ಸಂಬಂಧ ಪಟ್ಟುದು ; ಇಂದ್ರಿಯ ಪ್ರವೃತ್ತಿಯಿಂದ ಬಾಹ್ಯವಿಷಯ ದೈಹಿಕವಿವರವಾಗಿ ನರ ಮಂಡಲವನ್ನು ಪ್ರವೇಶಿಸುತ್ತದೆ. ನರತಂತುಗಳಲ್ಲಿ ಮುದ್ರಿತವಾದ ಈ ವಿವರವು ಕಶೇರುಕವನ್ನು ಸೇರಿ ಮಸ್ತಿಷ್ಕಕ್ಕೆ ಹೋದಾಗ ಈ ದೈಹಿಕ ವಿವರದ ಮೇಲೆ ಅರ್ಥದ ಬೆಳಕು ಬೀಳುತ್ತದೆ ; ವಿಷಯದ ನೆಲೆ, ಹಿನ್ನೆಲೆ, ಸ್ವರೂಪ, ಸ್ವಭಾವ, ಅರ್ಥ, ಇಂಗಿತ ಎಲ್ಲವೂ ತಟ್ಟನೆ ತೋರಿಕೊಳ್ಳುತ್ತವೆ. ಸಂದರ್ಭ ಏನು, ವಿಷಯ ಎಂಥದು, ಪ್ರಚೋದನೆಯ ಅಗತ್ಯ ಏನು, ತನ್ನ ಸಾಮರ್ಥ್ಯ ಎಷ್ಟು, ಪ್ರತಿಕ್ರಿಯೆ ಹೇಗಿದ್ದರೆ ಫಲಕಾರಿಯಾದೀತು ಇವೆಲ್ಲ ವಿವರಗಳನ್ನೂ ಪ್ರಾಣಿ ಅರಿತುಕೊಳ್ಳುವುದು ಸಾಧ್ಯ ವಾಗುತ್ತವೆ. ಹೀಗೆ ಅರಿತುಕೊಳ್ಳುವುದು ಆಲೋಚನೆಯೆನಿಸಿಕೊಳ್ಳುತ್ತದೆ. ಆಲೋಚನೆ ಯಿಂದ ಮಾಡಿದ ಕೆಲಸ ಒಪ್ಪವಾಗಿರುತ್ತದೆ, ಪ್ರಯೋಜನಶಾಲಿಯಾಗಿರುತ್ತದೆ ; ಸಾರ್ಥಕವಾದ ಪ್ರತಿಕ್ರಿಯೆ ಹೊರಬರುತ್ತದೆ.

ಮನುಷ್ಯನಲ್ಲಿ ಈ ಶಕ್ತಿ, ಸೌಲಭ್ಯಗಳು ವಿಶೇಷವಾಗಿ ಕಾಣಿಸಿಕೊಂಡರೂ ಕೆಳವರ್ಗದ ಪ್ರಾಣಿಗಳಲ್ಲಿಯೂ ಇದು ಇಲ್ಲದೆ ಇಲ್ಲ. ಸಸ್ತನಿ ಜೀವಿಗಳಿಂದ ಆರಂಭಿಸಿ ಇದು ಬರುಬರುತ್ತ ಹೆಚ್ಚು ಹೆಚ್ಚು ಬೆಳಕಿಗೆ ಬರುತ್ತದೆ, ಅದರ ವ್ಯಾಪ್ತಿ ಹೆಚ್ಚುತ್ತದೆ ಕಪಿಗಳಲ್ಲಿಯೂ ವಾನರಗಳಲ್ಲಿಯೂ ಇದರ ಪ್ರಾಬಲ್ಯ ಹೆಚ್ಚಾಗಿ ಮನುಷ್ಯನಲ್ಲಿ ಪ್ರೌಢವಾಗುತ್ತದೆ. ಮನುಷ್ಯನಲ್ಲಿ ಆಲೋಚನೆ ವಿಕಸಿತವಾದಷ್ಟು ಉಳಿದ ಯಾವ ಪ್ರಾಣಿಯಲ್ಲಿಯೂ ಇಲ್ಲ. ಕೌಶಲವನ್ನು ಕಲಿಯುವ ಸೌಲಭ್ಯ, ಸ್ಮೃತಿ-ವಿಸ್ಮೃತಿ ಇವುಗಳ ಸಂಭವ ಇವೆರಡರ ಆಧಾರದ ಮೇಲೆ ಆಲೋಚನೆಯು ಮೈದಾಳಿ ಬೆಳೆದಿದೆ. ಮೇಲ್ತರದ ಪ್ರಾಣಿ ಹೊರ ಆವರಣದಲ್ಲಿ ಪ್ರಚೋದನೆ ಮರೆಯಾದಮೇಲೂ ಅದಕ್ಕನುರೂಪವಾದ ಪ್ರತಿಕ್ರಿಯೆಯನ್ನು ಮಾಡಬಲ್ಲದು ಎನ್ನುವುದನ್ನು ಹಿಂದಿನ ಪರಿಚ್ಛೇದದಲ್ಲಿ ಕಂಡಿದ್ದೇವಷ್ಟೆ. ಎಂದರೆ, ಸ್ಮೃತಿಯ ಅನುಕೂಲ್ಯದಿಂದ ತಡವಾದ ಪ್ರತಿಕ್ರಿಯೆ ಸಾಧ್ಯ. ಇಲ್ಲಿ ಪ್ರಾಣಿಯು ತನ್ನ ಮನಸ್ಸಿನ ನೆಲೆಯಲ್ಲಿ ಹೊರ ಪ್ರಚೋದನೆಯ ಆಂತರಿಕ ಪ್ರತೀಕವೊಂದನ್ನು ಕಲ್ಪಿಸಿಕೊಳ್ಳುತ್ತದೆ ; ತನ್ನ ವ್ಯವಹಾರಕ್ಕೆ

ಅನುಕೂಲವಾಗುವಂತೆ ಹೊರ ಆವರಣದ ಪ್ರತಿಕೃತಿಯೊಂದನ್ನು ತನ್ನಲ್ಲೇ ನಿರ್ಮಿಸಿ ಕೊಳ್ಳುವ ಸಾಮರ್ಥ್ಯವನ್ನು ಇಲ್ಲಿ ಕಾಣಬಹುದು. ಇದೇ ಸಾಮರ್ಥ್ಯ ಆಲೋಚನೆಗೆ ಮೂಲ; ಆಲೋಚನೆಯ ಪ್ರಯೋಜನವೂ ವ್ಯವಹಾರದಲ್ಲಿ ಕೌಶಲವನ್ನು ಸಾಧಿಸಿ ಕೊಳ್ಳುವುದೇ ಆಗಿದೆ. ಆಲೋಚನೆಯ ಸಂವಿಧಾನದಲ್ಲಿ ಸ್ವಕಲ್ಪಿತ ಪ್ರತೀಕಗಳ ಬಳಕೆಯಿರುವುದು ಮುಂದೆ ತಿಳಿಯುತ್ತದೆ.

ಆಲೋಚನೆಯಲ್ಲಿ ಭೂತಕಾಲ, ಭವಿಷ್ಯತ್ಕಾಲಗಳು ವರ್ತಮಾನದಲ್ಲಿ ಸೇರುತ್ತವೆ. ಎಂದರೆ ಹಿಂದೆ ನಡೆದುದನ್ನೂ ಮುಂದೆ ನಡೆಯಬೇಕಾದುದನ್ನೂ (ಅಥವಾ ನಡೆಯ ಬಹುದಾದುದನ್ನೂ) ಈಗಲೇ 'ಕಾಣುವುದು' ಇಲ್ಲಿ ನಡೆಯುವ ವ್ಯಾಪಾರ ವಿಶೇಷ. ಒಂದು ಸ್ಮೃತಿ, ಇನ್ನೊಂದು ಭಾವನೆ ಅಥವಾ ಊಹೆ. ಅನುಭವಗಳು ಮರೆಯಾದರೂ ಅವುಗಳ ವಾಸನೆಯನ್ನು ಹಿಡಿದಿಟ್ಟುಕೊಂಡಿರುವುದು ಸ್ಮೃತಿಯಲ್ಲವೆ? ಇದರಿಂದ ಜೀವಿಯ ವ್ಯವಹಾರದ ನೆಲೆ ಮಾರ್ಪಟ್ಟಿರುತ್ತದೆಯಷ್ಟೆ; ಇದನ್ನೇ ನಾವು ಕಲಿಕೆ ಯೆನ್ನುವುದು. ಇವರ ಆಧಾರದ ಮೇಲೆ ಮನಸ್ಸು ಇನ್ನೂ ಇಲ್ಲದಿರುವ ವಿಷಯಗಳ ಕಡೆ ಮೈಚಾಚಿ ನಿಲ್ಲುವುದು ಭಾವನೆ; ಇಲ್ಲಿ ಮುಂಬರುವ ಅನುಭವಗಳ ಪರಿಕಲ್ಪಿತ ಚಿತ್ರಗಳಿರುತ್ತವೆ (images). ಈ ಭವಿಷ್ಯ ಚಿತ್ರಗಳ ಕಲ್ಪನೆಯೇ, ಸೃಷ್ಟಿಯೇ, ಭಾವನೆ (imagination) ಎನಿಸಿಕೊಳ್ಳುತ್ತದೆ. ಭಾವನೆ ಎನ್ನುವ ಸಂಸ್ಕೃತ ಪದದ ಧಾತು 'ಭೂ', ಎಂದರೆ ಆಗು; ಕಾರಕಾರ್ಥದಲ್ಲಿ ಭಾವನೆಯೆಂದರೆ 'ಆಗುವಂತೆ ಮಾಡಿಸುವುದು'. ಮುಂದಿನ ಚಿತ್ರಗಳು ಈಗಲೇ ಒದಗುವಂತೆ ಮಾಡುವುದೇ ಭಾವನೆ; ಮುನ್ನೋಟ ಎನ್ನಬಹುದು. ಸ್ಮೃತಿ, ಭಾವನೆ ಎರಡೂ ನೋಟಗಳೇ; ಆವರಣದ ವಿವರಗಳ ಚಿತ್ರಗಳನ್ನು ಪ್ರಾಣಿಗೆ ಎರಡೂ ಒದಗಿಸುತ್ತವೆ. ಇವೆರಡೂ ಆಲೋಚನೆಯ ಎರಡು ಮುಖಗಳು.

೨

## ಆಲೋಚನೆಯ ಪ್ರಕಾರಗಳು

ಆಲೋಚನೆಯಲ್ಲಿ ಹಲವಾರು ವಿಶಿಷ್ಟ ಪ್ರಕಾರಗಳುಂಟು. ಪೂರ್ವ ಪಕ್ಷವನ್ನು ಪರಿಶೀಲನೆ ಮಾಡಿ, ಪೂರ್ವಾಪರವನ್ನು ವಿವೇಚಿಸಿ, ಯುಕ್ತಿ ಯುಕ್ತವಾದ ವಿಚಾರ ಧಾರೆಯನ್ನು ಒದಗಿಸುವ, 'ಅನುಮಾನಾತ್ಮಕ' ವಾದ ಆಲೋಚನಾಸರಣಿ ಒಂದು ಪ್ರಕಾರ. ಇದನ್ನು ಹೇತು ಕ್ರಮ (reasoning), ಅಥವಾ ತಾರ್ಕಿಕ ಅನುಮಾನ (logical inference) ಎನ್ನಬಹುದು. ಇದು ಕೇವಲ ತರ್ಕಶಾಸ್ತ್ರದಲ್ಲಿ ಮಾತ್ರ ಬಳಕೆಗೆ ಬರುವ ಒಂದು ವಿಧಾನ ಎಂದು ಬಗೆಯಬಾರದು. ದಿನದಿನದ ವ್ಯವಹಾರದಲ್ಲಿ ನಾವು ಅನುಸರಿಸುವ ವಿಧಾನವೇ ಇದು. ಹೊರಗೆ ಹೊರಡುವಾಗ ಮೇಲೆ ನೋಡಿ ಕೊಡೆಯನ್ನು ಹಿಡಿದು ಹೊರಟಾಗ ನಾವು ಮಾಡುವುದು ತಾರ್ಕಿಕಾನುಮಾನವೇ; ಮೋಡ ಇರುವ ಬಗೆಯನ್ನು ನೋಡಿ ಮಳೆ ಬಂದೀತು ಎಂದು ಊಹಿಸುವೆವಷ್ಟೆ?

ಅನುಮಾನವಲ್ಲದೆ ಸ್ವಚ್ಛಂದ ಚಿಂತನೆ (reverie), ಅದ್ಭುತ ಕಲ್ಪನೆ (fantasy), ದಿವಾಸ್ವಪ್ನ (day-dreaming) ಇವೂ ಆಲೋಚನೆಯ ಪ್ರಕಾರಗಳೇ.

ಸ್ವಚ್ಛಂದ ಚಿಂತನೆಯಲ್ಲಿ ನಾವು ಸುಖವಾಗಿ ಕೂತು ಅಡ್ಡಿ-ಆತಂಕವಿಲ್ಲದೆ ನಮ್ಮದೇ ಆದ ವಿಚಾರಲಹರಿಯನ್ನು ಹರಿಯ ಬಿಡುತ್ತೇವೆ. ತಾರ್ಕಿಕಾನುಮಾನದಲ್ಲಿರುವಂತೆ ಪೂರ್ವನಿರ್ದಿಷ್ಟ ನಿಯಮಾನುಸಾರವಾಗಿ ಭಾವನೆಗಳನ್ನು ಹೆಜ್ಜೆಹೆಜ್ಜೆಗೆ ಪರೀಕ್ಷಿಮಾಡಿ, ಸುಸಂಬದ್ಧವಾಗಿರುವಂತೆಯೂ ಸುವ್ಯವಸ್ಥಿತವಾಗಿರುವಂತೆಯೂ ನಿಯಮನ ಮಾಡುವ ಪ್ರವೃತ್ತಿ ಇರುವುದಿಲ್ಲ. ಭಾವನೆಗಳು ಒಂದಾದಮೇಲೊಂದು ಗೊತ್ತುಗುರಿಯಿಲ್ಲದೆ ಆಡರಿಬರುವುದು ಸ್ವಚ್ಛಂದ ಚಿಂತನದ ಲಕ್ಷಣ ; ಅವುಗಳು ಬರುವಾಗ ನಿರ್ದಿಷ್ಟವಾದ ಕ್ರಮವೇನು ಕಾಣುವುದಿಲ್ಲ ; ಪಾರಂಪರ್ಯಗತಿಯೇನು ಅಗತ್ಯವೆನಿಸುವುದಿಲ್ಲ. ಅನುಮಾನದಲ್ಲಿಯಾದರೆ ಸಮಸ್ಯೆಯೊಂದರಿಂದ ಆಲೋಚನೆಯ ತರಂಗಗಳು ಹುಟ್ಟಿ ಕೊಂಡು ಸಮಸ್ಯಾಪೂರಣದಲ್ಲಿ ಮುಗಿಯುತ್ತವೆ. ಆದರೆ ಇಲ್ಲಿ ಇಂಥ ಸಮಸ್ಯೆಯೇನು ಇರಲೇಬೇಕಾಗಿಲ್ಲ; ಯಾವ ಸಮಸ್ಯೆಯ ಪರಿಹಾರದ ಪ್ರಯೋಜನವೂ ಇರುವ ಅಗತ್ಯವಿಲ್ಲ. ಎಂದರೆ ಆಲೋಚನೆಗಳ ಸುಗ್ಗಾಟದಲ್ಲಿ ಯಾವ ಕ್ರಮವೂ ಇರಲಾರದು : ಭಾವನೆಗಳು ಸ್ವೇಚ್ಛೆಯಾಗಿ ಒದಗುತ್ತವೆ. ಇದರಲ್ಲಿ ಯಾವ ನಿರ್ದಿಷ್ಟವಸ್ತುವೂ ಇರುವುದಿಲ್ಲ; ಇಂಥದನ್ನೇ ಕುರಿತು ಆಲೋಚಿಸಬೇಕೆಂಬ ನಿರ್ಬಂಧ ಇಲ್ಲ. ಒಂದು ಭಾವನೆಗೂ ಇನ್ನೊಂದು ಭಾವನೆಗೂ ಯಾವ ಸಂಬಂಧವೂ ಇರಬೇಕಾದುದಿಲ್ಲ. ತಾರ್ಕಿಕಾನುಮಾನವು ಈ ಎಲ್ಲ ವಿವರಗಳಲ್ಲಿಯೂ ಇದಕ್ಕೆ ವಿರುದ್ಧವಾದುದಲ್ಲವೆ ?

ಅದ್ಭುತಕಲ್ಪನೆ ಕನಸಿನಂತೆ ; ವಸ್ತುಸ್ಥಿತಿಯನ್ನು ಅವಲಂಬಿಸಿಯೇ ಇರ ಬೇಕೆನ್ನುವ ನಿಯಮ ಎರಡರಲ್ಲಿಯೂ ಇಲ್ಲ. ವಾಸ್ತವಿಕ ಪ್ರಪಂಚದ ಇತಿಮಿತಿಗಳನ್ನು ಮೀರಿ, ಸಂಭವನೀಯ ಅಥವಾ ಅಸಂಭಾವ್ಯ ಎನ್ನುವ ಪರಿಗಣನೆಯಿಲ್ಲದೆ, ಸ್ವಂತ ಸಂತೋಷವೇ ಮುಖ್ಯ ಪ್ರಯೋಜನವಾಗಿ ಇರುವ ಆಲೋಚನಾ ಪ್ರಕಾರವೇ ಅದ್ಭುತ ಕಲ್ಪನೆ. ಇಲ್ಲಿನ ಭಾವನೆಗಳೆಲ್ಲ ಪರಿಕಲ್ಪಿತವೇ ; ಇವು ವ್ಯಕ್ತಿಯ ಮನೋವೃತ್ತಿಯನ್ನು, ಪ್ರವೃತ್ತಿಯನ್ನು ಅವಲಂಬಿಸಿರುವುವೇ ವಿನಾ ಹೊರಗಿನ ವಸ್ತುಗಳನ್ನಾಗಲೀ ವ್ಯವಹಾರಗಳನ್ನಾಗಲೀ ಅವಲಂಬಿಸಿರುವುದಿಲ್ಲ ; ವಸ್ತುತಂತ್ರವಲ್ಲ, ಪುರುಷತಂತ್ರ. ಕನಸಿಗಿರುವಂತೆ ಅದ್ಭುತಕಲ್ಪನೆಗೂ ಬಗೆಹರಿಯದ ಯಾವುದೋ ಸಮಸ್ಯೆಯೇ ಮೂಲವಾಗಿರುವುದೆಂದು ಸ್ಪಷ್ಟವಾಗಿದೆ. ಯಾವುದಾದರೂ ಪ್ರಶ್ನೆ ತಲೆಯನ್ನು ಕಾಡುತ್ತಿದ್ದರೆ, ಕೆಲವು ವೇಳೆ ಮಲಗಿ ನಿದ್ದೆಮಾಡುವಾಗ ಈ ಪ್ರಶ್ನೆಗೆ ಒಂದು ಬಗೆಯ ಉತ್ತರ ದೊರೆಯುತ್ತದೆ ; ಆಕಾಂಕ್ಷೆಯಿದ್ದರೆ ಅದು ತೀರುತ್ತದೆ, ಚಿಂತೆ ಇದ್ದರೆ ಅದು ಪರಿಯುತ್ತದೆ. ಎಚ್ಚರವಾದಾಗ ಒಂದು ಬಯಕೆ ತಲೆದೋರಿ ಅದು ನಿಜವಾಗಿ ಕೈಕೂಡುವುದು ಕಷ್ಟವೆನಿಸಿದಾಗ, ಅಸಾಧ್ಯವೆನಿಸಿದಾಗ ರಾತ್ರಿ ನಿದ್ರೆಯಲ್ಲಿ ಇದು ಕೈಗೂಡಿ ಮನಸ್ಸಿಗೆ ಅಷ್ಟಿಷ್ಟು ನೆಮ್ಮದಿಯನ್ನು ತರುತ್ತದೆ. ಕನಸು ಒಂದು ಮನೋರಥ

ಪೂರಣಸಂವಿಧಾನ. ಹಾಗೆಯೇ ಅದ್ಭುತ ಕಲ್ಪನೆಯೂ. ನಿಜವಾಗಿ ನಡೆಯಲಾರದು ದನ್ನು ಮನುಷ್ಯ ತನ್ನ ಮನಸ್ಸಿನ ಗಾಳಿಗೋಪುರದಲ್ಲಿ ನಡೆಸಿ ತೃಪ್ತಿಪಟ್ಟುಕೊಳ್ಳುತ್ತಾನೆ. ನಿಜವಾಗಿ ಆಗಬಹುದೇ, ಆದೀತೇ ಎನ್ನುವ ಚಿಂತೆ ಅವನನ್ನು ಕಾಡುವುದಿಲ್ಲ. ಬಾಹ್ಯ ಜಗತ್ತಿನ ವ್ಯವಹಾರ ಕ್ರಮಕ್ಕೆ ಅವನ ಕಲ್ಪನೆಯೇನು ಕಟ್ಟುಬಿದ್ದಿದ್ದಲ್ಲ, ಹಾಗೆಂದೇ ಅದು ಅದ್ಭುತ, ಆದರೂ ಅವನ ಪಾಲಿಗೇನು ಅಸಂಭವವಲ್ಲ. ಅವನದ್ದು ಕಲ್ಪನಾ ಪ್ರಪಂಚವಲ್ಲವೆ ? ಇಲ್ಲಿನ ನೀತಿ ನಿಯಮಗಳೇ ಬೇರೆ. ಸುಪ್ತಕಾಮನೆಗಳು ವಾಸ್ತವ ಜಗತ್ತನ್ನು ಬಳಸಿ ಅಥವಾ ಅತಿಕ್ರಮಿಸಿ ಶಂತಮ್ಮ ಸಾರ್ಥಕತೆಯನ್ನು ಗಳಿಸಿಕೊಂಡು ಸಮಾಧಾನವನ್ನು ವ್ಯಕ್ತಿಗೆ ತಂದುಕೊಡುವುದೇ ಇಲ್ಲಿನ ನಿಯಮ ; ಇಲ್ಲಿನ ಒಂದೊಂದು ಕಲ್ಪನೆಯೂ ಸಾಂಕೇತಿಕ, ಚಿತ್ತವೃತ್ತಿಯ ದೃಷ್ಟಿಯಿಂದ ಅರ್ಥಪೂರ್ಣ.

ಕನಸಿನಲ್ಲಿಯೂ ಇಂಥ ಅದ್ಭುತ ಕಲ್ಪನೆಗಳೇ ಸಾಮಗ್ರಿಯನ್ನು ಒದಗಿಸುತ್ತವೆ. ಪೇಚಿಗೆ ಸಿಕ್ಕಿಕೊಂಡಾಗ, ಮಗುಡವಿದ್ದಾಗ, ಏನು ಮಾಡುವುದೆಂದು ತಿಳಿಯದಾದಾಗ ಕನಸು ನಮ್ಮ ನೆರವಿಗೆ ಬರುತ್ತದೆ ; ಈ ಕ್ಲೇಶವನ್ನು ಕನಸಿನ ಅಭಿವ್ಯಕ್ತಿಯಲ್ಲಿ ಹೊರಗೆ ಹಾಕಿ ಸಮಾಧಾನವನ್ನು ಪಡೆಯುತ್ತೇವೆ. ದಿವಾಸ್ವಪ್ನವೆಂದರೆ ಹಗಲುಕನಸು. ನಿದ್ರೆಯಲ್ಲಿ ಕಾಣುವ ಕನಸು ಯಾವುದೋ ತೊಡಕನ್ನು ಸುಪ್ತಚೇತನದ ಮಟ್ಟಿಗೆ ಪರಿಹರಿಸುವಂತೆಯೇ ಹಗಲಿನಲ್ಲಿನ ಕನಸೂ ತೊಡಕನ್ನು ಬಿಡಿಸಿ ನಮಗೆ ಸಮಾಧಾನವನ್ನು ತರುತ್ತವೆ. ಕನಸಿನಲ್ಲಿ ಸಮಸ್ಯಾಪರಿಹಾರ ವಾಸ್ತವಿಕವಲ್ಲ, ಕಾಲ್ಪನಿಕವಷ್ಟೆ. ಸಮಸ್ಯೆಯ ಪರಿಹಾರ ನಿಜವಾಗಿ ನಡೆಯಿತೆಂದಲ್ಲ, ಆದರಿಂದ ಉಂಟಾಗಿದ್ದ ದುಗುಡ ಸ್ವಲ್ಪಮಟ್ಟಿಗೆ ಇಳಿಯಿತೆಂದರ್ಥ. ಹಗಲುಕನಸಿನ ಪ್ರಯೋಜನವೂ ಇದೇ. ವಸ್ತುಸ್ಥಿತಿಯನ್ನು ಎದುರಿಸುವುದು ಸಾಧ್ಯವಿಲ್ಲದಾಗ ಅಥವಾ ದುಸ್ತರವಾದಾಗ ಏಕಾಂತದಲ್ಲಿ ಕುಳಿತು ನಮ್ಮಮಟ್ಟಿಗೆ ಯಾವುದೋ ಸುಖಸಾಮ್ರಾಜ್ಯವನ್ನು ಕಟ್ಟಿಕೊಂಡು ಅದರಿಂದ ಸಮಾಧಾನವನ್ನು ಪಡೆಯುತ್ತೇವೆ. ಇಲ್ಲಿಯೂ ಆಲೋಚನೆಗಳಿಗೆ ತರ್ಕದ ಮಿತಿ ಯಾಗಲೀ, ಸಂಭಾವ್ಯತೆಯ ಅಂಕೆಯಾಗಲೀ ಇರುವುದಿಲ್ಲ. ಸ್ವಚ್ಛಂದ ಕಲ್ಪನೆಯಲ್ಲಿ ಹಿಂದಿನ ಅನುಭವಗಳನ್ನು ಮೆಲುಕು ಹಾಕುತ್ತ, ಪೂರ್ವಾನುಸ್ಮೃತಿಯನ್ನು ಸವಿಯುವ ಮನೋಧರ್ಮ ಇದ್ದರೆ ಹಗಲುಕನಸಿನಲ್ಲಿ ಮುಂದೆ ಬರಬಹುದಾದ ( ಬರಬೇಕಾದ ) ಸಂತೋಷಸಂದರ್ಭಗಳ ಸುಖಾನುಭವವನ್ನು ಕಲ್ಪಿಸಿಕೊಂಡು ಅದನ್ನು ಈಗಲೇ ಸವಿಯುವಮನೋಧರ್ಮ ಇರುತ್ತದೆ. ಎರಡೂ ವ್ಯವಹಾರಕ್ಕೆ ದೂರವೇ! ಕನಸಿನಲ್ಲಿ ಹಸು ಕರೆದ ಹಾಲನ್ನು ಎಚ್ಚರವಾದಾಗ ಕುಡಿಯುವುದು ಸಾಧ್ಯವೆ ? ಕನಸಿನಲ್ಲೇ ಕುಡಿದು ಕನಸಿನಲ್ಲೇ ಹೊಟ್ಟೆ ತುಂಬಿಸಿಕೊಳ್ಳಬೇಕು. ಎಚ್ಚರವಾದಾಗಲೂ ಇದರ ಗೀಳನ್ನೇ ಹಚ್ಚಿಕೊಂಡರೆ ಅತೃಪ್ತಿ, ನಿರಾಶೆ, ಉದ್ವೇಗ ಹೆಚ್ಚುತ್ತದೆ. ಈ ಆಲೋಚನೆಯ ಇಂಥ ಪ್ರಕಾರಗಳು ಮನೋರೋಗಗಳಾಗಿ ಕಾಣಿಸಿಕೊಳ್ಳುವುದು, ವಾಸ್ತವಪ್ರಪಂಚಕ್ಕೂ ಕಾಲ್ಪನಿಕಪ್ರಪಂಚಕ್ಕೂ ಭೇದವನ್ನು ಕಂಡುಕೊಳ್ಳದೆ ಇರುವಾಗ, ಕಲ್ಪನೆಯೇ ನಿಜ ಎಂದು ಭ್ರಮಿಸುವಾಗ.

೩

## ತಾರ್ಕಿಕಾನುಮಾನ

ಹೇತುಕ್ರಮ ಅಥವಾ ತಾರ್ಕಿಕಾನುಮಾನ ಮನುಷ್ಯರ ನೆಲೆಯಲ್ಲಿ ತುಂಬ ಮುಖ್ಯವಾದ ವ್ಯಾಪಾರವಿಶೇಷ. ಇದು ಕೆಳವರ್ಗದ ಪ್ರಾಣಿಗಳಲ್ಲಿಯೂ ಮಕ್ಕಳಲ್ಲಿಯೂ ಅಸ್ಪಷ್ಟವಾಗಿ ಕಂಡುಬರುತ್ತದೆ. ಪ್ರಾಣಿಗಳು ತಮ್ಮ ಹಿಂದಿನ ಅನುಭವಗಳ ಆಧಾರದ ಮೇಲೆ ಸಮಸ್ಯೆಯೊಂದನ್ನು ಬಗೆಹರಿಸುವುದು ಪ್ರಯೋಗಗಳಿಂದ ಸಿದ್ಧವಾಗಿದೆ. ಎದುರಿಗಿರುವ ಪ್ರಚೋದನೆಗೆ ಮಾತ್ರವೇ ಗಮನವನ್ನು ಕೊಟ್ಟು ಅದರಿಂದ ಪ್ರತಿಕ್ರಿಯೆಯನ್ನು ಅಳವಡಿಸಿಕೊಂಡರೆ ಅಲ್ಲಿ ಆಲೋಚನಾಸಾಮರ್ಥ್ಯವಿಲ್ಲ. ದಿಟವಾದ ಪ್ರಚೋದನೆಗೆ ಆಂತರಿಕವಾದ ಸಂಕೇತವೊಂದನ್ನು ಪ್ರಾಣಿ ಕಲ್ಪಿಸಿಕೊಳ್ಳುವಂತಾದರೆ ಮಾತ್ರ ಆಲೋಚನೆ ಸಾಧ್ಯ. ಮಸ್ತಿಷ್ಕದ ವಿಕಾಸವನ್ನು ಅವಲಂಬಿಸಿದ ಸಾಮರ್ಥ್ಯ ಇದು ಎಂದು ಹಿಂದೆಯೇ ಹೇಳಿದೆವಷ್ಟೆ. ಪ್ರಯತ್ನ ಮತ್ತು ಸ್ಖಾಲಿತ್ಯದ ಪದ್ಧತಿಯನ್ನೇ ಹಿಡಿದ ಪ್ರಾಣಿಗಳು ಈ ಸಾಮರ್ಥ್ಯವನ್ನು ಅಷ್ಟಾಗಿ ಪಡೆದಿರಲಾರವು. ಸಂದರ್ಭದ ಅರ್ಥನಿಷ್ಪತ್ತಿಯಾಗಿ ಅಂತರ್ದೃಷ್ಟಿ (insight) ಯ ನೆರವನ್ನು ಹೊಂದಿದ ಮೇಲ್ತರದ ಪ್ರಾಣಿಗಳು ಆಲೋಚನಾ-ಪ್ರಮುಖವಾಗಿ ಕಲಿಕೆಯನ್ನು ನಿರ್ವಹಿಸುತ್ತವೆ.

ವಿಲ್ಹೆಲ್ಮ್ ಕೊಯ್ಲೆರ್ ಎನ್ನುವ ಜರ್ಮನ್ ವಿಜ್ಞಾನಿ ವಾನರಗಳ ಮೇಲೆ ನಡೆಸಿದ ಪ್ರಯೋಗವೊಂದರಲ್ಲಿ ಅಂತರ್ದೃಷ್ಟಿ ಸ್ಪಷ್ಟವಾಯಿತು. ವಾನರವೊಂದನ್ನು ಪಂಜರದಲ್ಲಿಟ್ಟು, ಪಂಜರದ ಸೂರಿಗೆ ಬಾಳೆಹಣ್ಣಿನ ಗೊನೆಯೊಂದನ್ನು ಕಟ್ಟಿದ್ದರು ; ವಾನರ ಏನು ಮಾಡಿದರೂ ನೇರವಾಗಿ ಬಾಳೆಗೊನೆಯನ್ನು ಮುಟ್ಟಲಾಗದಷ್ಟು ಎತ್ತರದಲ್ಲಿದ್ದಿತು. ಪಂಜರದ ನೆಲದ ಮೇಲೆ ಕಡ್ಡಿಯೊಂದಿತ್ತು. ವಾನರ ಬಾಳೆಹಣ್ಣನ್ನು ಪಡೆಯಲು ಹಾರಿ, ಕೈಚಾಚಿ, ಕುಣಿದು, ಕುಪ್ಪಳಿಸಿ ವಿಫಲವಾಯಿತು. ಚಿಂತಾ ಕ್ರಾಂತವಾದಂತೆ ತೆಪ್ಪನೆ ನೆಲವನ್ನೇ ದಿಟ್ಟಿಸಿ ನೋಡುತ್ತ ಕುಳಿತುಬಿಟ್ಟಿತು. ಆಗ ಇದ್ದಕ್ಕಿದ್ದಂತೆ ಅದರ ದೃಷ್ಟಿ ಕೆಳಗೆ ಬಿದ್ದಿದ್ದ ಕೋಲಿನಮೇಲೆ ಹರಿಯಿತು. ಒಡನೆಯೇ ಕಪಿ ಈ ಕೋಲನ್ನೆತ್ತಿಕೊಂಡು ಬಾಳೆಹಣ್ಣಿನ ಗೊನೆಗೆ ಹೊಡೆದು ಹಣ್ಣುಗಳನ್ನು ಕೆಳಗುರುಳಿಸಿ ತಿಂದಿತು. ಇದು ಪ್ರಯತ್ನ - ಸ್ಖಾಲಿತ್ಯದ ಪದ್ಧತಿಯಲ್ಲ. ವಾನರಕ್ಕೆ ಸಂದರ್ಭದ ಅಗತ್ಯದ ಅರಿವಾಗಿ ಈ ಕಡ್ಡಿ ಸಾಧನವಾಗಬಹುದೆಂಬ ಮನಃಪ್ರತ್ಯಕ್ಷವಾಯಿತು. ಮೊದಲು ಬರಿಯ ಕಡ್ಡಿಯಾಗಿದ್ದುದು ಈ ಸಂದರ್ಭದಲ್ಲಿ ಹಣ್ಣನ್ನು ಪಡೆಯುವ ಸಾಧನವಾಯಿತು. ಹೀಗೆ ವಸ್ತುಗಳಿಗೆ ಉಪಯೋಗದ ಮೌಲ್ಯಗಳನ್ನು ಹಚ್ಚುವುದು ಆಲೋಚನೆಯ ಸಾಮರ್ಥ್ಯವೇ. ಎರಡು ಸಣ್ಣ ಕಡ್ಡಿಗಳನ್ನು ಸೇರಿಸಿ ಒಂದು ದೊಡ್ಡಕಡ್ಡಿಯಾಗಿ ಮಾರ್ಪಡಿಸಿದ ವಾನರವೂ ಕೊಯ್ಲರ್‌ನ ಪ್ರಯೋಗದಿಂದ ಪ್ರಸಿದ್ಧಿಯನ್ನು ಪಡೆದಿದೆ. ಇಲ್ಲಿ ಸ್ವತಃ ಅರ್ಥವಿಲ್ಲದ

ವಸ್ತುಗಳಿಗೆ ಅರ್ಥವನ್ನು (ಎಂದರೆ ಮೌಲ್ಯವನ್ನು) ಸಿದ್ಧಪಡಿಸುವ ಸಾಮರ್ಥ್ಯವಲ್ಲದೆ, ಮೌಲ್ಯದ ಆಧಾರದ ಮೇಲೆ ವಸ್ತುವನ್ನೇ ನಿರ್ಮಿಸುವ ಶಕ್ತಿ ಬಯಲಿಗೆ ಬಂದಿತು. ಇದೂ ಊಹಾಕ್ರಮದ ವ್ಯಾಪ್ತಿಯಲ್ಲಿ ಬರುವ ವಿವರವೇ.

ಮನುಷ್ಯರಲ್ಲಿ ಊಹಾಕ್ರಮದ ಪಾತ್ರವೇನೆಂದು ನಿರ್ಧರಿಸಲು ಹಲವಾರು ಪ್ರಯೋಗಗಳಿವೆ. ವಾನರದ ನೆಲೆಯಲ್ಲಿ ಸಮಸ್ಯೆ ಸುಲಭವಾದುದು; ಮನುಷ್ಯ ವ್ಯವಹಾರದಲ್ಲಿ ಸಮಸ್ಯೆಗಳೆಲ್ಲ ಜಟಿಲ, ಕ್ಲಿಷ್ಟ. ಇದಕ್ಕೆ ಅಗತ್ಯವಾದ ಆಲೋಚನಾ ಪ್ರೌಢಿಮೆಯನ್ನು ಅಳೆಯುವುದು ಕಷ್ಟ. ಆದರೂ ಅನೇಕ - ವರಣ - ಪದ್ಧತಿ (multiple choice method) ಯಲ್ಲಿ ಸಮಸ್ಯೆಯೊಂದಕ್ಕೆ ನಾಲ್ಕಾರು ಪರಿಹಾರಗಳೂ ಒಂದೇ ಅತ್ಯಂತ ಸಮರ್ಪಕ ಪರಿಹಾರವೂ ಇರುವಾಗ ವ್ಯಕ್ತಿ ಈ ಅತ್ಯಂತ ಸಮರ್ಪಕವಾದ ಪರಿಹಾರವನ್ನು ಕಂಡುಹಿಡಿಯುವಂತೆ ಪ್ರೇರೇಪಿಸಿ ಅದನ್ನು ಅಳೆಯಲೆತ್ನಿಸುತ್ತಾರೆ. ನಿತ್ಯಜೀವನದಲ್ಲಿ ಒಂದೇ ಸಮಸ್ಯೆಗೆ ಹತ್ತಾರು ಪರಿಹಾರಗಳಿದ್ದಾವು; ಆದರೆ ಎಲ್ಲವೂ ಸಮಾನವಾಗಿ ಸಮಾಧಾನಕರವಲ್ಲ. ಇವುಗಳಲ್ಲಿ ಸಂದರ್ಭಕ್ಕೆ ಸೂಕ್ತವಾದುದು ಯಾವುದು, ಅತ್ಯಲ್ಪ ದೇಹಶ್ರಮದಿಂದಲೂ ತೊಂದರೆಯಿಂದಲೂ ಮಾಡಬಹುದಾದುದು ಯಾವುದು, ಎನ್ನುವ ನಿರ್ಧಾರದಲ್ಲಿ ಊಹಾಕ್ರಮದ ಅಭಿನಿವೇಶವಿದೆ. ಊಹಾಕ್ರಮದಲ್ಲಿ ಹಳೆಯ ಅನುಭವಗಳನ್ನು ನೆನಪಿನಲ್ಲಿ ಉಳಿಸಿಕೊಳ್ಳುವ, ಅವುಗಳಲ್ಲಿ ಸಂಗರ್ಭಕ್ಕೆ ಅಗತ್ಯವಾದ ವಿವರಗಳನ್ನು ನೆನಪಿಗೆ ತಂದುಕೊಳ್ಳುವ, ಈ ವಿವರಗಳನ್ನು ಪ್ರಸ್ತುತಸಂದರ್ಭಕ್ಕೆ ಸರಿಯಾಗುವಂತೆ ಜೋಡಿಸುವ ಕೌಶಲಗಳಿರುತ್ತವೆ. ಈ ಮೂರು ಕೌಶಲಗಳು ಮಕ್ಕಳಲ್ಲಿಯೂ ಮೇಲ್ತರದ ಪ್ರಾಣಿಗಳಲ್ಲಿಯೂ ಕೆಲಸಮಾಡುವುದು ಪ್ರಯೋಗಗಳಿಂದ ಸ್ಪಷ್ಟವಾಗಿದೆ.

ಸಮಸ್ಯೆ ಇಲ್ಲದಿದ್ದರೆ, ತೊಡಕಾದ ಸಂದರ್ಭವಿಲ್ಲದಿದ್ದರೆ ಊಹಾಕ್ರಮಕ್ಕೆ ಅವಕಾಶವಿರದು. ಪ್ರಾಣಿಗಳ ಮೇಲೆ ನಡೆಸಿದ ಪ್ರಯೋಗಗಳಲ್ಲಿ ಇಂಥ ಸಮಸ್ಯೆಯೊಂದನ್ನು ಮುಂದೊಡ್ಡದಿದ್ದರೆ ಪ್ರಾಣಿಗಳು ಆಲೋಚನೆಯನ್ನು ಅಭಿವ್ಯಕ್ತಗೊಳಿಸುತ್ತಲೇ ಇರಲಿಲ್ಲ. ಅಗತ್ಯವಿದ್ದರೇ ಆಲೋಚನೆ ಎನ್ನುವುದು ಮನುಷ್ಯರ ನೆಲೆಯಲ್ಲಿಯೂ ನಿಜವೇ. ಯಥಾವತ್ತಾಗಿ, ಮಾಮೂಲಾಗಿ ಕೆಲಸಮಾಡಿ ಸಮಸ್ಯೆ ಬಗೆಹರಿಯುವಂತಿದ್ದರೆ ಆಲೋಚನೆಯನ್ನು, ತತ್ರಾಪಿ ಊಹಾಕ್ರಮವನ್ನು, ಯಾರೂ ಅನುಸರಿಸುವುದಿಲ್ಲ. ನಿತ್ಯಜೀವನದಲ್ಲಿ ಊಹಾಕ್ರಮವನ್ನು ಬಳಸದೇ ಬದುಕುವವರು ಬಹುಮಂದಿ ಇದ್ದಾರೆ; ಬಳಸುವವರಿಗೂ ಇಂಥ ಸಂದರ್ಭಗಳು ಬಹಳ ಬರುವುದಿಲ್ಲ. ಆದರೂ ಇದು ಮನುಷ್ಯಸಹಜವಾದ ಪ್ರವೃತ್ತಿಯೆನ್ನುವುದು ನಿಜ. ಮಗುವಿಗೆ ಆವರಣದ ವಿವರಗಳೆಲ್ಲ ತೊಡಕೇ, ಸಮಸ್ಯೆಯೇ; ಅದು ಕೇಳುವ ಪ್ರಶ್ನೆಗಳಿಗೆ ಮಿತಿಯಿಲ್ಲ. ಈ ಕುತೂಹಲ ಮಗುವಿಗಿಲ್ಲದಿದ್ದರೆ ಅದರ ಊಹಾಶಕ್ತಿ, ಆಲೋಚನಾ ಸಾಮರ್ಥ್ಯ ಬೆಳೆಯುವುದೇ ಇಲ್ಲ. ಬುದ್ಧಿಶಕ್ತಿಯ ಪ್ರಯೋಜನ ಊಹಾಕ್ರಮವನ್ನು ಸಮರ್ಪಕವಾಗಿ ದಕ್ಕಿಸಿಕೊಳ್ಳುವುದೇ. ಕೆಳವರ್ಗದ ಪ್ರಾಣಿಗಳಿಗಿಂತ ಮನುಷ್ಯ

ಮೇಲೆಸಿಸಿದ್ದರೆ ಅದು ಆಲೋಚನೆಯ ಸೌಲಭ್ಯವಿರುವುದರಿಂದಲೇ ; ಸಂದರ್ಭದ ತಾತ್ಪರ್ಯವನ್ನು ಮನದಟ್ಟುಮಾಡಿಕೊಂಡು ಸೂಕ್ತವಾದ ಪ್ರತಿಕ್ರಿಯೆಯನ್ನು ಸಿದ್ಧಪಡಿಸುವಾಗ ಅವನ ಮೇಲ್ಮೆ ತಿಳಿಯುತ್ತದೆ.

೪

## ಭಾಷೆ ಮತ್ತು ಭಾವನೆ

ಮನುಷ್ಯ ಆಲೋಚನಾಶಕ್ತಿಯಿಂದ ವಿಶಿಷ್ಟನಾಗಿದ್ದಾನೆ ಎನ್ನುವಾಗ ಭಾಷೆಯೂ ಮನುಷ್ಯನಿಗೆ ವಿಶಿಷ್ಟವಾದುದು ಎನ್ನುವುದನ್ನು ಮರೆಯಬಾರದು. ಜಗತ್ತನ್ನು ಇಂದ್ರಿಯ ಗಳಿಂದ ಅರಿಯುವಾಗ ವಿವರಗಳನ್ನು ಮಾತಿನಲ್ಲಿ ಮೂಡಿಸುವ ಶಕ್ತಿ ಮನುಷ್ಯನಿಗೆ ಸಹಜವಾದುದು. ವಸ್ತುಸ್ಥಿತಿಯ ಚಿತ್ರವನ್ನು ಭಾಷೆ ಮನುಷ್ಯನಿಗೆ ಒದಗಿಸುತ್ತದೆ. ಭಾಷೆ ಸಂಕೇತಪ್ರಧಾನವಾದುದು. ನಮ್ಮ ಅನುಭವಗಳೆಲ್ಲ ಸಂಕೇತದ ಜಾಲದಲ್ಲಿ ನಿಲ್ಲ ದಿದ್ದರೆ ಅವುಗಳಿಂದ ನಮಗೆ ಪ್ರಯೋಜನವಿಲ್ಲ, ಅವುಗಳನ್ನು ಆಸ್ವಾದಿಸುವುದಾಗಲೀ, ನೆನಪಿನಲ್ಲಿ ಉಳಿಸಿಕೊಳ್ಳುವುದಾಗಲೀ ಸಾಧ್ಯವಿಲ್ಲ. ಭಾಷೆಯಲ್ಲಿ ಮೂಡಿದ ಅನುಭವ ಗಳು ನಮಗಿರುವುದು ಸಾಧ್ಯವಾದರೂ ಸಂಭವ ಕಡಿಮೆ. ಎಲ್ಲ ಅನುಭವವೂ ನಮಗೆ ಮನದಟ್ಟಾಗುವುದು ಭಾಷೆಯಿಂದಲೇ ; ಆಲೋಚನೆ ಭಾಷೆಯ ನೆರವಿ ನಿಂದಲೇ ಒದಗುವುದು. ಆಲೋಚನೆಯೆನ್ನುವುದು ಆಂತರಿಕವಾದ ಮಾತೇ ಎನ್ನುವುದು ನಮ್ಮ ಆಲೋಚನೆಗಳ ಸ್ವರೂಪವನ್ನು ವಿಶ್ಲೇಷಣ ಮಾಡಿದಾಗ ತಿಳಿಯುತ್ತದೆ. ನಮ್ಮ ಆಲೋಚನೆಯೆಲ್ಲ ವಾಙ್ಮಯವೇ, ಮಾತೇ ಆಲೋಚನೆಯ ಸಾಧನ, ಸಾಮಗ್ರಿ ಇದನ್ನು ಪ್ರಯೋಗಗಳಿಂದಲೂ ವಿಜ್ಞಾನಿಗಳು ಸಿದ್ಧಪಡಿಸಿದ್ದಾರೆ.

ಭಾಷೆಯಲ್ಲಿನ ಮಾತುಗಳೆಲ್ಲ ಸಂಕೇತರೂಪವಾದುವು ; ಮಾತನಾಡುವುದು ಸಂಕೇತ ಸಂದರ್ಭ (sign-situation) ಒಂದೊಂದು ಮಾತೂ ತನ್ನನ್ನು ಮೀರಿ ನಿಂತ ಅರ್ಥವನ್ನು ಧ್ವನಿಸುತ್ತದೆ. 'ಮೈಸೂರು ಹತ್ತು ಮೈಲಿ' ಎಂದು ದಾರಿಯಲ್ಲಿ ನಿಲ್ಲಿಸಿದ ಫಲಕದಂತೆ ಮಾತೂ. ಆ ಸ್ಥಳವೇ ಮೈಸೂರಲ್ಲ, ಮೈಸೂರು ಅಲ್ಲಿಂದ ಹತ್ತು ಮೈಲಿ ದೂರದಲ್ಲಿ ಆ ದಿಕ್ಕಿನಲ್ಲಿ ಇದೆ, ಹೋದರೆ ಮುಟ್ಟಬಹುದು ಎನ್ನುವ ವಿವರಗಳು ಫಲಕದಲ್ಲಿಯೇ ಅಡಗಿವೆ. ಹಾಗೆಯೇ 'ಬೆಕ್ಕು' ಎನ್ನುವಾಗ ಆ ಮಾತೇ ಪ್ರಾಣಿಯಲ್ಲ; ಜಗತ್ತಿನಲ್ಲಿ ಜೀವಂತವಾಗಿ, ಬಾಹ್ಯ ಆವರಣದ ಅಂಗವಾಗಿ ಇರುವ ಚತುಷ್ಪಾದಿ ಜೀವಿಯೊಂದನ್ನು ಈ ಮಾತು ನಿರ್ದೇಶಿಸುತ್ತದೆ, ಪ್ರತಿನಿಧಿಸುತ್ತದೆ, ಧ್ವನಿಸುತ್ತದೆ. 'ಬೆಕ್ಕು' ಎನ್ನುವ ಮಾತೇನು ಹಾಲು ಕುಡಿಯುವುದಿಲ್ಲ, ಮಿಯಾಂ ಎನ್ನುವುದಿಲ್ಲ ; ಆದರೆ ಹಾಲುಕುಡಿಯುವ, ಮಿಯಾಂ ಎನ್ನುವ ಪ್ರಾಣಿಯ ಚಿತ್ರ ವನ್ನು ನಮ್ಮ ಮನಸ್ಸಿನಲ್ಲಿ ಉಂಟುಮಾಡಲು ನೆರವಾಗುತ್ತದೆ. ಈ ಮಾತು ಕಾರಣವಾಗುತ್ತದೆ. ಭಾವನೆಗೆ ಮಾತು ಸ್ಫೂರ್ತಿ; ಪ್ರಚೋದಕ.

ಮಗು ಪ್ರಪಂಚದ ಪರಿಚಯವನ್ನು ಪಡೆಯುವಾಗ ಮಾತಿನ ಮೂಲಕವೇ ಪಡೆಯುತ್ತದೆ ಎನ್ನುವುದು ಗಮನಾರ್ಹವಾದ ವಿವರ. ಯಾವ ವಸ್ತುವನ್ನಾದರೂ ಅನುಭವಿಸಿದೊಡನೆ ಇದು ಏನು ಎಂದು ಕೇಳಿ ದೊಡ್ಡವರಿಂದ ಆ ವಸ್ತುವಿನ ಹೆಸರನ್ನೂ ಗುಣಲಕ್ಷಣಗಳನ್ನೂ ತಿಳಿದುಕೊಳ್ಳುತ್ತದೆ. ಅನುಭವದೊಂದಿಗೆ ಮಾತಿನ ನಿರ್ದೇಶನ ಸೇರಿದಾಗ ಮಗು ವಸ್ತುವನ್ನು ಚೆನ್ನಾಗಿ ಗ್ರಹಿಸಿ, ಸ್ಮೃತಿಯಲ್ಲಿ ನಿಲ್ಲಿಸಿ ಕೊಳ್ಳುತ್ತದೆ. ಜಗತ್ತಿನ ವಿವರಗಳೆಲ್ಲ ಹೀಗೆಯೇ ವ್ಯಕ್ತಿಗೆ ಅಂತರ್ಗತವಾಗಿ ಉಳಿಯು ವುದು. ಮಗು ಇತರರೊಂದಿಗೆ ವ್ಯವಹರಿಸುವಾಗ ಇದೇ ಮಾತುಗಳನ್ನು ಬಳಸಿ, ತಾನು ಅರಿತ ವಸ್ತುಗಳನ್ನು ನಿರ್ದೇಶಿಸುತ್ತದೆ. ಮಾತು ಈ ದೃಷ್ಟಿಯಿಂದ ನಾಣ್ಯವಿದ್ದಂತೆ. ನಾಲ್ಕು ಜನ ವ್ಯವಹರಿಸುವಾಗ ಮಾತು ಅಗತ್ಯವೇ. ಮಾತಿಲ್ಲ ದಿದ್ದರೆ ಒಬ್ಬರ ಆಲೋಚನೆ ಮತ್ತೊಬ್ಬರಿಗೆ ತಿಳಿಯಲಾರದು. ಮಾತಿಗೆ ಒಮ್ಮೊಮ್ಮೆ ಅಂಗಭಂಗಿಗಳೂ, ಮುಖವಿಕಾರವೂ ನೆರವಾಗುವುದುಂಟು. ಇವೆಲ್ಲ ವ್ಯವಹಾರ ಸಾಧನವೆಂದೇ ಸಿದ್ಧವಾದ, ಪ್ರಸಿದ್ಧವಾದ ಸಾಂಸ್ಕೃತಿಕ ನಾಣ್ಯಗಳು. ಭಾಷೆಗೂ ಜನಾಂಗದ ವ್ಯವಹಾರವೇ ಆಸರೆ ; ಜನ ಮಾತನ್ನು ಬಳಸದಿದ್ದರೆ ಮಾತು ಉಳಿಯು ವುದಿಲ್ಲ. ಭಾಷೆ ಮಗು ಹುಟ್ಟುವುದಕ್ಕಿಂತ ಮೊದಲೇ ಸಿದ್ಧವಾಗಿದ್ದರೂ ಹುಟ್ಟಿದ ಒಂದೊಂದು ಮಗುವೂ ಇದನ್ನು ಹೊಸದಾಗಿ ಕಲಿತು ಅರಗಿಸಿಕೊಳ್ಳಬೇಕು. ಕೈಕಾಲು ಬೆಳೆದಂತೆ, ನರಮಂಡಲದ ಪ್ರೌಢವಾದಂತೆ ಭಾಷೆಯೂ ಬೆಳೆದರೇ ಮಾನಸ-ವ್ಯಾಪಾರ ಸುಲಭವಾಗುವುದು. ಆಲೋಚನೆ, ಸ್ಮೃತಿ, ಆಕಾಂಕ್ಷೆ ಇಂಥ ಪ್ರಸಂಗಗಳಿಗೆ ಕೇಂದ್ರೀಯ ನರಮಂಡಲದ ವ್ಯವಸ್ಥೆ ಎಷ್ಟು ಮುಖ್ಯವೋ, ಭಾಷಾತ್ಮಕವಾದ ಸಾಮಗ್ರಿಸಂಗ್ರಹ ಅಷ್ಟೆ ಮುಖ್ಯ. ಈ ಕಾರಣದಿಂದಲೇ ಮಸ್ತಿಷ್ಕದ ವಿವಿಧ ಕ್ಷೇತ್ರಗಳಲ್ಲಿ ಮಾತಿಗೆ ನಿರ್ದಿಷ್ಟವಾದ ಕ್ಷೇತ್ರವೂ ಒಂದಿದೆ (ಬ್ರೋಕಾಸ್ ಲೋಬ್) ; ಮಾತನಾಡಲು ಅಗತ್ಯವಾದ ದೈಹಿಕವ್ಯಾಪಾರ ನಡೆಯುವಂತೆ ಅಂಗಾಂಗಗಳ ವ್ಯವಸ್ಥೆಯೂ ದೇಹದ ರಚನೆಯಲ್ಲಿ ಸೇರಿದೆ. ಭಾಷೆ ಹೀಗೆ ಸಾಂಸ್ಕೃತಿಕವಾಗಿಯೂ ದೈಹಿಕವಾಗಿಯೂ ಸಹಜಪ್ರವೃತ್ತಿಯೇ. ಮನುಷ್ಯನ ನೆಲೆಯಲ್ಲಿ ಸಂಘಜೀವನದ ಅಗತ್ಯವನ್ನು ಪರಿಗಣಿಸಿ ಪ್ರಕೃತಿಯು ಅವನಿಗೆ ಮಾತಿನ ಸೌಲಭ್ಯವನ್ನು ಮಾಡಿಕೊಟ್ಟಿದೆ ಯೆನ್ನಬಹುದು.

ವ್ಯವಹಾರವೊಂದೇ ಮಾತಿನ ಪ್ರಯೋಜನವಲ್ಲ. ಮನಸ್ಸಿನಲ್ಲಿ ಉಂಟಾದ ಆಲೋಚನೆಗಳನ್ನೂ ಭಾವಗಳನ್ನೂ ವ್ಯಕ್ತಪಡಿಸುವುದೂ ಮಾತಿನ ಕೆಲಸವೇ, ಮಾತಿನಿಂದಲೇ ಆಲೋಚನೆಗಳಿಗೆ ಅಭಿವ್ಯಕ್ತಿ. ಆಡುವ ಮಾತಿನಲ್ಲಿ ಹಲವು ಪದಗಳು ಭಾವಸೂಚಕವಾಗಿರುವುದು ಭಾವಗಳ ಆಳವನ್ನೂ ವಿಸ್ತಾರವನ್ನೂ ತೋರಿಸಲೆಂದೇ. 'ಓ', 'ಅಬ್ಬಾ', 'ಅಯ್ಯೋ', 'ಹಾ', 'ಛೆ' ಮೊದಲಾದ ಮಾತುಗಳನ್ನು ಗಮನಿಸಿದಾಗ ಇದು ಸ್ಪಷ್ಟವಾಗುತ್ತದೆ. ಯಾವ ಭಾಷೆಯಲ್ಲಿಯಾಗಲೀ, ಶೃಂಗಾರ,

ಕರುಣ, ವೀರ, ಬೀಭತ್ಸ, ಹಾಸ್ಯ ಮೊದಲಾದ ರಸಸಂದರ್ಭಗಳನ್ನು ವ್ಯಕ್ತಪಡಿಸುವಂಥ ಮಾತುಗಳಿರುತ್ತವೆ. ಈ ಮಾತುಗಳ ಉಗಮ, ರಚನೆ, ಇಂಗಿತಗಳನ್ನು ಅಧ್ಯಯನ ಮಾಡಿದವರು ಭಾಷೆಗೂ ಭಾವಕ್ಕೂ ನಿಕಟಸಂಬಂಧವುಂಟೆನ್ನುವ ಸಿದ್ಧಾಂತವನ್ನು ಮುಟ್ಟಿದ್ದಾರೆ. ಭಾಷೆಯು ಬೆಡಗು ನರಮಂಡಲದಲ್ಲಿ ಕೇವಲ ಯಾಂತ್ರಿಕವಾಗಿ ಉತ್ಪನ್ನವಾಗುವ ದೈಹಿಕವಿವರವಾಗಲಾರದು; ಚೈತನ್ಯದ ಆಸರೆಯಲ್ಲಿ ಜೀವಿಯು ಆತಂಕ-ಶಂಕೆಗಳನ್ನೂ, ಆಕಾಂಕ್ಷೆ-ಆಸೆಗಳನ್ನೂ, ಪ್ರೀತಿ-ಕ್ರೋಧಗಳನ್ನೂ ಹೊರಗೆ ಹಾಕಲು, ತೋರಿಸಲು, ವ್ಯವಸ್ಥೆಗೊಂಡ ಮಾನಸಿಕವಿವರಗಳು ಭಾಷೆಯ ಜೀವಾಳ. ಭಾಷೆಗೆ ಈ ಮಹತ್ತ್ವವಿದೆಯೆಂದು ದೇಹವಿಜ್ಞಾನಿಗಳೂ ಒಪ್ಪಿಕೊಂಡಿದ್ದಾರೆ. ಆಲೋಚನೆ ಹೇಗೆ ಉಚ್ಚನೆಲೆಯಲ್ಲಿದೆಯೋ ಹಾಗೆಯೇ ಭಾಷೆಯ ನೆಲೆಯೂ ಹೆಚ್ಚಿನದೇ.

ಭಾಷೆಯಲ್ಲಿ ಒದಗುವ ಅರ್ಥನಿಷ್ಪತ್ತಿ (meaning) ಆಲೋಚನೆಯಿಂದಲೇ ನೇರವಾಗಿ ಉಂಟಾದದ್ದು. ಹೇಳುವವನ ಆಲೋಚನೆಯ ವಿವರಗಳು, ಕೇಳುವವನ ಆಲೋಚನೆಯ ವಿವರಗಳು ಸಂಗತವಾಗಿ ಸೇರಿದಾಗಲೇ ಅರ್ಥ ಸ್ಫುರಣವಾಗುವುದು. ಅರ್ಥ ಎನ್ನುವುದು ಮಾನಸಿಕವಿವರಗಳು ಒದಗುವ ಸಂದರ್ಭವಷ್ಟೇ ಎಂದು ಮನಃಶಾಸ್ತ್ರಜ್ಞರು ನಿರ್ಧರಿಸಿದ್ದಾರೆ. ಇಂದ್ರಿಯಗಳಿಂದ ಒದಗುವ ವಿವರಗಳ ನಿರ್ದೇಶನ, ಅವುಗಳಿಗೆ ಮೌಲ್ಯಸಂಘಟನೆ, ಪೂರ್ವಸ್ಮೃತಿಗಳ ಉದ್ಬೋಧನ, ಮುಂದಿನ ಪ್ರವೃತ್ತಿಗಳ ವಿಚಾರದಲ್ಲಿ ಅವಧಾನ ಇವೆಲ್ಲ ಭಾಷೆಯ ನೆರವಿನಿಂದಲೇ ಆಗುತ್ತದೆ ಎಂದಾಗ ಅರ್ಥನಿಷ್ಪತ್ತಿಯ ಅಗತ್ಯ ಸ್ಪಷ್ಟವಾಗುತ್ತದೆ. ವ್ಯವಹಾರ್ಯವಾದ ಭಾಷೆ ಸರಳ, ಸಿದ್ಧ; ಎಂದರೆ ಅರ್ಥ ಸುಲಭವಾಗಿ ಗೊಂದಲವಿಲ್ಲದಂತೆ ಭಾಸವಾಗುವ ಸೌಲಭ್ಯ ಇಲ್ಲಿದೆ. ಸಂದರ್ಭದ ತಾತ್ಪರ್ಯಗ್ರಹಣವಾಗುವುದು ಪ್ರತಿಕ್ರಿಯೆಗೆ ತುಂಬ ಅಗತ್ಯ; ಹಾಗಾದ ಮೇಲೇ ಆವರಣದ ವಿವರ ಪ್ರಚೋದಕವಾಗುವುದು. ಇದು ಇಂದ್ರಿಯದ ನೆಲೆಯಲ್ಲಾಗಲಿ ಕಶೇರುಕದ ನೆಲೆಯಲ್ಲಾಗಲಿ ನಡೆಯದೆ ಮಸ್ತಿಷ್ಕದ ನೆಲೆಯಲ್ಲಿಯೇ ನಡೆಯುವುದು ಅರ್ಥನಿಷ್ಪತ್ತಿಯ ದೃಷ್ಟಿಯಿಂದಲೇ. ಭಾಷೆಗೂ ಆಲೋಚನೆಗೂ ಇರುವ ನಿಕಟವಾದ ನೆಂಟು ಇದರಿಂದ ಸ್ಪಷ್ಟವಾಗುತ್ತದೆ.

೫

## ಪ್ರತ್ಯಯಗಳ ಜಾಲ

ಆಲೋಚನೆಯ ವಿಚಾರವಾಗಿ ಚರ್ಚಿಸುವಾಗ ಮೂಲಪ್ರತ್ಯಯ (concept) ಗಳ ಪ್ರಸ್ತಾಪ ಬರದೆ ಇರುವುದು ಸಾಧ್ಯವಿಲ್ಲ. ಈ ಪ್ರತ್ಯಯಗಳು ಉಂಟಾಗುವುದು ಹೇಗೆ? ಆಲೋಚನೆಯಲ್ಲಿ ಅವುಗಳ ಪಾತ್ರ ಏನು? ಅವುಗಳ ಸಂಪಾದನೆಯ ವಿಧಾನ ಯಾವುದು? ಮೊದಲಾದ ಸಮಸ್ಯೆಗಳನ್ನು ಎತ್ತಿಕೊಂಡು ಮನಃಶಾಸ್ತ್ರಜ್ಞರು ವಿಪುಲವಾದ ಚರ್ಚೆ ನಡೆಸಿದ್ದಾರೆ, ಪ್ರಯೋಗಗಳಿಂದ ಸಿದ್ಧಾಂತಗಳನ್ನು ಮಂಡಿಸಿ

ದ್ದಾರೆ. ನಾವು ಬಳಸುವ ಭಾಷೆಯಲ್ಲಿ ವಸ್ತುಗಳನ್ನೂ ಪ್ರಸಂಗಗಳನ್ನೂ ನೇರವಾಗಿ ನಿರ್ದೇಶಿಸುವ ಮಾತುಗಳುಂಟಷ್ಟೆ; ಅವು ವಸ್ತುವಿನ ಅನುಭವದಿಂದಲೇ, ಸಂಪರ್ಕ ದಿಂದಲೇ ಬಂದ ಭಾವನೆಗಳನ್ನು ಪ್ರತಿಬಿಂಬಿಸುತ್ತವೆ ಎನ್ನೋಣ. ಆದರೆ ನಾಲ್ಕು ನಾಯಿ ಗಳನ್ನು ಪ್ರತ್ಯೇಕವಾಗಿ ನೋಡಿದ ಮಗು 'ನಾಯಿ' ಎಂಬ ಕಲ್ಪನೆಯನ್ನು ಮನಸ್ಸಿ ನಲ್ಲಿ ಇರಿಸಿಕೊಳ್ಳುವಾಗ ಈ ಪ್ರವೃತ್ತಿ ಕೇವಲ ವಿಷಯಾನುಭವತಂತ್ರವಾದುದಲ್ಲ, ಕೆಂಪು ಹಣ್ಣು, ಕೆಂಪು ಹೂವು, ಕೆಂಪು ಆಟಿಗೆ, ಕೆಂಪು ಲಂಗ ಇವುಗಳನ್ನು ನೋಡಿ, ಅನುಭವಿಸಿ ಮಗುವಿನ ಮನಸ್ಸಿನಲ್ಲಿ 'ಕೆಂಪು' ಎಂಬ ಪ್ರತ್ಯಯ ಉಂಟಾಗುತ್ತದೆ; ಇದು ಇಂದ್ರಿಯಜನ್ಯಜ್ಞಾನವಲ್ಲ. ಇಂದ್ರಿಯಗಳಿಂದ ಪಡೆದ ವಿವರಗಳನ್ನು ಕಲೆಸಿ, ಹಿಗ್ಗಿಸಿ, ತಗ್ಗಿಸಿ, ಹಿಂದಿನ ವಿವರಗಳನ್ನು ಬೆರೆಸಿ, ತಮ್ಮ ಅನುಭವವಿಶೇಷವನ್ನೂ ಅದರಲ್ಲಿ ಸುರಿದು, ವಿವರಗಳ ವೈವಿಧ್ಯವನ್ನೆಲ್ಲ ಮುದ್ದೆಯಲ್ಲಿ ಮರೆಸಿದಾಗ ಉಂಟಾಗುವ ಪಾಕ ಇದು. ಆದರೆ ವಸ್ತುಗಳ ಪೂರ್ವಾನುಭವವಿಲ್ಲದೆ ಪ್ರತ್ಯಯದ ಕಲ್ಪನೆ ಅಸಾಧ್ಯ ವೆನ್ನುವುದೇನೋ ನಿಜ.

ಪ್ರತ್ಯಯವೆನ್ನುವುದೊಂದು ಪ್ರತಿಕ್ರಿಯೆ; ಆವರಣದ ವಿವರಗಳು ಪ್ರಚೋದಕ ಸಾಮಗ್ರಿಗಳಾದರೆ ಅವುಗಳ ವ್ಯವಸ್ಥೆಯಿಂದ ಮನುಷ್ಯನ ಮನಸ್ಸು ಈ ಪ್ರತಿಕ್ರಿಯೆ ಯನ್ನು ಮೂಡುತ್ತದೆ. ಎರಡು ವಿವರಗಳನ್ನು ಬೆರೆಸುವುದು ಇಂದ್ರಿಯಗಳಿಂದ ಸಾಧ್ಯವಿಲ್ಲ, ಪ್ರತ್ಯಕ್ಷವ್ಯಾಪಾರದಲ್ಲಿಯೂ ಇದು ಸಾಧ್ಯವಿಲ್ಲ. ಬೆರೆಸಲು ಅಥವಾ ಬೆಸೆಯಲು ಯಾವ ಅಂಟು ಅಗತ್ಯವೋ ಅದು ವಿವರಗಳಿಂದಲೇ ದೊರೆಯುತ್ತದೆ; ಆದರೆ ವಾಸ್ತವವಾಗಿ ಎರಡನ್ನು ಕೂಡಿಸಿ ಒಂದನ್ನು ಮಾಡುವುದು ಸಾಂಕೇತಿಕವಾದ ಪ್ರವೃತ್ತಿ. ಮೇಲೆ 'ನಾಯಿ' ಎನ್ನುವ ಮಾತನ್ನು ನಿದರ್ಶನವಾಗಿ ಕೊಟ್ಟೆವು. ಬೇರೆ ಬೇರೆ ಜಾತಿಯ ಬೇರೆಬೇರೆ ಆಕಾರದ ನಾಯಿಗಳನ್ನು ಬೇರೆಬೇರೆಯಾಗಿಯೇ ನೋಡಿದ ಮಗು 'ನಾಯಿ' ಎನ್ನುವ ಕಲ್ಪನೆಯನ್ನು ಪಡೆದುಕೊಂಡಾಗ ಈ 'ನಾಯಿ'ಗೆ ಯಾವ ವಿಷಯವೂ ಜಗತ್ತಿನಲ್ಲಿಲ್ಲ. ಪ್ರತ್ಯಯ 'ನಾಯಿ' ಮಗುವಿನ ಮನಸ್ಸಿನಲ್ಲಿ ಮಾತ್ರವೇ ಇರ ತಕ್ಕದ್ದು, ಹೊರಗೆ ಎಲ್ಲಿಯೂ ಅದು ಪ್ರತಿನಿಧಿಸುವ ನಾಯಿಯಿರುವುದಿಲ್ಲ. ಎಂದಮೇಲೆ ಈ ಪ್ರತ್ಯಯ ವಸ್ತುವನ್ನಾಶ್ರಯಿಸಿದುದಲ್ಲ, ಆಲೋಚನೆಯನ್ನಾಶ್ರಯಿಸಿದುದು. ಮಗುವಿಗೆ ಬುದ್ಧಿಶಕ್ತಿ ಸಾಕಷ್ಟು ಇಲ್ಲದಿದ್ದರೆ ಈ ಪ್ರತ್ಯಯವ್ಯಾಪಾರ ಸಾಧ್ಯವಿಲ್ಲ. ಜಗತ್ತಿನಲ್ಲಿ ನಾಯಿಗಳು ನೂರಾರು ಇದ್ದರೂ ಮಗುವಿಗೆ 'ನಾಯಿ' ಪ್ರತ್ಯಯ ಒಂದೂ ಇರಲಾರದು! 'ನಾಯಿ' ಎನ್ನುವ ಪ್ರತ್ಯಯ ಸ್ವಭಾವದಲ್ಲಿ ಸಾಂಕೇತಿಕ ವಾದುದು ಎಂದು ಈ ವಿಮರ್ಶೆಯ ತಾತ್ಪರ್ಯ. ಈ ಸಂಕೇತ ಇರುವುದು ವಸ್ತುಪ್ರಾತಿನಿಧ್ಯದಲ್ಲಲ್ಲ; ವಿವರಗಳ ಸಂಕಲನದಲ್ಲಿ, ಸಮನ್ವಯದಲ್ಲಿ.

ಸಾಂಕೇತಿಕ ಪ್ರತಿಕ್ರಿಯೆ (symbolic response) ಎಂದು ಪ್ರತ್ಯಯವನ್ನು ನಿರ್ದೇಶಿಸುವಾಗ ಹೊರಗಿನಿಂದ ಬಂದ ವಿವರಗಳನ್ನೆಲ್ಲ ಆಮೂಲಾಗ್ರವಾಗಿ ಮನಸ್ಸು

ಪರಿಶೀಲಿಸುವುದೆಂದು ಬಗೆಯಬಾರದು. ಸಂಕೇತದಲ್ಲಿ ಸಮಷ್ಟಿವ್ಯಾಪಾರ ಇರಲೇ ಬೇಕೆನ್ನುವ ನಿಯಮವಿಲ್ಲ. ಅಗತ್ಯವಾದ, ಸುಸಂಗತವಾಗಿ ಸೇರಬಲ್ಲ ವಿವರಗಳನ್ನೇ ಆಯ್ದುಕೊಂಡು ಮನಸ್ಸು ಕೆಲಸಮಾಡುತ್ತದೆ. ವಿವರಗಳನ್ನು ಹಾಗೆಹಾಗೆಯೇ ಕಲೆ ಹಾಕಿದರೆ ದೊರೆಯುವುದು ವಿವರಗಳ ರಾಶಿಯಷ್ಟೆ. ಮುಖ್ಯವಾದುವನ್ನು ಗ್ರಹಿಸಿ ಗೌಣವಾದುವನ್ನು ಬಿಟ್ಟು, ಅಗತ್ಯವಾದ ಅಂಶಗಳನ್ನೂ ಸಮಾನವಾದ ಅಂಶಗಳನ್ನೂ ಗಮನಿಸಿ ಅವನ್ನೆಲ್ಲ ಒಂದೇ ಪಾಕದಲ್ಲಿ ಇಳಿಸುವ ಕೆಲಸದಲ್ಲಿ ಆಯ್ಕೆ (selection) ಮುಖ್ಯವಾದುದು. ಇದು ಮನುಷ್ಯನಿಗೆ ಸಹಜವಾಗಿ, ಸ್ವಭಾವಸಿದ್ಧವಾಗಿ ಬರತಕ್ಕದ್ದು. ಒಂದೇ ವರ್ಗದ ಪ್ರಾಣಿಗಳು ಇವು, ಈ ಬಗೆಯ ಪ್ರಾಣಿಗಳಿಗೆಲ್ಲ ಸಮಾನಧರ್ಮವುಂಟು, ನಿರ್ದೇಶನ ಏನೇ ಇದ್ದರೂ ವೈವಿಧ್ಯ ಎಷ್ಟಿದ್ದರೂ ಮೂಲ ಭೂತವಾಗಿ ಇವು ಒಂದೇ ವರ್ಗದ ಪ್ರಾಣಿಗಳು ಎನ್ನುವ ಸಿದ್ಧಾಂತವನ್ನು ಮಗುವು ಮುಟ್ಟಿದಾಗಲೇ ಅದಕ್ಕೆ 'ನಾಯಿ' ಎನ್ನುವ ಪ್ರತ್ಯಯ ಒದಗುವುದು. ನೋಡಿದ ಎಲ್ಲ ನಾಯಿಗಳನ್ನೂ, ಆಯಾ ಸಂದರ್ಭಗಳನ್ನೂ, ಅವುಗಳ ಹೆಸರುಗಳನ್ನೂ ಮಗು ಗಮನದಲ್ಲಿ ಇಟ್ಟುಕೊಂಡು ಆ ನೆಲೆಯಲ್ಲಿಯೇ ಪ್ರತಿಕ್ರಿಯೆ ಇದ್ದರೆ ಪ್ರತ್ಯಯ ಉಂಟಾಗುವುದಿಲ್ಲ. ನೋಡಿದ ನಾಯಿಗಳೆಲ್ಲ ಪ್ರತ್ಯಯದಲ್ಲಿ ಕಲೆಯುವಾಗ ಎಷ್ಟೋ ನಾಯಿಗಳು ಬಿಟ್ಟುಹೋಗುತ್ತವೆ, ಕೆಲವು ಮುಂದೆ ಬರುತ್ತವೆ, ನಾಯಿಯ ಎಷ್ಟೋ ಗುಣಲಕ್ಷಣಗಳು ಜಾರಿಹೋಗುತ್ತವೆ, ಕೆಲವು ಎದ್ದು ನಿಲ್ಲುತ್ತವೆ. ಮಗು ನಾಯಿಯ ವಿಚಾರವಾಗಿ ಮುಂದೆ ವ್ಯವಹರಿಸಬೇಕಾದರೆ ನೋಡಿದ ನಾಯಿಗಳ ವಿವರಗಳು ಮುಖ್ಯವಲ್ಲ, ನಾಯಿಯ ಪ್ರತ್ಯಯ ಮುಖ್ಯ.

ವಿಭಿನ್ನವಾಗಿದ್ದರೂ ವಸ್ತುಗಳಲ್ಲಿ ಸಾದೃಶ್ಯವನ್ನು ಕಂಡುಕೊಂಡು ವರ್ಗದ ವ್ಯವಸ್ಥೆಯಲ್ಲಿ ಮೂಡಿಸುವುದು ಪ್ರತ್ಯಯವ್ಯಾಪಾರದ ಮುಖ್ಯಾಂಶ. ಎರಡು ಮನೆಗಳು ಒಂದೇ ಬಗೆಯಲ್ಲಿರುತ್ತವೆಯೇ? ಎರಡು ಗಿಡಗಳು ಒಂದೇ ಆಕಾರವನ್ನು ತಳೆಯುವುವೇ? ಅಸಂಖ್ಯಾಕವಾದ ಮನೆಗಳನ್ನೂ ಗಿಡಗಳನ್ನೂ ನೋಡಿದಾಗ ವೈವಿಧ್ಯವೇ ನಮ್ಮ ದೃಷ್ಟಿಯಲ್ಲಿದ್ದರೆ ಮನಸ್ಸು ತಲ್ಲಣಿಸುತ್ತದೆ. ಮನೆ ಎಂದರೆ ಸಾರದಲ್ಲಿ ಏನು, ಗಿಡ ಎಂದರೆ ಮೂಲಭೂತವಾಗಿ ಹೇಗಿರುತ್ತದೆ ಎನ್ನುವ ದೃಷ್ಟಿ ಯಿಂದ ನೋಡಿದಾಗ ಸಾರಾಂಶಗ್ರಹಣ (abstraction) ನಮ್ಮ ನೆರವಿಗೆ ಬರುತ್ತದೆ. ಇದಕ್ಕೆ ಪೂರಕವಾಗಿ ಎಲ್ಲ ಮನೆಗಳಲ್ಲಿಯೂ ಇರುವ ಸಾಮಾನ್ಯ ಲಕ್ಷಣವನ್ನು ನಮ್ಮ ಅನುಭವದಿಂದ ಗ್ರಹಿಸಿ, ವಿಶೇಷಗಳನ್ನು ಸಾಮಾನ್ಯದಲ್ಲಿ ನಿಲ್ಲಿಸುವ ಸಾಧಾರಣೀಕರಣ ಪ್ರವೃತ್ತಿ (generalization) ಕೆಲಸಮಾಡುತ್ತದೆ. ಸಾರಾಂಶಗ್ರಹಣ ಮತ್ತು ಸಾಧಾರಣೀಕರಣ ತೀರ ವಿಭಿನ್ನವಾದ ಕ್ರಿಯೆಗಳೇನಲ್ಲ; ದಿಟವಾಗಿ ಎರಡನ್ನೂ ಬೇರ್ಪಡಿಸುವುದು ಕಷ್ಟ. ಆದರೆ ಸಾಧಾರಣೀಕರಣದಲ್ಲಿ ಊಹಾತರ್ಕ ಒದಗಿಬಂದು ಅನುಭವವೈವಿಧ್ಯದಲ್ಲಿ ಏಕಸೂತ್ರವನ್ನು ಕಂಡು ಹಿಡಿಯುವ ಪ್ರಯತ್ನ ಮುಖ್ಯ ವಾದುದು. ವ್ಯಕ್ತಿ ತನ್ನ ತಿಳಿವಿನಿಂದ ನಡೆಸುವ ಕ್ರಿಯೆ ಇದು. ಆದರೆ ಸಾರಾಂಶಗ್ರಹಣ

ನಮಗೆ ತಿಳಿಯದಂತೆ ನಡೆದುಹೋಗುತ್ತದೆ; ಪ್ರಾಣಿಗಳಲ್ಲಿಯೂ ಮಕ್ಕಳಲ್ಲಿಯೂ ಇದೇ ವಿಶೇಷವಾಗಿ ಕಾಣುವುದು.

ಪ್ರತ್ಯಯಗಳ ಪರಿಕಲ್ಪನೆಯಲ್ಲಿ ಸಾರಾಂಶ ಗ್ರಹಣವೇ ಮುಖ್ಯಸಾಧನವೆಂದು ಒಂದು ವಾದವಿದೆ. ಒಂದು ವರ್ಗಕ್ಕೆ ಸೇರಿದ ವಸ್ತುಗಳನ್ನು ನೋಡಿದಾಗ, ನೋಡುವವನ ಮನಸ್ಸಿನಲ್ಲಿ ಬೇರೆಬೇರೆ ವಸ್ತುಗಳು ತಂತಮ್ಮ ಗುಣಲಕ್ಷಣಗಳನ್ನು ಮುದ್ರಿಸುತ್ತವೆ; ಈ ಮುದ್ರಣಗಳ ಮೊತ್ತದಲ್ಲಿ ಸಮಾನವಾದ ಮತ್ತು ಸಾರಭೂತ ವಾದ ಅಂಶಗಳೇ ಪ್ರಮುಖವಾಗಿ ಸೇರುತ್ತವೆ, ಉಳಿದವು ಮರೆಯಾಗುತ್ತವೆ. ಇದೊಂದು ಚಿತ್ರದಂತೆ ಮನಸ್ಸಿನಲ್ಲಿ ನಿಲ್ಲುವುದರಿಂದ ಸಾರಾಂಶಗ್ರಹಣ ಸಾರ್ಥಕ ವಾಗುತ್ತದೆ, ಫಲಕಾರಿಯಾಗುತ್ತದೆ. ಥಾರ್ನ್‌ಡೈಕ್, ಹೈಡ್‌ಬ್ರೇಡರ್, ಹಲ್, ಫಿಷರ್ ಮೊದಲಾದ ವಿಜ್ಞಾನಿಗಳು ಈ ವಾದವನ್ನು ಪ್ರತಿಪಾದಿಸಿದ್ದಾರೆ. ವಿವರಗಳಿಗೆ ಸಮಾನವಾದ ಅಂಶಗಳೇನೆಂಬುದು ವಿವಾದಾಸ್ಪದವಾದುದು. ಈ ವಾದಕ್ಕೆ ವಿರುದ್ಧ ವಾದ ಸಾಧಾರಣೀಕರಣವಾದವನ್ನು ಎತ್ತಿಹಿಡಿದಿರುವ ವಿಜ್ಞಾನಿಗಳು ಹೀಗೆ ಸಾಧಾರಣ ವಾದ ಅಂಶವು ತಾನಾಗಿ ಸ್ಫುಟವಾಗುವುದಿಲ್ಲವೆಂದೂ ಪ್ರಯತ್ನದಿಂದ ಅದನ್ನು ಕಂಡು ಹಿಡಿಯಬೇಕೆಂದೂ ವಾದಿಸಿ ಪ್ರತ್ಯಯವೆನ್ನುವುದು ಸುವ್ಯವಸ್ಥಿತ, ನಿಯಂತ್ರಿತ-ವ್ಯಾಪಾರದ ಫಲವಾಗಿ ಉಂಟಾಗುವುದೆಂದು ನಿರೂಪಿಸುತ್ತಾರೆ. ಪ್ರತ್ಯಯಗಳ ಪರಿ ಕಲ್ಪನೆಯಲ್ಲಿ ಉದ್ದೇಶಪೂರ್ವಕವಾದ ಯತ್ನ ಹೆಚ್ಚಿನ ಪಾತ್ರವನ್ನು ವಹಿಸುವುದೆಂದು ಇವರ ಅಭಿಪ್ರಾಯ. ಮೊದಲನೆಯ ವಾದವನ್ನು ಸಂಕಲಿತ ಛಾಯಾ ಚಿತ್ರವಾದ (composite photography theory) ಎಂದೂ, ಎರಡನೆಯದನ್ನು ಉದ್ದಿಷ್ಟ ಅನ್ವೇಷಣವಾದ (active search theory) ಎಂದೂ ನಿರ್ದೇಶಿಸುತ್ತಾರೆ. ವಯಸ್ಕರು ಪ್ರತ್ಯಯಗಳನ್ನು ಪಡೆಯುವ ಬಗೆ ಎರಡೂ ವಾದಗಳಲ್ಲಿ ಬರುವ ವಿವರಗಳನ್ನು ಒಳಗೊಂಡಿದೆಯೆಂದು ತಿಳಿದುಬರುತ್ತದೆ. ಪ್ರತ್ಯಯಗಳು ಮೈದಳೆಯು ವಾಗ ವ್ಯಕ್ತಿಯು ಪ್ರೇಕ್ಷಕನೂ (spectator) ಹೌದು, ಪಾಲುಗಾರನೂ (participant) ಹೌದು; ಸಂದರ್ಭವನ್ನು ಕುರಿತು ಜ್ಞಾನವನ್ನು ಅವನು ಬಯಸುವುದೂ ಉಂಟು, ಜ್ಞಾನ ತಾನಾಗಿ ಅವನಲ್ಲಿ ಬರುವುದೂ ಉಂಟು. ಎಂದರೆ, ಎರಡೂ ವಾದಗಳು ಪರಸ್ಪರ ವಿರುದ್ಧವಲ್ಲ, ಪರಸ್ಪರ ಪೂರಕ.

09461

ಪ್ರತ್ಯಯಗಳ ಸಂಪಾದನೆಯನ್ನು ಅಧ್ಯಯನ ಮಾಡುವಾಗ ಒದಗುವ ಸಮಸ್ಯೆಗಳು ಹಲವು. ಮಗುವಿನ ಪ್ರಾರಂಭಿಕದೆಶೆಗಳಲ್ಲಿ ಪ್ರತ್ಯಯಗಳ ಕಲ್ಪನೆಗೆ ಅಗತ್ಯವಾದ ಸಾಮರ್ಥ್ಯವನ್ನು ಕುರಿತ ಸಮಸ್ಯೆ ಮುಖ್ಯವಾದುದು. ಯಾವ ವಯಸ್ಸಿಗೆ ಮಗು ಪ್ರತ್ಯಯವನ್ನು ಪಡೆಯಬಲ್ಲದು, ಬಳಸಬಲ್ಲುದು? ಯಾವ ಸಂವಿಧಾನಗಳನ್ನವಲಂಬಿಸಿ ಪ್ರತ್ಯಯಗಳನ್ನು ಪಡೆಯುತ್ತದೆ? ಮಗುವಿನ ಮನಸ್ಸು ಬೆಳೆದಂತೆ ಪ್ರತ್ಯಯಗಳನ್ನು ಸೇರಿಸಿ ಬೇರೆ ಬೇರೆ ರೂಪುಗಳನ್ನು ವ್ಯವಹಾರ

ಯೋಗ್ಯವಾಗಿ ಉತ್ಪಾದನೆ ಮಾಡುವ ಸಾಮರ್ಥ್ಯವನ್ನು ಪಡೆಯುತ್ತದೆ. ಮಗುವಿನ ಬುದ್ಧಿಶಕ್ತಿ ಮತ್ತು ಕಾರ್ಯಕೌಶಲ ಇವುಗಳಿಗೂ ಪ್ರತ್ಯಯ ಪರಿಕಲ್ಪನೆಗೂ ಇರುವ ಸಂಬಂಧವೇನು ? ಪ್ರೌಢ ವಯಸ್ಸಿನಲ್ಲಿ ಒಂದು ಪ್ರತ್ಯಯ ಉಂಟಾಗುವ ಸಂವಿಧಾನ ಯಾವುದು, ಯಾವ ವರ್ತನೆಯಿಂದ ಇದು ಅಭಿವ್ಯಕ್ತವಾದೀತು ? ಇಂಥ ಸಮಸ್ಯೆಗಳಿಗೆಲ್ಲ ಉತ್ತರವನ್ನು ಒದಗಿಸಲು ಪ್ರಯೋಗಗಳನ್ನು ನಡೆಸಿದ್ದಾರೆ.

೬

## ಪ್ರತ್ಯಯಗಳ ವಿಚಾರ ಪ್ರಯೋಗಗಳು

ಪ್ರಾಣಿಗಳ ಮೇಲೆ ನಡೆಸಿರುವ ಪ್ರಯೋಗಗಳಲ್ಲಿ ಕ್ಲುಯ್ವರ್ ಕಪಿಗಳ ಮೇಲೆ ನಡೆಸಿದ ಪ್ರಯೋಗ ಪ್ರಸಿದ್ಧವಾದುದು. ಇದೇ ಪ್ರಯೋಗಗಳನ್ನು ಇತರ ವಿಜ್ಞಾನಿಗಳು ಬೇರೆ ಬೇರೆ ಪ್ರಾಣಿಗಳ ಮೇಲೆ ನಡೆಸಿದ್ದಾರೆ. ಮನ್ ಎನ್ನುವವನು ನಡೆಸಿದ ಪ್ರಯೋಗಗಳಲ್ಲಿ ಒಂದು ಹೀಗಿದೆ: ಇಲಿಯ ಮುಂದೆ ಒಂದು ತ್ರಿಕೋಣ, ಒಂದು ವೃತ್ತ ಈ ಆಕಾರಗಳನ್ನಿಟ್ಟು, ತ್ರಿಕೋಣವನ್ನು ಆರಿಸಿಕೊಂಡರೆ ಆಹಾರ ದೊರೆಯು ವಂತೆಯೂ ವೃತ್ತವನ್ನು ಆರಿಸಿಕೊಂಡರೆ ಶಿಕ್ಷೆ ಒದಗುವಂತೆಯೂ ವ್ಯವಸ್ಥೆ ಮಾಡಿದ್ದರು. ಇಲಿಯು ತ್ರಿಕೋಣವನ್ನು ಆರಿಸಿಕೊಳ್ಳುವುದನ್ನು ಕಲಿಯಿತು. ಎಂದರೆ ಈ ಪ್ರತ್ಯಯ ಅದರ ಮನಸ್ಸಿನಲ್ಲಿ ಕಲ್ಪಿತವಾಗಿ ವ್ಯವಹಾರ ಯೋಗ್ಯವಾಯಿತು. ಇದೇ ಪ್ರಯೋಗ ವನ್ನು ಮಕ್ಕಳ ಮೇಲೂ ಈತನೇ ನಡೆಸಿದನು. ಪ್ರಯೋಗದ ಒಂದು ಹಂತದಲ್ಲಿ ತ್ರಿಕೋಣದ ಪ್ರತ್ಯಯವನ್ನು ಪ್ರಾಣಿಯು ಪಡೆದನಂತರ ತ್ರಿಕೋಣವನ್ನು ತಲೆ ಕೆಳಗಾಗಿ ಇಟ್ಟಾಗ ಪ್ರಾಣಿಯ ಪ್ರತಿಕ್ರಿಯೆ ತಪ್ಪಿತು ; ಮಕ್ಕಳ ಪ್ರತಿಕ್ರಿಯೆ ತಪ್ಪಲಿಲ್ಲ. ಬೌದ್ಧಿಕ ಸಾಮರ್ಥ್ಯ ಪ್ರತ್ಯಯಕಲ್ಪನೆಗೆ ಅಗತ್ಯವೆನ್ನುವ ವಾದಕ್ಕೆ ಈ ಪ್ರಯೋಗದಿಂದ ಪುಷ್ಟಿ ದೊರೆಯಿತು. ತ್ರಿಕೋಣದಲ್ಲಿ ವೈವಿಧ್ಯವನ್ನುಂಟುಮಾಡಿದಾಗಲೂ ಪ್ರಾಣಿಗಳು ತ್ರಿಕೋಣದ ಲಕ್ಷಣವನ್ನು ಅರಿತು ತ್ರಿಕೋಣ ಪ್ರತ್ಯಯವನ್ನು ಪಡೆದುಕೊಂಡುವು. ಮತ್ತೊಂದು ಪ್ರಯೋಗದಲ್ಲಿ ಮಕ್ಕಳು ಬೇರೆ ಬೇರೆ ನಾಲ್ಕು ಆಕಾರಗಳನ್ನೂ ಅವಕ್ಕೆ ಅಳವಡಿಸಿದ್ದ ಶಬ್ದಗಳನ್ನೂ ಕಲಿತರು. ಶಬ್ದಗಳು ಅರ್ಥವಿಲ್ಲದ ಮೂರು ಅಕ್ಷರಗಳ ಸಮೂಹವಷ್ಟೇ ( MEF, TOV, YOP, ZIL )ಆಗಿದ್ದರೂ ಆಕಾರಗಳಿಗೆ ಪ್ರಯುಕ್ತ ವಾದುವೆಂಬ ಕಾರಣ ಕಲಿಕೆಗೆ ನೆರವಾಯಿತು. MEF ಮತ್ತು TOV ಎರಡೂ ತ್ರಿಕೋಣಗಳು ಎಂಬುದನ್ನು ಮಕ್ಕಳು ಗಮನಿಸಿ ಅವೆರಡಕ್ಕೂ VIC ಎನ್ನುವ ಶಬ್ದವಿದ್ದುದನ್ನು ಕಲಿತರು ; YOP ಮತ್ತು ZIL ಎರಡೂ ಚತುರ್ಭುಜಗಳಾಗಿದ್ದು ಎರಡಕ್ಕೂ DAX ಎನ್ನುವ ಶಬ್ದ ಸಮಾನವಾಗಿದ್ದುದನ್ನೂ ಮಕ್ಕಳು ಗಮನಿಸಿದರು. ನಾಲ್ಕೂ ಆಕಾರಗಳಿಗೆ XIP ಎನ್ನುವ ಶಬ್ದ ಸಮಾನವಾಗಿದ್ದಿತು ; ಮಕ್ಕಳು ಇದನ್ನೂ ಕಲಿತರು. ( ಚಿತ್ರ–೮ ).

ಮುಂದೆ ಹತ್ತಾರು ಇತರ ಆಕಾರಗಳ ನಡುವೆ ಈ ನಾಲ್ಕನ್ನು ಕಲೆಸಿಬಿಟ್ಟಾಗಲೂ ಮಕ್ಕಳು XIP ಆಕಾರಗಳನ್ನು ಆಯ್ದುಕೊಡುವುದರಲ್ಲಿ ಯಶಸ್ವಿಗಳಾದರು. ಇದೇ ಸಂವಿಧಾನವನ್ನನುಸರಿಸಿ ಹೈಡ್‌ಬ್ರೆಡರ್ ನಡೆಸಿದ ಪ್ರಯೋಗದಲ್ಲಿ ಒಂಬತ್ತು ರೇಖಾ ಚಿತ್ರಗಳನ್ನು ಒಂದೊಂದಾಗಿ ಪ್ರದರ್ಶಿಸಿ ಒಂದೊಂದಕ್ಕೂ ಇರುವ ನಿರರ್ಥಕಶಬ್ದವನ್ನು ಮಕ್ಕಳು ಕಲಿತು, ಮುಂದೆ ಇತರ ರೇಖಾ ಚಿತ್ರಗಳನ್ನು ಪ್ರದರ್ಶಿಸಿದಾಗ ಆಕಾರ ಸಾದೃಶ್ಯದಿಂದ ಶಬ್ದವನ್ನು ನಿರ್ದೇಶ ಮಾಡುವಂತೆ ನಿಯೋಜಿಸುತ್ತಿದ್ದರು. ಆಕಾರ ಸಾದೃಶ್ಯವನ್ನು ಇಲ್ಲಿ ಬಳಸಿದಂತೆಯೇ ದಿನಬಳಕೆಯ ಹಲವಾರು ಸಾಮಗ್ರಿಗಳನ್ನಿಟ್ಟು ಅವುಗಳ ಉಪಯೋಗದ ಆಧಾರದ ಮೇಲೆ ಅವನ್ನು ವರ್ಗೀಕರಣ ಮಾಡುವಂತೆ ಕೆಲವು ಪ್ರಯೋಗಗಳೂ ನಡೆದುವು. ಪ್ರತ್ಯಯಗಳ ವಿಚಾರವಾಗಿ ನಡೆಸಿದ ಪ್ರಯೋಗಗಳಲ್ಲಿ ತುಂಬ ಪ್ರಸಿದ್ಧವಾದುದು ಹಾನ್ಫ್‌ಮನ್ ಮತ್ತು ಕ್ಯಾಸನಿನ್ ಎಂಬುವರು ನಡೆಸಿದುದು. ಆಕಾರದಿಂದಲೂ ಪ್ರಮಾಣದಿಂದಲೂ ಬಣ್ಣದಿಂದಲೂ ವಿಭಿನ್ನವಾದ ಮರದ ತುಂಡುಗಳನ್ನು ಬಳಸಿ, ಒಂದೇ ಆಕಾರದ ಅಥವಾ ಪ್ರಮಾಣದ ಅಥವಾ ಬಣ್ಣದ ತುಂಡುಗಳ ಹಿಂದೆ ಒಂದೇ ನಿರರ್ಥಕ ಶಬ್ದವನ್ನು ಬರೆದು ಮುಂದಿಟ್ಟಾಗ ಮಕ್ಕಳು ಸಾನ್ನಿಶ್ಯವನ್ನು ಹೇಗೆ ಗಮನಿಸುತ್ತಾರೆ, ಹೇಗೆ ತುಂಡುಗಳನ್ನು ವರ್ಗೀಕರಣ ಮಾಡುತ್ತಾರೆ ಎಂಬುದು ಈ ಪ್ರಯೋಗದ ಸಮಸ್ಯೆ. ಇದಕ್ಕೆ ವಿಗೋಟ್‌ಸ್ಕಿ ಪರೀಕ್ಷೆಯೆಂದು ಹೆಸರು ; ಪ್ರತ್ಯಯಾತ್ಮಕ ಆಲೋಚನೆ ( conceptual thinking ) ಈ ಪ್ರಯೋಗದ ವಿಷಯ.

ಈ ಪ್ರಯೋಗಗಳಲ್ಲದೆ ಪಿಯಾಜೆ ( Piaget ) ಎನ್ನುವ ವಿಜ್ಞಾನಿ ಮಗುವನ್ನು ಅದರ ಪ್ರತ್ಯಯಕಲ್ಪನೆಗಳ ಬಗ್ಗೆ ವೈದ್ಯರು ಮಾಡುವಂತೆ ಕೆದಕಿ, ಪ್ರಶ್ನಿಸಿ ವಿವರಗಳನ್ನು ಪಡೆಯಲೆತ್ನಿಸಿದನು. ವಯಸ್ಕರ ಮೇಲೆ ನಡೆಸಿದ ಪ್ರಯೋಗಗಳಲ್ಲಿ ಅಂತರಾವಲೋಕನ ಪದ್ಧತಿಯನ್ನು ಬಳಸುತ್ತಾರೆ. ಕಲಿಕೆಯ ಸಂವಿಧಾನ, ಸಮಸ್ಯಾ ಪೂರಣಪದ್ಧತಿ ಇವುಗಳೂ ಉಪಯೋಗದಲ್ಲಿವೆ.

ಪರಿಚ್ಛೇದ ಒಂಬತ್ತು

# ಇಂದ್ರಿಯ ವೇದನೆ

೧

## ವೇದನೆ

ಅರಿವಿನ ದಾರಿಯಲ್ಲಿ ಮೊದಲ ಹೆಜ್ಜೆ ವೇದನೆ. ಯಾವ ಪ್ರಾಣಿಯಾಗಲೀ ಆವರಣದೊಂದಿಗೆ ಸಂಪರ್ಕವನ್ನಿರಿಸಿಕೊಳ್ಳಲು ಇಂದ್ರಿಯಗಳನ್ನು ಪಡೆದಿರುತ್ತದೆ; ಇಂದ್ರಿಯವೆಂದರೆ ವ್ಯಕ್ತಿಗೂ (ಅಥವಾ ಪ್ರಾಣಿಗೂ) ಮತ್ತು ಹೊರಗಿನ ಜಗತ್ತಿಗೂ ಸಂಬಂಧವನ್ನು ಕಲ್ಪಿಸುವ ಸಾಮರ್ಥ್ಯ ವಿಶೇಷ. ಕಣ್ಣಿನಿಂದ ವಸ್ತುಗಳ ರೂಪವನ್ನು ವ್ಯಕ್ತಿ ಪಡೆಯಬಲ್ಲ; ಕಿವಿಯಿಂದ ಹೊರಗಿನ ಶಬ್ದಗಳನ್ನು ಅರಿಯಬಲ್ಲ. ಕುರುಡನಿಗೆ ಜಗತ್ತಿನ ಒಂದು ಭಾಗದ ಅರಿವೇ ಇರಲಾರದು; ಹಾಗೆಯೇ ಕಿವುಡನ ಅರಿವೂ ಅಪೂರ್ಣವಾದುದು. ಜಗತ್ತಿನ ವಿಚಾರವಾದ ಅರಿವಿಗೆ, ಜ್ಞಾನಕ್ಕೆ, ಇಂದ್ರಿಯಗಳು ಮನೆಗೆ ಕಿಟಕಿಗಳಿದ್ದಂತೆ. ಕಿಟಕಿಯಿಂದ ಗಾಳಿ, ಬೆಳಕು, ಹೊರಗಿನ ಪ್ರಸಂಗಗಳ ಸುದ್ದಿ ಬರುವಂತೆಯೇ ಇಂದ್ರಿಯಗಳಿಂದ ರೂಪ, ಶಬ್ದ, ರಸ, ಗಂಧ, ಸ್ಪರ್ಶಗಳು ದೇಹದೊಳಗೆ ಬರುತ್ತವೆ. ದೇಹದಲ್ಲಿಯೇ ಇಂದ್ರಿಯ ವ್ಯವಸ್ಥೆಯಿದೆ. ಕಣ್ಣು, ಕಿವಿ, ನಾಲಿಗೆ, ಮೂಗು, ಚರ್ಮ ಇವು ದೇಹಕ್ಕೆ ಸಂಬಂಧಪಟ್ಟ ವಿವರಗಳೇ; ಒಂದೊಂದಕ್ಕೂ ಒಂದು ಅಂಗ, ಒಂದು ವ್ಯವಸ್ಥೆ, ಒಂದು ರಚನೆ, ಒಂದು ಪ್ರವೃತ್ತಿ ನಿರ್ದಿಷ್ಟವಾಗಿವೆ.

ಈ ಅಂಗ-ಪ್ರವೃತ್ತಿಗಳು ಇಂದ್ರಿಯಸ್ಥಾನ-ಇಂದ್ರಿಯವೃತ್ತಿ ಎಂದು ಬೇರೆ ಬೇರೆ ಯಾದರೂ ಅವುಗಳ ಪ್ರತಿಕ್ರಿಯೆಯಲ್ಲಿ ಏಕತಾನತೆಯಿದೆ. ಕಣ್ಣಿನಿಂದ ನೋಡುವುದು, ಕಿವಿಯಿಂದ ಕೇಳುವುದು, ನಾಲಿಗೆಯಿಂದ ರುಚಿ ನೋಡುವುದು, ಮೂಗಿನಿಂದ ವಾಸನೆಯನ್ನು ಗ್ರಹಿಸುವುದು, ಚರ್ಮದಿಂದ ಸ್ಪರ್ಶವನ್ನು ಅನುಭವಿಸುವುದು ಇವು ಇಂದ್ರಿಯ ಸ್ಥಾನ-ಇಂದ್ರಿಯ ವೃತ್ತಿ ಭೇದದಿಂದ ನಿರ್ದಿಷ್ಟವಾಗಿವೆ. ಒಂದು ರಚನೆ, ಇನ್ನೊಂದು ಪ್ರವೃತ್ತಿ. ಆದರೆ ರಚನೆಯಿರುವುದು ಪ್ರವೃತ್ತಿಗಾಗಿಯೇ, ಪ್ರವೃತ್ತಿ ಸಾಧ್ಯವಾಗುವುದು ರಚನೆಯಿಂದಲೇ. ಎರಡೂ ಒಟ್ಟಾಗಿ ನಿಂತು, ಇಂದ್ರಿಯದಿಂದ ಹೊರ ಜಗತ್ತಿನ ವಿವರಗಳನ್ನು ಪಡೆದುಕೊಂಡು ದೇಹದಲ್ಲಿ ನರಕ್ರಿಯೆಗಳನ್ನು ಒದಗಿಸಿ ಮಸ್ತಿಷ್ಕಕ್ಕೆ ಹೋಗುವಂಥ ಪ್ರಸಂಗಕ್ಕೆ ವೇದನೆ ( sensation ) ಎಂದು ಹೆಸರು.

ವೇದನೆ ಇಂದ್ರಿಯಜನ್ಯಜ್ಞಾನ; ಅರಿವು ಇಂದ್ರಿಯಾಧೀನವಾದಾಗ ವೇದನೆ, ಈ ವರ್ಣನೆಯಲ್ಲಿ ಆವರಣದಿಂದ ಭೌತಿಕವಾದ ಪ್ರಚೋದನೆ ಒದಗುವುದೆಂದೂ, ದೇಹದ ನಿರ್ದಿಷ್ಟ ಭಾಗಗಳಿಂದ ಈ ಪ್ರಚೋದನೆ ಸ್ವೀಕೃತವಾಗುವುದೆಂದೂ ಹೀಗೆ ಪ್ರಚೋದನೆ ( stimulation ) ದೇಹದಲ್ಲಿ ಅರಿವಿನ ರೂಪದಿಂದ ಫಲಿತವಾಗುವುದೇ ವೇದನೆಯೆಂದೂ ವಿವರಗಳನ್ನು ಕಾಣಬಹುದು. ಮುಂದಿರುವ ಪುಸ್ತಕ ಹೊರ ಜಗತ್ತಿನ ವಿವರ ; ಆದರೆ ಅದು ಇರುವುದು ನನಗೆ ತಿಳಿಯುವುದು ನನ್ನ ದೃಷ್ಟಿಯನ್ನು ಅದರ ಕಡೆ ಹರಿಸಿದಾಗ ಮಾತ್ರ. ಕಣ್ಣು ನೋಡುವ ಸಾಮರ್ಥ್ಯವುಳ್ಳದ್ದು. ಪುಸ್ತಕದ ರೂಪ ಕಣ್ಣನ್ನು ಕೂಡಿಕೊಂಡಾಗ ಕಣ್ಣಿನಲ್ಲಿ ನಿರ್ದಿಷ್ಟವಾದ ಕ್ರಿಯೆ ಆರಂಭವಾಗುತ್ತದೆ. ಈ ಕ್ರಿಯೆಗೆ ಅಗತ್ಯವಾದ ಶಕ್ತಿಯನ್ನು ಪುಸ್ತಕ ಒದಗಿಸುವುದರಿಂದ ಅದನ್ನು ಪ್ರಚೋದಕ ಎನ್ನುತ್ತೇವೆ. ಕಣ್ಣು ನೋಡಲಾರಂಭಿಸಿದಾಗ ಅದರಲ್ಲಿ ಅದರ ರಚನೆಗೆ ತಕ್ಕಂಥ ನರಪ್ರವೃತ್ತಿಗಳು ಮೈದಳೆಯುತ್ತವೆ ; ಪ್ರಚೋದಕದಿಂದ ಪಡೆದು ಕೊಂಡ ಶಕ್ತಿ ಇಂದ್ರಿಯ ದ್ವಾರದಲ್ಲಿ ಸಂಸ್ಕೃತವಾಗುತ್ತದೆ, ಸಂಘಟಿತವಾಗುತ್ತದೆ, ವ್ಯವಹಾರ ಯೋಗ್ಯವಾಗುತ್ತದೆ. ಇಂದ್ರಿಯಕ್ಕೂ ಮಸ್ತಿಷ್ಕಕ್ಕೂ ಕಶೇರುಕದ ಮೂಲಕ ಸಂಪರ್ಕವುಂಟಷ್ಟೆ. ಇಂದ್ರಿಯಸ್ಥಾನದಲ್ಲಿ ಪ್ರವರ್ತಿತವಾದ ಶಕ್ತಿ ಜ್ಞಾನವಾಹಿ ನರಗಳ ಮೂಲಕ ಮಸ್ತಿಷ್ಕವನ್ನು ಮುಟ್ಟುತ್ತದೆ. ಆಗಲೇ ನಮಗೆ ವಸ್ತುವಿನ ವಿಚಾರ ಅರಿವು ಉಂಟಾಗುವುದು. ಎದುರಿಗೆ ಪುಸ್ತಕ ಇದೆಯೆಂದು ತಿಳಿಯುವುದು ಮಸ್ತಿಷ್ಕದ ನೆಲೆಯಲ್ಲಿ ನಡೆಯುವ ಕೆಲಸ. ಇಂದ್ರಿಯಕ್ಕೆ ಈ ಸಾಮರ್ಥ್ಯವಿಲ್ಲ ; ಅದರ ಕೆಲಸ ಪ್ರಚೋದನೆಯನ್ನು ಪಡೆಯುವುದಷ್ಟೇ. ಆದರೆ ಇಂದ್ರಿಯದ ಆಧಾರವಿಲ್ಲದೆ ಅರಿವು ಉಂಟಾಗುವುದಿಲ್ಲ.

ವೇದನೆಯಲ್ಲಿ ಅರಿವಿನ ಲಕ್ಷಣವಿಲ್ಲವೆಂದಲ್ಲ ; ಅರಿವಿನ ಅತ್ಯಂತ ಸರಳ ಸ್ವರೂಪವೇ ವೇದನೆ. ಆದರೆ ದೇಹದ ಸೀಮಾ ಪ್ರದೇಶದಲ್ಲಿ ವ್ಯವಸ್ಥಿತವಾದ ಇಂದ್ರಿಯಗಳಲ್ಲಿ ವಿವರಗಳನ್ನು ಗ್ರಹಿಸಲೆಂದೇ ಹೊರಗೆ ಮೈಚಾಚಿ ನಿಂತಿರುವ

ನರತಂತು (peripheral extremity of an afferent nerve) ವಸ್ತುವಿನ ಸಾನ್ನಿಧ್ಯದಲ್ಲಿ, ಅದರ ಸಂಸರ್ಗದ ಫಲವಾಗಿ ಪ್ರಚೋದಿತವಾಗುವುದು ವೇದನೆಯ ಮುಖ್ಯ ವಿವರ. ಹೀಗೆ ಕಾರ್ಯೋನ್ಮುಖವಾದ ನರತಂತುವಿನಲ್ಲಿ ಅರಿವಿನ ಪ್ರವಾಹ ಹರಿಯುತ್ತ ಮೆದುಳಿನಕಡೆ ಓಡುವಂಥ ಪ್ರವೃತ್ತಿಯೂ ವೇದನೆಯಲ್ಲಿ ಮುಖ್ಯ ವಿವರವೇ. ಆದರೆ ಪ್ರಚೋದಿತವಾದ ನರಪ್ರವಾಹಗಳೆಲ್ಲವೂ ಮೆದುಳನ್ನು ಮುಟ್ಟುವುದಿಲ್ಲ. ದುರ್ಬಲವಾದ ಪ್ರವಾಹ ಇಂದ್ರಿಯ ರಚನೆಯನ್ನು ದಾಟು ವುದೇ ಇಲ್ಲ; ಹಲವು ಮಾರ್ಗಮಧ್ಯದಲ್ಲಿ ಸ್ನಾಯುವಿನಲ್ಲೋ ಬೇರೆಲ್ಲೋ ಮರೆ ಯಾಗುತ್ತವೆ; ಕೆಲವು ಕಶೇರುಕದವರೆಗೂ ಹಾಗೂ ಹೀಗೂ ಬಂದು ಅಲ್ಲಿ ಶಕ್ತಿಯುಡುಗಿ ನಿಂತುಹೋಗುತ್ತವೆ; ಮತ್ತೆ ಕೆಲವು ಮಸ್ತಿಷ್ಕವನ್ನು ಸೇರಿ ಅಲ್ಲಿ ನಿರ್ದಿಷ್ಟ ಕ್ಷೇತ್ರಗಳಿಗೆ ನುಗ್ಗಿ ಅರಿವನ್ನು ಎಬ್ಬಿಸುತ್ತವೆ. ಮಸ್ತಿಷ್ಕವನ್ನು ಸೇರಿದಾಗಲೇ ಜ್ಞಾನವಾಹೀನರಕ್ರಿಯೆ ವೇದನೆಯೆನಿಸಿಕೊಳ್ಳುವುದು. ಇಂದ್ರಿಯಗಳಿಂದ ವಸ್ತುಗಳ ಭೌತಿಕ ವಿವರ ಗಳನ್ನು ಪಡೆಯುವ ಸಾಧನ ಜ್ಞಾನವಾಹೀನರತಂತುಗಳು (receptors) ಇವು ಪ್ರಚೋದಿತವಾದಾಗ ನರ ವ್ಯವಸ್ಥೆಯಲ್ಲಿ ಕ್ರಿಯಾಪಾರಂಪರ್ಯ ಒದಗುತ್ತದೆ; ಇದರಿಂದಾಗಿ ಒತ್ತಡ, ಸೆಳೆವು ಇಂದ್ರಿಯಸ್ಥಾನಗಳಲ್ಲಿ ಕಾಣಿಸಿಕೊಳ್ಳುತ್ತವೆ. ಇವೆಲ್ಲದರ ಫಲ ವಿಷಯ ಗ್ರಹಣ (reception). ಇದೇ ವೇದನೆಯ ಜೀವಾಳ.

ವೇದನೆ ಅರಿವಿನ ಅಂಶ ಎನ್ನುವಾಗ ಅದು ದೇಹಾತೀತವಾದ ಪ್ರವೃತ್ತಿ ಎಂದರ್ಥವಲ್ಲ; ಅಥವಾ ಅದೇ ಜ್ಞಾನದ ಬೀಜ ಎಂದರ್ಥವೂ ಅಲ್ಲ. ವೇದನೆ ಪ್ರಮುಖವಾಗಿ ದೈಹಿಕ ವ್ಯಾಪಾರ; ಮಸ್ತಿಷ್ಕ ಪ್ರದೇಶದಲ್ಲಿಯೇ ನಡೆದರೂ ನರ ತಂತುಗಳ ವ್ಯವಹಾರವಷ್ಟೇ. ದೇಹದ ಅಂಚಿನಲ್ಲಿ ಸಿದ್ಧವಾದ ಇಂದ್ರಿಯಗಳಲ್ಲಿ ಹುಟ್ಟಿದ ಭೌತಿಕ ಸಾಧನಗಳ ಮೂಲಕ ಮಸ್ತಿಷ್ಕದ ಐಂದ್ರಿಯ ಕ್ಷೇತ್ರ (sensory areas of the cortex) ಗಳಲ್ಲಿ ಪರ್ಯವಸಾನವಾಗುವುದು ವೇದನೆ. ಜ್ಞಾನವಾಹೀ ನರಗಳೂ, ನರಕಣಗಳೂ, ಕ್ರಿಯಾವಾಹೀನರಗಳೂ ಒಟ್ಟಿಗೆ ಕೆಲಸ ಮಾಡುವಂಥ ವ್ಯವಸ್ಥೆ ನರಮಂಡಲದಲ್ಲಿ ಉಂಟು. ನರ ತಂತುಗಳಲ್ಲಿ ನಡೆಯುವ ಆವೇಗ ಅಥವಾ ಪ್ರೇರಣೆ ವೇದನೆಯ ಮುಖ್ಯಲಕ್ಷಣ. ಜ್ಞಾನವಾಹಿ ನರಗಳಿಂದ ಸಂಗೃಹೀತವಾದ ವಿವರಗಳನ್ನು ಸ್ವೀಕರಿಸುವ ವ್ಯವಸ್ಥೆ ಮಸ್ತಿಷ್ಕ ಕೋಶದಲ್ಲುಂಟು. ಹೀಗೆ ಸ್ವೀಕರಿಸಲ್ಪಟ್ಟ ಐಂದ್ರಿಯ ವಿವರಗಳನ್ನು ಹಿಂದೆ ಪಡೆದುಕೊಂಡ ವಿವರಗಳೊಂದಿಗೆ ಬೆರೆಸುವುದೂ ಒಳಗೆ ಬರುವ ಮತ್ತು ಹೊರಗೆ ಹೋಗುವ ವಿವರಗಳನ್ನು ಹೊಂದಿಸುವುದೂ ಮಸ್ತಿಷ್ಕ ಕೋಶದಲ್ಲಿ ನಡೆಯುವ ಕೆಲಸವೇ.

ಇಂದ್ರಿಯಸ್ಥಾನಗಳಲ್ಲಿ ಉದ್ಭೂತವಾದ ನರಗಳು ಮಸ್ತಿಷ್ಕಕೋಶವನ್ನು ಸೇರು ವಾಗ, ಇವನ್ನು ಸಮರ್ಪಕವಾಗಿ ಸ್ವೀಕರಿಸಲು ಅಲ್ಲಿ ನಿರ್ದಿಷ್ಟಪ್ರದೇಶಗಳಿರುತ್ತವೆ. ಚರ್ಮದಿಂದ, ಮಾಂಸ-ಸ್ನಾಯು ಮೊದಲಾದ ದೈಹಿಕಸ್ಥಾನಗಳಿಂದ ಒದಗಿದ ವಿವರ ಗಳನ್ನು ಪೆರೈಟಲ್ (parietal) ಪ್ರದೇಶವೂ, ಕಣ್ಣಿನಿಂದ ಒಳಗೆ ಹಾದು ಬಂದ

ವಿವರಗಳನ್ನು ಆಕ್ಸಿಪಿಟಿಲ್ (occipital) ಪ್ರದೇಶವೂ, ಕಿವಿಯಿಂದ ಬಂದ ವಿವರಗಳನ್ನು ಟೆಂಪೊರಲ್ ( temporal ) ಪ್ರದೇಶವೂ ಸ್ವೀಕರಿಸುತ್ತವೆ. ಈ ಪ್ರದೇಶಗಳಿಗೆ ಯಾವುದಾದರೂ ಕಾರಣದಿಂದ ಗಾಸಿಯಾದರೆ ಆಯಾ ಇಂದ್ರಿಯ ವೃತ್ತಿಗಳೂ ಕ್ಲಿಷ್ಟವಾಗುತ್ತವೆ. ನಿದರ್ಶನಕ್ಕೆ ಆಕ್ಸಿಪಿಟಲ್ ಪ್ರದೇಶದಲ್ಲಿ ತೊಂದರೆಯಾದರೆ, ಕಣ್ಣು ಸರಿಯಾಗಿದ್ದರೂ ನೋಡುವುದು ಸಾಧ್ಯವಾಗದು. ನೋಟ ಕಣ್ಣಿನಲ್ಲಿ ಆರಂಭವಾದರೂ ಅದು ಅರಿವಿನ ನೆಲೆಯನ್ನು ಮುಟ್ಟಿ ವೇದನೆಯಾಗುವುದು ಮಸ್ತಿಷ್ಕ ಪ್ರದೇಶದಲ್ಲಿಯೇ. ಅದಲ್ಲದೆ, ಆಕ್ಸಿಪಿಟಲ್ ಪ್ರದೇಶವನ್ನು ಕೃತಕವಾಗಿ ವಿದ್ಯುದುತ್ತೇಜಿತ್ರಗೊಳಿಸಿದರೆ ದೀಪ್ತಿದರ್ಶನ, ಭ್ರಾಮಕವರ್ಣದರ್ಶನ, ನಕ್ಷತ್ರದರ್ಶನ ಮೊದಲಾದ ಅನುಭವವಾಗುವುದು ಸಾಧ್ಯ; ಹಾಗೆಯೇ ಟೆಂಪೊರಲ್ ಪ್ರದೇಶವನ್ನು ಕೃತಕವಾಗಿ ಉತ್ತೇಜಿಸಿದರೆ ಶಬ್ದಗಳು ಕೇಳಿಬರುತ್ತವೆ. ಇಲ್ಲಿ ಕಣ್ಣೂ, ಕಿವಿಯೂ ತಟಸ್ಥವಾಗಿದ್ದರೂ ಐಂದ್ರಿಯ ವ್ಯಾಪಾರ ನಡೆಯುತ್ತವೆ.

೨

## ವೇದನೆಯ ಲಕ್ಷಣಗಳು

ವೇದನೆ ಜ್ಞಾನಕ್ಕೆ ಎಂದರೆ ತಿಳುವಳಿಕೆಗೆ ಸಂಬಂಧಪಟ್ಟ ಪ್ರಸಂಗ. ಭಾವ, ಸಂಕಲ್ಪ ಇವುಗಳ ಸಂಬಂಧ ಇದಕ್ಕಿಲ್ಲ. ಜ್ಞಾನವೆಂದರೆ ನಾವಾಗಿ ಉದ್ದೇಶಪಟ್ಟು ವಿವರಗಳನ್ನು ಹುಡುಕಿ ಪಡೆಯುವಂಥ ಜ್ಞಾನವಲ್ಲ; ಆವರಣದಿಂದ ಪ್ರಚೋದನೆ ಇಂದ್ರಿಯಸ್ಥಾನವನ್ನು ಮುಟ್ಟಿದಾಗ ತಾವಾಗಿ ಒಳಬರುವ ವಿವರಗಳನ್ನು ಉದಾಸೀನ ವೃತ್ತಿಯಿಂದ ಮನಸ್ಸು ಗ್ರಹಿಸುವುದು ಇಲ್ಲಿನ ಜ್ಞಾನದ ಲಕ್ಷಣ. ವಿಷಯ ಪ್ರಬಲವಾಗಿದ್ದರೆ ಇಂದ್ರಿಯಗಳು ವಿಧಿಯಿಲ್ಲದೆ ಅದನ್ನು ಗ್ರಹಿಸಬೇಕಾಗುತ್ತದೆ: ಗ್ರಹಿಸಿದೊಡನೆ ವೇದನೆ ಆರಂಭವಾಗುತ್ತದೆ. ವೇದನೆಯೆಂದರೆ ಹೊರ ಆವರಣದ ವಿವರಗಳನ್ನು ತಿಳಿಯುವುದೇ ; ಅರಿವು ತನ್ನನ್ನು ತಾನು ತಿಳಿಯುವುದು ವೇದನೆಯೆನಿಸಿಕೊಳ್ಳುವುದಿಲ್ಲ. ಜಗತ್ತಿನಲ್ಲಿ ಇರುವ ವಸ್ತುಗಳೇ ಇಂದ್ರಿಯವೇದನೆಗೆ ವಿಷಯವಾಗುವುದು ; ಎಂದರೆ, ವೇದನೆ ಕೇವಲ ದೈಹಿಕಪ್ರಸಂಗ ಎನ್ನಲಾಗದು. ಅದು ಆರಂಭವಾಗುವುದು ಬಾಹ್ಯಜಗತ್ತಿನ ವಿವರವೊಂದರ ಆಸರೆಯಲ್ಲಿಯೇ. ಈ ದೃಷ್ಟಿಯಲ್ಲಿ ವೇದನೆ ಉಪಾಧಿವಿಶಿಷ್ಟವಾದುದು, ವಿಷಯಪ್ರಮುಖವಾದುದು. ಹೊರಗಿನ ವಸ್ತುಗಳನ್ನವಲಂಬಿಸದೆ, ವಿಷಯಪ್ರಮುಖವಾಗಿರುವ ಪ್ರವೃತ್ತಿಯನ್ನು ಸಂವೇದನೆ ( feeling ) ಎಂದು ನಿರ್ದೇಶಿಸುತ್ತೇವೆ. ವಿಷಯ - ವಿಷಯಿಸಂಬಂಧವಿಲ್ಲದೆ ವೇದನೆಯಾಗಲಾರದು ; ದೈಹಿಕ ವಿವರಗಳೇ ವಿಷಯವಾಗಿ ಅದಕ್ಕೆ ಅನುಗುಣವಾದ ಪ್ರವೃತ್ತಿಗಳೇ ವಿಷಯಿಯಾದರೆ ಅದು ಸಂವೇದನೆ.

ವೇದನೆಗಳನ್ನು ವರ್ಗೀಕರಣ ಮಾಡುವಾಗ ಇಂದ್ರಿಯ ಸ್ಥಾನಗಳನ್ನು ಪರಿಗಣಿಸುತ್ತಾರೆ. ರೂಪ, ಶಬ್ದ, ರಸ, ಗಂಧ, ಸ್ಪರ್ಶ ಇವು ಬೇರೆ ಬೇರೆ ಬಗೆಯ

ಪ್ರಚೋದಕ ವ್ಯಾಪಾರಗಳು. ಕಣ್ಣು ಶಬ್ದವನ್ನು ಗ್ರಹಿಸಲಾರದು ; ಕಿವಿ ರೂಪವನ್ನು ಅರಿಯಲಾರದು. ಇಂದ್ರಿಯಗಳಿಗೆ ನಿಯತ ವ್ಯಾಪಾರವಿರುವಂತೆ ಪ್ರಚೋದಕ ಸಾಮಗ್ರಿಗಳಲ್ಲಿಯೂ ನಿಯಮವಿದೆ ; ಹೊರಗಿನಿಂದ ಬರುವ ವಿವರಗಳನ್ನು ಅಧಿಕರಿಸಿ ಪಂಚೇಂದ್ರಿಯ ವೇದನೆಗಳನ್ನು ನಿರ್ದೇಶಿಸುವ ವಾಡಿಕೆಯಿದೆ. ಆಕಾರಗಳನ್ನೂ ಬಣ್ಣಗಳನ್ನೂ ಹಿಡಿಯುವುದು ಕಣ್ಣು, ಶಬ್ದಗಳನ್ನು ಸ್ವೀಕರಿಸುವುದು ಕಿವಿ, ರಸ ಸಾಮಗ್ರಿಯನ್ನೂ ರುಚಿಯನ್ನೂ ಗ್ರಹಿಸುವುದು ನಾಲಿಗೆ, ವಾಸನೆಯನ್ನು ಹಿಡಿಯುವುದು ಮೂಗು, ಸ್ಪರ್ಶವನ್ನು ತಿಳಿಯುವುದು ಚರ್ಮ ( ಹೊರಮೈ ). ಪ್ರತಿಯೊಂದು ಇಂದ್ರಿಯದಲ್ಲಿಯೂ ಜ್ಞಾನವಾಹೀ ಪ್ರವೃತ್ತಿಗಳಿದ್ದೂ, ಹೊಸ ವಿವರಗಳಿಂದ ಪ್ರಚೋದಿತವಾಗಿ ಪ್ರತಿಕ್ರಿಯೆಯನ್ನು ಒದಗಿಸುವ ವ್ಯವಸ್ಥೆ ( response mechanism ) ಯಿದೆ. ಈ ವ್ಯವಸ್ಥೆಗಳೂ ಇಂದ್ರಿಯ ವ್ಯಾಪಾರಕ್ಕೆ ತಕ್ಕಂತೆ ವಿಭಿನ್ನವಾಗಿರುತ್ತವೆ. ಕಣ್ಣಿನ ರಚನೆಯಲ್ಲಿಯೂ ಮೂಗಿನ ರಚನೆಯಲ್ಲಿಯೂ ಎಷ್ಟೊಂದು ಭೇದವಿದೆ ! ಪ್ರವೃತ್ತಿಗೆ ತಕ್ಕಂತೆ ರಚನೆ; ರಚನೆಗೆ ಅನುಗುಣವಾದ ವ್ಯಾಪಾರ; ವ್ಯಾಪಾರದಿಂದ ನಿರ್ದಿಷ್ಟವಾದ ವೇದನೆ. ಮೇಲೆ ಹೇಳಿದ ಐದು ಇಂದ್ರಿಯ ನಿರ್ದಿಷ್ಟವಾದ ವೇದನೆಗಳನ್ನು ವಿಶಿಷ್ಟ ವೇದನೆ ( special sensation ) ಗಳೆಂದು ವ್ಯವಹರಿಸುವ ವಾಡಿಕೆಯಿದೆ. ಇದಕ್ಕಿಂತ ಭಿನ್ನವಾಗಿ, ಎಲ್ಲ ಇಂದ್ರಿಯ ವೇದನೆಗಳಿಗೂ ಸಾಧಾರಣವಾದ, ಮೂಲಭೂತವಾದ ವೇದನೆ ಸಾಮಾನ್ಯ ( general ) sensation ) ಎನಿಸಿಕೊಳ್ಳುತ್ತದೆ.

ವೇದನೆಗಳನ್ನು ಇದೇ ಜಾಡಿನಿಂದ ಭೌತಿಕ, ರಸಾಯನಿಕ, ಉಷ್ಣಗ್ರಾಹಿ ಮತ್ತು ದೀಪ್ತಿಗ್ರಾಹಿ ಎಂದೂ ವಿಭಜಿಸುತ್ತಾರೆ. ಒಂದೊಂದು ಇಂದ್ರಿಯವೂ ಇವುಗಳಲ್ಲಿ ನಿರ್ದಿಷ್ಟವಾದ ಒಂದು ವೇದನೆಯನ್ನು ಪಡೆಯಬಲ್ಲುದು. ವೇದನೆಗಳ ಸ್ಥಾನ ಜ್ಞಾನವಾಹಿ ನರಗಳಲ್ಲಿದೆ ಎನ್ನುವ ಸೂತ್ರವನ್ನು ಹಿಡಿದು ಹೊರ ಮೈಮೇಲಿರುವ ವೇದನಾಸ್ಥಾನಗಳು ( exteroceptors ), ಮಾಂಸಖಂಡಗಳಲ್ಲಿರುವ ವೇದನಾಸ್ಥಾನಗಳು ( proprioceptors ) ಮತ್ತು ಆಂತರ ವ್ಯವಸ್ಥೆಯಲ್ಲಿರುವ ವೇದನಾಸ್ಥಾನಗಳು ( interoceptors ) ಎಂದು ವಿಭಾಗ ಮಾಡುವ ಪದ್ಧತಿಯೂ ಉಂಟು. ಮೊದಲನೆಯದಕ್ಕೆ ನಿದರ್ಶನ ಕಣ್ಣು, ಕಿವಿ ; ಎರಡನೆಯದಕ್ಕೆ ಸ್ಪರ್ಶೇಂದ್ರಿಯ ( ಮಾಂಸಖಂಡ, ಸ್ನಾಯು ಇತ್ಯಾದಿ ) ; ಮೂರನೆಯದಕ್ಕೆ ನಾಲಿಗೆ. ಆಂತರವ್ಯವಸ್ಥೆ ಯಿಂದ ಉಂಟಾಗುವ ವೇದನೆಗಳಲ್ಲಿ ಹಸಿವೆ, ನೀರಡಿಕೆ, ಹೊಟ್ಟೆ ನೋವು, ಕಾಮವಿಕಾರ ಇವು ಸೇರಿವೆ.

ವೇದನೆಗಳನ್ನು ಅಳೆಯುವ ಹವ್ಯಾಸ ಒಂದು ಕಾಲಕ್ಕೆ ಮನಃಶಾಸ್ತ್ರದಲ್ಲಿ ತುಂಬ ಬಳಕೆಯಲ್ಲಿದ್ದಿತು. ವೆಬರ್ ಎಂಬಾತ ೧೮೩೪ ರಲ್ಲಿ ಹಲವಾರು ಪ್ರಯೋಗಗಳನ್ನು ನಡೆಸಿ ಸಾಪೇಕ್ಷ ದೇಹಲೀಸ್ಥಾಯಿತ್ವದ ನಿಯಮ ( law of the constancy of relative thresholds ) ವನ್ನು ನಿರೂಪಿಸಿದನು. ಈ ನಿಯಮವನ್ನು ಅವಲಂಬಿಸಿ




**ಚಿತ್ರ ೮**

**ಕಣ್ಣು ನೋಡುವುದು ಹೇಗೆ ?**

ನಾವು ಯಾವುದಾದರೂ ವಸ್ತುವನ್ನು ನೋಡುವಾಗ ಕಣ್ಣಿನಲ್ಲಿ ಅದರ ತಲೆಕೆಳಗು ಪ್ರತಿಕೃತಿ ಒದಗುತ್ತದೆ. ಅದು ಚಾಕ್ಷುಷ ನರ (optic nerves) ಗಳ ಮೂಲಕ ಮಸ್ತಿಷ್ಕವನ್ನು ಮುಟ್ಟಿದಾಗಲೇ ವಸ್ತುವಿನ ನೈಜ ಸ್ವರೂಪಜ್ಞಾನ ಉಂಟಾಗುವುದು. ಕಣ್ಣಿನ ಕೆಲಸ ಹೊರಗಿನ ವಿವರಗಳನ್ನು ಸಂಗ್ರಹಿಸುವುದು ; ಈ ಕೆಲಸವನ್ನು ನಿರ್ವಹಿಸುವಾಗ ಕಣ್ಣು ಕ್ಯಾಮೆರಾದಂತೆ ವರ್ತಿಸುತ್ತದೆ. ಕಣ್ಣಿನ ರನೆಚಯು ಸ್ಥೂಲ ಪರಿಚಯ ಮೇಲಿನ ಚಿತ್ರದಿಂದಾಗುತ್ತದೆ.

ಫೆಖ್ನರ್ ಮಾನಸ ಭೌತಶಾಸ್ತ್ರ (psychophysics) ವನ್ನು ನಿರ್ಮಿಸಿದನು. ಈ ಶಾಸ್ತ್ರದ ಆಸರೆಯಲ್ಲಿ ವೇದನೆಗಳನ್ನು ಕುರಿತ ಸಂಶೋಧನೆಗಳು ವಿಪುಲವಾಗಿ ಮೈದಳೆದುವು. ವೇದನೆಗಳ ಮಾಪನಪದ್ಧತಿಯ ರೂಪುರೇಷೆ ಈ ಸಂಶೋಧನೆಗಳಿಂದ ಸ್ಪಷ್ಟವಾಯಿತು.

೩

## ದರ್ಶನೇಂದ್ರಿಯ

ಕಣ್ಣು ನೋಡುವ ಶಕ್ತಿಯುಳ್ಳ ಇಂದ್ರಿಯ. ನೋಡುವುದೆಂದರೆ ಹೊರಗಿರುವ ವಸ್ತುಗಳ ರೂಪ, ಬಣ್ಣ, ಮೈಲಕ್ಷಣ ಮೊದಲಾದ ವಿವರಗಳನ್ನು ಅರಿಯುವುದೆಂದರ್ಥ. ವಸ್ತುವಿನ ಮೇಲೆ ಬಿದ್ದ ಬೆಳಕು ಕಣ್ಣಿನೊಳಗೆ ಹಾದುಬಂದಾಗ ವಸ್ತು ಕಾಣಿಸುತ್ತದೆ; ನೋಡುವುದಕ್ಕೂ ಬೆಳಕಿಗೂ ಹೀಗೆ ನಿಕಟ ಸಂಬಂಧವುಂಟು. ಬೆಳಕು ವಿದ್ಯುದಯಸ್ಕಾಂತ ವೀಚಿಗಳು (electromagnetic waves); ಆಕಾಶದಲ್ಲಿ ವಿದ್ಯುತ್ಪ್ರವಾಹ ಸಮವೇಗದಲ್ಲಿ ಹರಿದಾಗ ವಿಕಿರಣಶಕ್ತಿ (radiant energy) ಉಂಟಾಗುತ್ತದೆ; ವಿದ್ಯುತ್ಪ್ರವಾಹದಲ್ಲಿ ಸಮವೇಗ ಭಂಗವಾದರೆ ಈ ವಿಕಿರಣಶಕ್ತಿ ಸ್ಪಂದಿಸುತ್ತದೆ. ಈ ಶಕ್ತಿಯ ಅಲೆಗಳಿಂದಲೇ ಬೆಳಕು. ಈ ಶಕ್ತಿಯನ್ನು ಗ್ರಹಿಸುವ ವ್ಯವಸ್ಥೆ ಕಣ್ಣಿನಲ್ಲಿದೆ. ಕಣ್ಣಿನ ರಚನೆಯಲ್ಲಿ ಬೆಳಕಿಗೆ ಅಳವಡಿಸಲ್ಪಟ್ಟ ಮಿಲಿಯನ್‌ಗಟ್ಟಲೆ ನರಕಣಗಳಿವೆ; ಇವು ತುಂಬಿರುವ 'ರೆಟಿನ' ಕಣ್ಣುಗುಡ್ಡೆಯ ಒಳಭಾಗದಲ್ಲಿದೆ. ಬೆಳಕಿನ ಅಲೆಗಳು ಕಾರ್ನಿಯ ಎನ್ನುವ ಸ್ಥಳವನ್ನು ಹೊಕ್ಕು ಅಲ್ಲಿಂದ ಪ್ಯೂಪಿಲ್ ಎನ್ನುವ ಸಂದಿನಿಂದ ಹಾದು, ಲೆನ್ಸ್ ಮೇಲೆ ಬಿದ್ದು ಕತ್ತಲೆಕೋಣೆಯಕಡೆ ಬಗ್ಗಿ ಕಡೆಗೆ ರೆಟಿನದ ಮೇಲೇ ಸಂಕುಚಿತವಾಗಿ ಬೀಳುತ್ತವೆ. ಬೆಳಕನ್ನು ಗ್ರಹಿಸಲೆಂದೇ ಪ್ರಯುಕ್ತವಾದ ರೆಟಿನ-ಪರದೆಯನ್ನು ಬೆಳಕು ಮುಟ್ಟಿದಾಗ ಅದರ ಅಲೆದಾಟ ನಿಲ್ಲುತ್ತದೆ. ಇಲ್ಲಿ ಕೆಲವು ಪ್ರವೃತ್ತಿಗಳು ಆರಂಭವಾಗಿ ಕಣ್ಣಿಗೆ ಹೊಂದಿಕೊಂಡಿರುವ ನರತಂತುಗಳ ಮೂಲಕ ಮಸ್ತಿಷ್ಕದ ಆಕ್ಸಿಪಿಟಲ್ ಪ್ರದೇಶವನ್ನು ಸೇರುತ್ತವೆ. ಆಗ ವಸ್ತುವು ಕಂಡಿತು ಎನ್ನಬಹುದು; ವಸ್ತು ಎದುರಿಗಿದೆ ಎನ್ನುವ ಅರಿವು ನಮಗುಂಟಾಗುತ್ತದೆ. (ಚಿತ್ರ-೯) ರೆಟಿನದಿಂದ ನಮಗೆ ಬಣ್ಣದ ಅರಿವಾಗುತ್ತದೆ. ಬಣ್ಣಗಳಲ್ಲಿ ಬಿಳಿ, ಕಪ್ಪು, ಬೂದು ಇವು ನಿರ್ವರ್ಣ (achromatic) ಎನಿಸಿಕೊಳ್ಳುತ್ತವೆ; ಕಾಮನ ಬಿಲ್ಲಿನಲ್ಲಿ ಇರುವ ಬಣ್ಣಗಳು ವರ್ಣಾತ್ಮಿಕ (chromatic). ಕಾಮನ ಬಿಲ್ಲಿನ ಏಳು ಬಣ್ಣಗಳು ಕಲೆತು ಸಾವಿರಾರು ಬಣ್ಣಗಳಾಗುತ್ತವೆ. ನಮ್ಮ ಕಣ್ಣು ೩,೦೦,೦೦೦ ಬಣ್ಣಗಳನ್ನು ಗ್ರಹಿಸಬಲ್ಲುದಂತೆ! ಬಣ್ಣಗಳನ್ನು ಕಣ್ಣು ಗ್ರಹಿಸುವಾಗ ಪ್ರಮುಖ ವರ್ಣನಿರ್ದೇಶಮಾಡುವ ಗುಣ ಇರುವುದು ಮುಖ್ಯ. ಸೌರವರ್ಣವ್ಯೂಹದಲ್ಲಿ ಕೆಂಪು, ನೀಲಿ, ಹಸಿರು, ಹಳದಿ ಇವು ಪ್ರಮುಖವರ್ಣಗಳು. ಬಣ್ಣಗಳಲ್ಲಿ ಮತ್ತೊಂದು ಗುಣವುಂಟು. ಬಣ್ಣಗಳು ತಿಳಿ, ಗಟ್ಟಿ ಎನ್ನುವ ವಿಭಾಗದಿಂದಲೂ

ಬೇರೆಬೇರೆಯಾಗುತ್ತವೆ. ಕಪ್ಪು-ಬಿಳಿಗಳ ನಡುವೆ ಎಷ್ಟು ಬಣ್ಣಗಳಿರುತ್ತವೆ! ಇವುಗಳ ಮಿಶ್ರಣದಿಂದ ಉಳಿದ ಬಣ್ಣಗಳೂ ವಿಭಿನ್ನವಾಗುತ್ತವೆ. ನೀಲಿಯಲ್ಲಿ ಕಪ್ಪು ಹೆಚ್ಚಾಗಿದ್ದರೆ ಗಟ್ಟಿನೀಲಿ, ಘನನೀಲ; ಬಿಳಿಪು ಹೆಚ್ಚಾಗಿದ್ದರೆ ತಿಳಿನೀಲಿ, ಶುಭ್ರನೀಲ. ಹೀಗೆಯೇ ಇತರ ಬಣ್ಣಗಳೂ ಬೇರೆಬೇರೆಯಾಗಿ ಕಾಣುತ್ತವೆ. ಈ ಗುಣವನ್ನು ಪ್ರಕಾಶ (brightness) ಎಂದು ನಿರ್ದೇಶಿಸುತ್ತಾರೆ. ಬಣ್ಣದ ಮೂರನೆಯ ಗುಣ ವರ್ಣ ಗಾಂಭೀರ್ಯ (saturation). ಬಣ್ಣದ ನೈಜಗುಣ ಎಷ್ಟು ಶುದ್ಧವಾಗಿ ಉಳಿದಿವೆ ಎನ್ನುವುದರ ಮೇಲೆ ಇದು ನಿರ್ದಿಷ್ಟವಾಗುತ್ತದೆ ಕೆಂಪು ತೀರ ಕೆಂಪಾಗಿರಬಹುದು, ನಸುಗೆಂಪಾಗಿರಬಹುದು.

ಬಣ್ಣಗಳಲ್ಲಿ ಮೌಲಿಕ (primary) ಬಣ್ಣಗಳುಂಟು; ಇವು ಸರಳ, ಶುದ್ಧ. ಆದರೆ ಬಣ್ಣಗಳು ಕಲೆತಿರುವುದೂ ಉಂಟು, ಇವು ಸಂಕೀರ್ಣ (compound) ಅಥವಾ ಮಿಶ್ರಬಣ್ಣಗಳು. ಆದರೆ ಮಿಶ್ರಬಣ್ಣದ ವೇದನೆಯಾಗುವಾಗ ಒಂದೇ ಬಣ್ಣದ ಅರಿವಾಗುವುದಲ್ಲದೆ, ಬೇರೆಬೇರೆ ಬಣ್ಣಗಳು ಸೇರಿದಂತೆ ಭಾಸವಾಗುವುದಿಲ್ಲ. ಕೆಂಪು, ಹಳದಿ, ಹಸಿರು ಮತ್ತು ನೀಲಿ ಇವು ಪ್ರಮುಖ ಮೌಲಿಕ ಬಣ್ಣಗಳೆಂದು ಬಗೆದು ಅವುಗಳು ಕಲೆತಾಗ ಯಾವ ಬಣ್ಣ ಉತ್ಪನ್ನವಾಗುವುದೆಂದು ಪ್ರಯೋಗಗಳ ಮೂಲಕ ನಿರ್ಧರಿಸಿದ್ದಾರೆ. ಈ ಸಂವಿಧಾನಕ್ಕೆ ವರ್ಣಮಿಶ್ರಣ ಎಂದು ಹೆಸರು. ಮನಃಶಾಸ್ತ್ರದ ಪ್ರಯೋಗಶಾಲೆಯಲ್ಲಿ ತಿರುಗುವ ಚಕ್ರದ ಮೇಲೆ ವೃತ್ತಾಕಾರದ ಹಲಗೆಯನ್ನಿಟ್ಟು ಅದಕ್ಕೆ ಎರಡು ಅಥವಾ ಇನ್ನೂ ಹೆಚ್ಚಿನ ಬಣ್ಣಗಳನ್ನುಳ್ಳ ವೃತ್ತಾಕಾರದ ಕಾಗದ ಗಳನ್ನು ಅಂಟಿಸುತ್ತಾರೆ. ಚಕ್ರ ತಿರುಗಿದರೆ ಈ ಕಾಗದವೂ ತಿರುಗುವುದು. ತಿರುಗಿದಾಗ ಬೇರೆಬೇರೆ ಬಣ್ಣಗಳು ಕಲೆತು ರೆಟನದ ಮೇಲೆ ಒಂದೇ ಹೊಸದೊಂದು ಬಣ್ಣ ಕಾಣಿಸುತ್ತದೆ.

ವರ್ಣಮಿಶ್ರಣವನ್ನು ಅಧ್ಯಯನಮಾಡಿದಾಗ ಮೂರು ನಿಯಮಗಳು ಎದ್ದು ನಿಲ್ಲುತ್ತವೆ. ಪ್ರತಿಯೊಂದು ಬಣ್ಣಕ್ಕೂ ಅದಕ್ಕೆ ಸಮಾನವಾದ, ವಿರುದ್ಧವಾದ ಅಥವಾ ಪೂರಕವಾದ ಬಣ್ಣ ಇರುತ್ತದೆ; ಇವೆರಡನ್ನೂ ಸರಿಯಾದ ಪ್ರಮಾಣದಲ್ಲಿ ಮಿಶ್ರಣ ಮಾಡಿದರೆ ಬೂದು ಅಥವಾ ಬಿಳಿ ಕಾಣಿಸಿಕೊಳ್ಳುತ್ತದೆ. ನಿದರ್ಶನಕ್ಕೆ ಹಳದಿ ಮತ್ತು ನೀಲಿ, ಇವು ಪೂರಕವರ್ಣಗಳು. ಇವು ಬೆರೆತಾಗ ಒಂದನ್ನೊಂದು ತೊಡೆದುಹಾಕಿ ಮಧ್ಯವರ್ತಿಯಾದ ಬೂದು ಬಣ್ಣವನ್ನು ಹೊರಹೊಮ್ಮಿಸುತ್ತವೆ. ಇದು ಮೊದಲನೆಯ ನಿಯಮ. ಹೀಗೆ ಪರಸ್ಪರ ಪೂರಕವಲ್ಲದ ಬಣ್ಣಗಳು ಬೆರೆತಾಗ ಎರಡೂ ಬಣ್ಣಗಳ ಪ್ರಮಾಣವನ್ನವಲಂಬಿಸಿ ಮಧ್ಯವರ್ತಿಯಾದ ಛಾಯೆಯೊಂದನ್ನು ಕಾಣಿಸುತ್ತವೆ. ಕೆಂಪು ಮತ್ತು ನೀಲಿ ಇವು ಬೆರೆತಾಗ ಕೆಂಪಿನ ಪ್ರಮಾಣ ಹೆಚ್ಚಾದರೆ ಆರಕ್ತ (pink), ನೀಲಿಯ ಬಣ್ಣ ಹೆಚ್ಚಾದರೆ ಬದನೇಕಾಯಿ ಬಣ್ಣ (violet) ಆಗುತ್ತದೆ. ಇದು ಎರಡನೆಯ ನಿಯಮ. ಮಿಶ್ರಣಗಳು ಬೂದು ಅಥವಾ ತಿಳಿ

ಬಣ್ಣಗಳನ್ನು ಉಂಟುಮಾಡುವಂತಿದ್ದರೆ ಅವುಗಳ ಮಿಶ್ರಣ ಅದೇ ಬಣ್ಣಗಳನ್ನು ಉಂಟುಮಾಡುತ್ತದೆ. ಇದು ಮೂರನೆಯ ನಿಯಮ.

ನೋಟದ ವ್ಯಾಪ್ತಿಯಲ್ಲಿ ಇರುವ ಪ್ರತಿ ಬಣ್ಣವೂ ಅದೇ ವ್ಯಾಪ್ತಿಯಲ್ಲಿರುವ ಇತರ ಬಣ್ಣಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ, ಮತ್ತು ಅವುಗಳಿಂದ ಪ್ರಭಾವಿತವಾಗುತ್ತದೆ. ಈ ನಿಯಮದ ಆಧಾರದಮೇಲೆ ಹಿನ್ನೆಲೆಯ ಬಣ್ಣದಿಂದ ಮುಂದಿರುವ ಬಣ್ಣ ಪ್ರಭಾವಿತವಾಗುತ್ತದೆ. ಇದಕ್ಕೆ ವಿರೋಧ (contrast) ಎಂದು ಹೆಸರು. ಯಾವುದಾದರೂ ಬಣ್ಣ ಕಾಣುತ್ತಿದ್ದರೆ ಅದರ ಪರಿಸರದಲ್ಲಿ ಈ ಬಣ್ಣಕ್ಕೆ ಪೂರಕವಾದ ಬಣ್ಣ ಇರದಿದ್ದರೂ ಈ ಬಣ್ಣದ ಛಾಯೆ ಕಾಣುತ್ತದೆ. ನಿದರ್ಶನಕ್ಕೆ ಹಳದಿಯ ಬಣ್ಣವನ್ನು ದಿಟ್ಟಿಸಿ ನೋಡುತ್ತಿದ್ದರೆ ಅದರ ಸುತ್ತ ನೀಲಿಯ ಛಾಯೆ ಯನ್ನು ಕಾಣಬಹುದು. ವಿರೋಧವಾದ ಬಣ್ಣಗಳು ಹತ್ತಿರವೇ ಇದ್ದರೆ ಈ ಮೇಲಿನ ನಿಯಮ ಅನ್ವಯಿಸುವುದಿಲ್ಲ. ಅವು ದೂರದೂರವಿದ್ದರೆ ಪೂರಕಛಾಯೆ ಕಾಣಿಸುವ ಸೌಲಭ್ಯ ಹೆಚ್ಚು. ಬಣ್ಣದ ಸುತ್ತ ಚೌಕಟ್ಟು ಇಲ್ಲದಿದ್ದರೆ, ಮೇರೆ ಕಾಣದಿದ್ದರೆ ವಿರೋಧ ಪ್ರಭಾವ ಹೆಚ್ಚು.

ವಿರೋಧದಲ್ಲಿ ಏಕಕಾಲಿಕ (simultaneous) ಮತ್ತು ಪಾರಂಪರ್ಯ (successive)ಎಂದು ಎರಡುಬಗೆಗಳು. ಒಂದೇ ಬಣ್ಣವನ್ನು ದಿಟ್ಟಿಸಿ ನೋಡುತ್ತಿರುವಾಗ ಸ್ವಲ್ಪ ಸಮಯದನಂತರ ಅದರ ಸುತ್ತ ಅದಕ್ಕೆ ಪೂರಕವಾದ ಬಣ್ಣದ ಹರವು ಕಾಣಿಸಿ ಕೊಳ್ಳುತ್ತದೆ. ಇದು ಏಕಕಾಲಿಕ ವಿರೋಧ. ಯಾವುದಾದರೂ ಬಣ್ಣವನ್ನೇ ದಿಟ್ಟಿಸಿ ನೋಡುತ್ತಿದ್ದು ಅನಂತರ ಬಿಳಿ ಅಥವಾ ಬೂದು ಬಣ್ಣದ ಕಡೆ ಕಣ್ಣು ತಿರುಗಿಸಿದರೆ ಮೊದಲಿನ ಬಣ್ಣದ ಪೂರಕಬಣ್ಣ ಕಾಣುತ್ತದೆ. ಇದು ಪಾರಂಪರ್ಯವಿರೋಧ. ಈ ವರ್ಣವಿರೋಧ ಪ್ರವೃತ್ತಿಯ ಕಾರಣ ಏನೆಂದು ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಮನಃಶಾಸ್ತ್ರದ ಪ್ರಯೋಗಶಾಲೆಯಲ್ಲಿ ಇದರ ಅಧ್ಯಯನ ಬಹಳವಾಗಿ ನಡೆದಿದೆ.

ಪ್ರಚೋದಕವಸ್ತುವನ್ನು ಕಣ್ಣು ನೋಡುತ್ತಿದ್ದು, ಕಣ್ಣನ್ನು ಬೇರೆಡೆ ತಿರುಗಿಸಿ ದಾಗ ಅಲ್ಲಿ ಅದೇ ಪ್ರಚೋದಕವಸ್ತುವಿನ ಪ್ರತಿಬಿಂಬ ಕಾಣುವಂತೆ ಭಾಸವಾಗುತ್ತದೆ. ಇದಕ್ಕೆ ಪಶ್ಚಾತ್‌ಪ್ರತಿಕೃತಿ ( after image ) ಎಂದು ಹೆಸರು. ಕಣ್ಣು ಬಹಳ ಹೊತ್ತು ಬೆಳಕು ಅಥವಾ ಬಣ್ಣದ ಕಡೆ ನೋಡುತ್ತಿದ್ದರೆ, ಪ್ರಚೋದಕವಸ್ತು ಮರೆಯಾದಾ ಗಲೂ ನೋಟ ಸ್ವಲ್ಪ ಹೊತ್ತು ಮುಂದುವರೆಯುತ್ತದೆ. ನೋಟವಿದ್ದರೂ ಅದಕ್ಕೆ ಆಧಾರವೆನ್ನಬಹುದಾದ ವಸ್ತುವಿರುವುದಿಲ್ಲ; ಇದು ಕೇವಲ ಆಂತರಿಕವಾದ ಪ್ರತಿಕ್ರಿಯೆ. ಇದು ಭ್ರಾಂತಿಯೆನ್ನುವಹಾಗಿಲ್ಲ; ಏಕೆಂದರೆ ವೇದನೆಯಿರುತ್ತದೆ. ದೇಹವಿಜ್ಞಾನಿ ಗಳು ಇದನ್ನು ಪಶ್ಚಾತ್‌ವೇದನೆಯೆಂದೇ ನಿರ್ದೇಶಿಸುತ್ತಾರೆ. ಬಣ್ಣವೊಂದನ್ನು (ಕೆಂಪು) ನೀವು ಮೂವತ್ತು ಸೆಕೆಂಡುಗಳವರೆಗೆ ದಿಟ್ಟಿಸಿ ನೋಡುತ್ತಿದ್ದು ಅನಂತರ ಕಣ್ಣನ್ನು ಬಿಳಿಯ ಕಾಗದದ ಮೇಲೆ ತಿರುಗಿಸಿದರೆ ಮೊದಲಿನ ಬಣ್ಣಕ್ಕೆ ಪೂರಕ

ವಾದ ಬಣ್ಣ (ಹಸಿರು) ಕಾಣುತ್ತದೆ. ಮೊದಲಬಣ್ಣ ಹಳದಿಯಾದರೆ ಈಗ ಕಾಣುವುದು ನೀಲಿ; ಮೊದಲ ಬಣ್ಣ ಬಿಳಿಯಾದರೆ ಈಗ ಕಾಣುವುದು ಕರಿ. ಇದಕ್ಕೆ ಪ್ರತಿ-ಪಶ್ಚಾತ್‌ಪ್ರತಿಕೃತಿ ( negative after image ) ಎಂದು ಹೆಸರು. ಪಾರಂಪರ್ಯ ವಿರೋಧ ನಿಯಮವೇ ಇದರ ಮೂಲಕಾರಣ. ಮೊದಲಿನ ಬಣ್ಣವನ್ನೇ ಕಣ್ಣು ಹೊರಳಿಸಿದ ಮೇಲೂ ಕಂಡರೆ ಅದು ಅನು - ಪಶ್ಚಾತ್‌ಪ್ರತಿಕೃತಿ ( positive after image). ಪಶ್ಚಾತ್ ಪ್ರತಿಕೃತಿಯು ಹೇಗಿರುವುದು ಎನ್ನಲು ಹಿನ್ನಲೆಯ ಬಣ್ಣ, ಮೊದಲ ಬಣ್ಣದ ತೀಕ್ಷ್ಣತೆ ಇವು ನೆರವಾಗುತ್ತವೆ.

೪

ಆವರಣದ ಶಬ್ದವನ್ನು ಕಿವಿ ಗ್ರಹಿಸುತ್ತದೆ. ಇದಕ್ಕೆ ಅನುಕೂಲಿಸುವಂತೆ ಕಿವಿಯ ರಚನೆಯಲ್ಲಿ ಹೊರಗಿನ ಶಬ್ದತರಂಗಗಳನ್ನು ಸಂಗ್ರಹಿಸಲು ಹೊರಕಿವಿ ಪ್ರಯುಕ್ತವಾಗಿದೆ ಶಬ್ದತರಂಗಗಳು ಮಧ್ಯಕಿವಿಯಿಂದ ಒಳಕಿವಿಗೆ ಮುಟ್ಟಿದಾಗ ಇಲ್ಲಿ ಕಾಖ್ಲಿಯ ಎನ್ನುವ. ಅಂಗದಲ್ಲಿ ಪರ್ಯವಸಾನವಾಗುತ್ತವೆ. ಶಬ್ದತರಂಗಗಳು ಶ್ರೋತ್ರವೇದನೆಗಳಿಗೆ ಪ್ರಚೋದಕಸಾಮಗ್ರಿ. ಇವು ಗಾಳಿ ಅಲೆಗಳಂತೆ ಅಲುಗಾಡಿದಾಗ ಉಂಟಾಗುತ್ತವೆ. ಅಲೆಗಳು ಗಾಳಿಯಲ್ಲಿ ತುಂಬ ಸಂಕುಚಿತವಾದಾಗ ಒತ್ತಡ ಹೆಚ್ಚಿ ತೀವ್ರವಾಗುತ್ತವೆ ಇದರಿಂದ ಉಚ್ಚಸ್ವರ ಹೊರಡುತ್ತದೆ, ಅಲೆಗಳು ಒಂದರಮೇಲೊಂದು ಮತ್ತೆ ಮತ್ತೆ ಎರಗುತ್ತಿದ್ದರೆ ಅವುಗಳ ನೈರಂತರ್ಯ ಸಿದ್ಧವಾಗುತ್ತದೆ; ಇದರಿಂದ ತಾರ ಸ್ಥಾಯಿಯ ಶಬ್ದ ಹೊರಡುತ್ತದೆ. ಕಿವಿಗೆ ಸಂಬಂಧಪಟ್ಟ ವೇದನೆಗಳಲ್ಲಿ ಸ್ವರ (tone), ಶಬ್ದ ( noise ) ಎಂದು ಎರಡುಬಗೆ-ಸ್ವರ ಶುದ್ಧವಾದುದು ಸ್ಥಿರವಾದುದು ; ಶಬ್ದ ದುರ್ಬಲ ಮತ್ತು ಚಂಚಲ. ಸ್ವರಗಳಿಗೆ ಉಚ್ಚ ( loud ), ತಾರ ( pitch ), ಘನ ( volume ) ಮತ್ತು ಪ್ರಕಾಶ ( bright ) ಎನ್ನುವ ಗುಣಗಳನ್ನು ಹೇಳುತ್ತಾರೆ. ಉಚ್ಚ ಮತ್ತು ತಾರಗಳ ವಿವರಣೆ ಮೊದಲೇ ಬಂದಿದೆ. ತೀವ್ರತೆಯಲ್ಲಿ ಹೆಚ್ಚಿ, ನೈರಂರ್ಯದಲ್ಲಿ ಕುಗ್ಗುವ ಲಕ್ಷಣವೇ ಘನ ಎನಿಸಿಕೊಳ್ಳುತ್ತದೆ. ತೀವ್ರತೆಯಲ್ಲಿಯೂ ನೈರಂತರ್ಯದಲ್ಲಿಯೂ ಹೆಚ್ಚುವುದು ಪ್ರಕಾಶ ಎನ್ನುವ ಗುಣವಿಶೇಷ.

ಕಿವಿಯಲ್ಲಿ ಶಬ್ದಸಮುದಾಯವನ್ನು ವಿಶ್ಲೇಷಣಮಾಡುವ ಸಾಮರ್ಥ್ಯವಿದೆ. ಅಲೆಗಳನ್ನು ಬಿಡಿಬಿಡಿಯಾಗಿ ಗ್ರಹಣಮಾಡುವ ಶಕ್ತಿ ಅದಕ್ಕುಂಟು. ಕಿವಿಯ ವೇದನೆ ಯಲ್ಲಿ ಸಂಕೀರ್ಣ ಸ್ವರಗಳೂ ಖಂಡಸ್ವರಗಳೂ ಸೇರಿಬರುತ್ತವೆ. ನೈರಂತರ್ಯ ವೈವಿಧ್ಯವುಳ್ಳ ಶಬ್ದಪ್ರಚೋದನೆಯಿಂದ ಕಿವಿ ಏಕಕಾಲದಲ್ಲಿ ಪ್ರಚೋದಿತವಾದಾಗ, ಸ್ವರಗಳು ಕೂಡಿಕೊಳ್ಳುತ್ತವೆ. ಇವಕ್ಕೆ ಸಂಯೋಗಸ್ವರ ( combination tones ) ಗಳೆಂದು ಹೆಸರು. ಒಂದು ಸ್ವರ ಮತ್ತೊಂದನ್ನು ಮುಳುಗಿಸುವುದು ಆಚ್ಛಾದನೆ ( masking ) ಎನಿಸಿಕೊಳ್ಳುತ್ತದೆ.

ಸ್ಪರ್ಶೇಂದ್ರಿಯವು ಸ್ಪರ್ಶ, ಉಷ್ಣಾಂಶ, ದೈಹಿಕವೇದನೆಗಳು, ಸಮಸ್ಥಿತಿಯ ವೇದನೆಗಳಿಗೆ ಕಾರಣ. ಇದರ ಇಂದ್ರಿಯ ಚರ್ಮ. ಚರ್ಮವು ಅದರ ಹರವಿನಲ್ಲೆಲ್ಲ ಸಮಾನವಾಗಿ ಉತ್ತೇಜಿತವಾಗಲಾರದು ; ಕೆಲವು ಸ್ಥಳಗಳಲ್ಲಿ ನಿರ್ದಿಷ್ಟ ವೇದನೆಗಳು ಒದಗುತ್ತವೆ; ಒಂದೇ ಬಗೆಯ ಪ್ರಚೋದಕಕ್ಕೆ ಒಂದೇ ಬಗೆಯ ಪ್ರತಿಕ್ರಿಯೆ ಈ ಸ್ಥಳಗಳಲ್ಲಿ ಮಾತ್ರ ಸಾಧ್ಯ. ಸ್ಪರ್ಶ, ಉಷ್ಣ, ಶೀತ, ನೋವು ಈ ನಾಲ್ಕು ವೇದನೆಗಳಿಗೆ ನಿರ್ದಿಷ್ಟವಾದ ಸ್ಥಳಗಳು ಚರ್ಮದಲ್ಲೆಲ್ಲ ಅಲ್ಲಲ್ಲಿ ಹರಡಿವೆ. ಈ ಸ್ಥಳಗಳಲ್ಲಿ ಜ್ಞಾನವಾಹೀನರಗಳ ಕೊನೆ ಅಡಗಿರುವುದರಿಂದ ಇಲ್ಲಿ ವೇದನೆ ಸಾಧ್ಯವಾಗುತ್ತದೆ. ಸ್ಪರ್ಶ ಮೃದುವೋ ಕರ್ಕಶವೋ ಶೀತವೋ ಉಷ್ಣವೋ ಎನ್ನುವುದು ಈ ಜ್ಞಾನವಾಹಿನರಗಳ ಕೆಲಸದಿಂದಲೇ ವೇದ್ಯವಾಗುತ್ತದೆ. ಚಲನೆಯ ಅನುಭವ ದೇಹದಲ್ಲಿ ಮಾಂಸಖಂಡಗಳು, ಸ್ನಾಯುಗಳು, ಸಂಧಿಗಳು ಇವುಗಳಿಂದ ಒದಗುತ್ತದೆ. ಇವೆಲ್ಲ ಅಂತರಿಂದ್ರಿಯಗಳು. ಜಠರಕೋಶದಲ್ಲಿ ಮತ್ತು ಇತರ ಅಂಗಾಂಗಗಳಲ್ಲಿ (ಕಂಠ, ಶ್ವಾಸಕೋಶ, ಹೃದಯ) ಒದಗುವ ವೇದನೆಗಳನ್ನು ಒಟ್ಟಾರೆ ದೈಹಿಕವೇದನೆಗಳು (organic sensations) ಎಂದು ವ್ಯವಹರಿಸುತ್ತಾರೆ. ಹಸಿವು, ನೀರಡಿಕೆ ಮೊದಲಾದ ಸ್ಥಿತಿಗಳಲ್ಲಿ ಒದಗುವ ಪ್ರಚೋದನೆಗಳನ್ನು ಗ್ರಹಿಸಲು ಅಂತರ ವೇದನಾಸ್ಥಾನಗಳು (interoceptors) ಪ್ರಯುಕ್ತವಾಗಿವೆ.

ಹೀಗೆ ದೇಹದಲ್ಲಿ ಹೊರಜಗತ್ತಿನ ವಿವರಗಳನ್ನು ಅರಿಯುವ ಸಲುವಾಗಿ ನಿರ್ದಿಷ್ಟ ಇಂದ್ರಿಯಗಳ ವ್ಯವಸ್ಥೆಯಾಗಿದೆ. ಇವುಗಳಿಂದ ಒದಗಿದ ವೇದನೆಗಳಲ್ಲಿ ವೈವಿಧ್ಯವಿರುವುದರಿಂದ ಜಗತ್ತಿನ ವಿವಿಧವಿವರಗಳ ಅನುಭವ ಆಗುವುದು ಸಾಧ್ಯ. ವ್ಯಕ್ತಿಗೂ ಆವರಣಕ್ಕೂ ಸಂಪರ್ಕವನ್ನು ಕಲ್ಪಿಸುವುದೇ ವೇದನಾವ್ಯವಸ್ಥೆಯ ಸಾರಾಂಶ.



ಪರಿಚ್ಛೇದ ಹತ್ತು

# ಪ್ರತ್ಯಕ್ಷಾನುಭವ, ಅವಧಾನ

೧

## ಪ್ರತ್ಯಕ್ಷಾನುಭವ

ಹಿಂದಿನ ಪರಿಚ್ಛೇದದಲ್ಲಿ ವೇದನೆಯು ಅರಿವಿನ ಮೊದಲಹೆಜ್ಜೆಯೆಂದು ಹೇಳಿದೆವಷ್ಟೆ. ವೇದನೆಯು ದೈಹಿಕ ಕ್ರಿಯೆ ; ಅದು ಸಾರ್ಥಕವಾಗಬೇಕಾದರೆ, ಅರಿವು ಪುಷ್ಟವಾಗಿ ಪ್ರೌಢವಾಗಬೇಕಾದರೆ ಮಾನಸವ್ಯಾಪಾರ ಅದರೊಂದಿಗೆ ಸೇರಬೇಕು. ಮೇಲ್ತರದ ಪ್ರಾಣಿಗಳಲ್ಲಿ, ತತ್ರಾಪಿ ಮನುಷ್ಯರಲ್ಲಿ, ಆಲೋಚನೆಯ ಸೌಲಭ್ಯ ವಿಶೇಷವಾಗಿ ಒದಗಿ ಬಂದಿರುವಾಗ ವೇದನೆಯ ನೆಲೆಯೂ ಮೇಲ್ತರದ್ದೇ. ಕೇಂದ್ರ ನರಮಂಡಲದ ವ್ಯವಸ್ಥೆಯಿಂದಾಗಿ ಮಸ್ತಿಷ್ಕ ಹೆಚ್ಚು ಸೂಕ್ಷ್ಮವಾಗಿ, ಹೆಚ್ಚು ಪ್ರಭಾವಶಾಲಿಯಾಗಿರುತ್ತದೆ. ಇದರಿಂದಾಗಿ ಇಂದ್ರಿಯಗಳಿಂದ ಪಡೆದುಕೊಂಡ ವಿವರಗಳು ಇನ್ನಷ್ಟು ಕಳೆತುಂಬಿ ಬೆಳಗುತ್ತವೆ. ಎದುರಿಗೆ ಬರುತ್ತಿರುವ ಮನುಷ್ಯನನ್ನು ನೋಡಿದಾಗ ಕಣ್ಣು ಪಡೆದುಕೊಂಡು ಮಸ್ತಿಷ್ಕಕ್ಕೆ ಒಪ್ಪಿಸುವ ವಿವರಗಳಷ್ಟೇ ಇದ್ದರೆ ಆ ಮನುಷ್ಯ ಇಂಥವನು, ಅವನು ಸ್ನೇಹಿತ, ಅವನ ಹೆಸರು ಇದು, ಸ್ವಭಾವ ಇಂಥದು, ಸಂದರ್ಭ ಹೀಗೆ ಎನ್ನುವ ತಾತ್ಪರ್ಯ ನಮಗೆ ಮೂಡುವುದು ಹೇಗೆ ? ಇಷ್ಟೆಲ್ಲ ಇಲ್ಲದಿದ್ದರೆ ವ್ಯವಹಾರ ಕ್ಲಿಷ್ಟವಾಗುತ್ತದೆ, ಜಡವಾಗುತ್ತದೆ, ಯಾಂತ್ರಿಕವಾಗುತ್ತದೆ.

ಅನುಭವಕ್ಕೆ ಬಂದ ವಸ್ತುಗಳ, ವ್ಯಕ್ತಿಗಳ, ಪ್ರಸಂಗಗಳ ಸ್ವಾರಸ್ಯ ಇರುವುದೇ ಅರ್ಥ ನಿಷ್ಪತ್ತಿಯಲ್ಲಿ. ಇದು ಇಂದ್ರಿಯಗಳ ನೆಲೆಯಲ್ಲಿ ನಡೆಯುವ ಸಂಘಟನೆಯಲ್ಲ ; ಮಸ್ತಿಷ್ಕದ ವ್ಯಾಪಾರ. ಈ ಕಾರಣದಿಂದ ವೇದನೆಯೊಂದಿಗೆ ಅರ್ಥದ ಸಂಯೋಗ ವಾದರೆ ಅದೇ ನಿಜವಾದ, ಕಾರ್ಯಯೋಗ್ಯವಾದ ಅರಿವು. ವೇದನೆ, ಅರ್ಥ ಎರಡೂ ಕಲೆತರೆ ಅದು ಪ್ರತ್ಯಕ್ಷಾನುಭವವೆನಿಸಿಕೊಳ್ಳುತ್ತದೆ.

ಪ್ರತ್ಯಕ್ಷ ಎನ್ನುವ ಮಾತಿನಲ್ಲಿ ಇಂದ್ರಿಯದ ಸಂನಿಕರ್ಷವನ್ನು ಹೊಂದಿರುವುದು ಎನ್ನುವ ಅರ್ಥವಿದೆ ( ಪ್ರತಿ, ಅಕ್ಷ = ಇಂದ್ರಿಯ ). ಆದರೆ ಕೇವಲ ಇಂದ್ರಿಯಾರ್ಥ ಸಂನಿಕರ್ಷವಾದರೆ ಅದು ವೇದನೆ ; ಇಂದ್ರಿಯಾರ್ಥಸಂನಿಕರ್ಷಜನ್ಯಜ್ಞಾನವಾದರೆ ಪ್ರತ್ಯಕ್ಷ. ಪ್ರತ್ಯಕ್ಷಲ್ಲಿ ಜ್ಞಾನದ, ತಿಳುವಳಿಕೆಯ ಅಂಶ ಮುಖ್ಯವಾದುದು. ಆದರೆ ಬರಿಯ ಮಾನಸ ಪ್ರತ್ಯಯಗಳಿಂದ ಒದಗುವ ಜ್ಞಾನ ಪ್ರತ್ಯಕ್ಷವಾಗುವುದಿಲ್ಲ, ಅದು ಆಲೋಚನೆ, ಕಲ್ಪನೆ. ಹಿಂದೆ ನೋಡಿದ ವಸ್ತುಗಳ ವಾಸನೆಯಿಂದ ತಿಳುವಳಿಕೆ ಬರುವುದಾದರೆ ಅದು ಸ್ಮೃತಿ, ಪ್ರತ್ಯಕ್ಷವಲ್ಲ. ಪ್ರತ್ಯಕ್ಷದಲ್ಲಿ ಈಗಿನ ವಸ್ತುಗಳ ತಿಳುವಳಿಕೆ ಮುಖ್ಯವಾದ ವಿವರ; ಎದುರಿಗಿರುವ ವಸ್ತುಗಳ ತಿಳುವಳಿಕೆ ಅಗತ್ಯ. ವಸ್ತು ಇಂದ್ರಿಯಗಳಿಗೆ ವಿಷಯವಾಗಿರಬೇಕಾದುದು ಪ್ರತ್ಯಕ್ಷಕ್ಕೆ ಅನಿವಾರ್ಯ. ಈ ಕಾರಣದಿಂದ ಇಂದ್ರಿಯವೇದನೆ ಪ್ರತ್ಯಕ್ಷಾನುಭವದ ಜೀವಾಳ ಎಂದು ನಿರ್ದೇಶಿಸುತ್ತಾರೆ. ಇಂದ್ರಿಯವೇದನೆಗಳು ಒದಗಿದಾಗ ಅವುಗಳ ಅರಿವಾಗುವುದೇ ಪ್ರತ್ಯಕ್ಷ ಎಂದು ಆಧುನಿಕ ಮನಃಶಾಸ್ತ್ರದ ನಿಲುವು. ಇಂದ್ರಿಯ ಪ್ರಚೋದಕಸಾಮಗ್ರಿಯನ್ನು ಅನುಭವಿಸುವಾಗ ಅವುಗಳ ತಾತ್ಪರ್ಯವನ್ನು ಗ್ರಹಿಸುವುದು ಪ್ರತ್ಯಕ್ಷ ಎಂದು ಗಾರ್ಡ್ನರ್ ಮರ್ಫಿ ನಿರೂಪಿಸಿದ್ದಾನೆ.

ಪ್ರತ್ಯಕ್ಷದಲ್ಲಿ ಇಂದ್ರಿಯವಿವರಗಳನ್ನು ಸಂಘಟಿಸುವ, ವ್ಯವಸ್ಥೆಮಾಡುವ ಕೆಲಸ ನಡೆಯುತ್ತದೆ. ವಿವರಗಳ ನಡುವೆ ಯಾವ ಸಂಬಂಧವಿದೆ ಎನ್ನುವುದನ್ನು ಪ್ರತ್ಯಕ್ಷವೇ ನಿಷ್ಕರ್ಷೆ ಮಾಡುತ್ತದೆ. ವಿವರಗಳನ್ನು ಕಲೆಹಾಕುವುದು ಮಾತ್ರ ಇಲ್ಲಿ ನಡೆಯುವ ವ್ಯಾಪಾರವೆಂದು ಭಾವಿಸಬಾರದು ; ಪ್ರತ್ಯಕ್ಷದ ಪ್ರಾಮುಖ್ಯ ಇರುವುದು ವ್ಯವಸ್ಥೆಯಲ್ಲಿ, ಸಂಘಟನೆಯಲ್ಲಿ ( organization ). ಹೀಗೆ ಸಂಘಟಿಸುವುದರಿಂದ ಇಂದ್ರಿಯ ವಿವರಗಳ ರೂಪವೇ ಬದಲಾಗುತ್ತದೆ ; ವ್ಯವಸ್ಥೆಯಲ್ಲಿ ಸೇರಿದ ಒಂದೊಂದು ವಿವರವೂ ಒಂದೊಂದು ವಿಶಿಷ್ಟ ಮೌಲ್ಯವನ್ನು ಪಡೆಯುತ್ತದೆ.

ಪ್ರತ್ಯಕ್ಷ ಪ್ರವೃತ್ತಿಯಲ್ಲಿ ಜರುಗುವ ವ್ಯವಸ್ಥೆಯನ್ನು ಕುರಿತು ಗೆಸ್ಟಾಲ್ಟ್ ( ಸ್ಫೋಟ ) ವಾದಿಗಳು ವಿಶೇಷವಾಗಿ ಅಧ್ಯಯನ ಮಾಡಿದ್ದಾರೆ. ಪ್ರಚೋದನೆಯಿಂದ ವೇದನೆ ಒದಗಿದಾಗ ಪ್ರಾಣಿಯ ಚೇತನದಲ್ಲಿ ಸಮಸ್ಥಿತಿಯ ಭಂಗವಾಗುತ್ತದೆ ; ಹೀಗೆ ಮರೆಯಾದ ಸಮಸ್ಥಿತಿಯನ್ನು ಮತ್ತೆ ಪಡೆದುಕೊಳ್ಳುವ ಬಯಕೆಯೇ ಪ್ರವರ್ತನೆ. ಈ ಪ್ರವರ್ತನೆಯ ಒಂದು ಮುಖ ವೇದನದ ವಿವರಗಳನ್ನು ಒಂದು ಪಾಕಕ್ಕೆ ಇಳಿಸು

ವುದು. ವಿಭಿನ್ನ ವಿವರಗಳನ್ನು ಸಂಘಟಿಸಿದಾಗ ವೇದನೆಯ ಎಲ್ಲ ಪ್ರಕಾರಗಳೂ ಒಂದು ಪ್ರಸಂಗ ( phenomenon ) ದಲ್ಲಿ ಕಲೆಯುತ್ತವೆ. ಬೇರೆ ಬೇರೆ ನದಿಗಳು ಸಮುದ್ರ ವನ್ನು ಸೇರಿದಾಗ ನದಿಗಳ ಸ್ವರೂಪ ಹೇಗೆ ಮರೆಯಾಗುವುದೋ ಹಾಗೆಯೇ ಇಂದ್ರಿಯ ವೇದನೆಯ ವಿವರಗಳೂ ಈ ವ್ಯವಸ್ಥೆಯಲ್ಲಿ ಕರಗಿ ಹೋಗುತ್ತವೆ. ವ್ಯವಸ್ಥೆಯಲ್ಲಿ ಏಕೀಭಾವ ಮುಖ್ಯ ಲಕ್ಷಣ. ವಿವರಗಳು ಅಪೂರ್ಣವಾಗಿ ವ್ಯವಸ್ಥೆಯ ಏಕೀಭಾವ ಒದಗುವುದು, ತಾತ್ಪರ್ಯನಿಷ್ಪತ್ತಿಯಾಗುವುದು ಕಷ್ಟವೆನಿಸಿದಾಗ ಪ್ರತ್ಯಕ್ಷವು ತಾನೇ ಬೇಕಾದ ವಿವರಗಳನ್ನು ಜೋಡಿಸಿ ಪೂರ್ಣಾರ್ಥವನ್ನು ಪಡೆದುಕೊಳ್ಳುತ್ತದೆ. ಇದಕ್ಕೆ ಪರಿಪೂರಣ ನಿಯಮವೆಂದು ಹೆಸರು. ಇಲ್ಲಿ ವೇದನೆಗೆ ಅಸಾಧ್ಯವಾದುದನ್ನು ಪ್ರತ್ಯಕ್ಷ ಸಾಧಿಸುವುದನ್ನು ಕಾಣಬಹುದು ; ಅವುಗಳ ನಡುವೆ ಇರುವ ಭೇದವೂ ಸ್ಪಷ್ಟವಾಗಿದೆ.

ಪ್ರತ್ಯಕ್ಷಾನುಭವವು ಒತ್ತಡವಿದ್ದಾಗ ಒದಗುವ ವ್ಯಾಪಾರ. ನೋಟದಲ್ಲಿ ವಿವರಗಳಿಂದಾಗಿ ಸಮಸ್ಥಿತಿ ತಪ್ಪಿದಾಗ ಪ್ರತ್ಯಕ್ಷ ನೆರವಿಗೆ ಬರುತ್ತದೆ. ಪ್ರತ್ಯಕ್ಷದ ಉದ್ದೇಶ ಸಮಸ್ಥಿತಿಯನ್ನು ಮತ್ತೆ ಉಂಟುಮಾಡುವುದೇ. ಒತ್ತಡದಿಂದಾಗಿ ವ್ಯಕ್ತಿ ಉನ್ಮುಖನಾಗುತ್ತಾನೆ, ಕಾರ್ಯಕ್ಕೆ ಸಿದ್ಧನಾಗುತ್ತಾನೆ ( eingestalt ). ಹೀಗೆ ಸಿದ್ಧವಾದ, ಉನ್ಮುಖವಾದ ಜೀವಿಯನ್ನು ಹೊರಗಿನ ವಿವರ ಪ್ರಚೋದನೆ ಮಾಡಿ ದಾಗಲೇ ಪ್ರತ್ಯಕ್ಷಾನುಭವವಾಗುವುದು. ಪ್ರವರ್ತನೆಗೂ ಪ್ರತ್ಯಕ್ಷಕ್ಕೂ ಇರುವ ನಿಕಟ ಸಂಬಂಧ ಇದು. ಪ್ರವರ್ತನೆಯಿಂದಾಗಿ ಬಯಕೆಗಳೂ ನಿರೀಕ್ಷೆಗಳೂ ಆಕಾಂಕ್ಷೆಗಳೂ ಆತಂಕಗಳೂ ಪ್ರತ್ಯಕ್ಷವನ್ನು ಸಿದ್ಧಪಡಿಸುತ್ತವೆಯೆನ್ನುವುದು ಹಲವಾರು ಪ್ರಯೋಗ ಗಳಿಂದ ತಿಳಿದು ಬಂದಿದೆ. ವಸ್ತುವಿವರಗಳಿರುವಂತೆ ನಾವು ನೋಡುವುದಕ್ಕಿಂತ ಹೆಚ್ಚಾಗಿ ನೋಡಬೇಕೆಂಬ ಕಾತರ ಇರುವಂತೆ ನೋಡುವೆವು. ನಮ್ಮ ಬಯಕೆಗೆ ಅನುಗುಣವಾಗಿ ವಿಷಯವೂ ವ್ಯಕ್ತವಾಗುತ್ತದೆ. ನೋಡುವಾಗ ನಾವು ಉದಾಸೀನರಾಗಿ, ತಟಸ್ಥರಾಗಿ ಇರುವುದಿಲ್ಲ ; ನೋಡುವ ವಸ್ತುವಿನ ವಿಚಾರವಾಗಿ - ನಮಗಿರಬಹುದಾದ ಪೂರ್ವಸ್ಥಿತಿ ಒಳಗೇ ಕೆಲಸಮಾಡಿರುತ್ತದೆ ; ನಮ್ಮ ನಿರ್ಣಯಗಳು, ಭೀತಿಗಳು, ಅಭಿಪ್ರಾಯಗಳು ಸೇರಿಕೊಳ್ಳುತ್ತವೆ. ಆದರಿಂದ ಪ್ರತ್ಯಕ್ಷ ಮೃದಳೆಯುತ್ತದೆ.

ಪ್ರತ್ಯಕ್ಷಾನುಭವದಲ್ಲಿ ವೇದನೆಯ ಎಲ್ಲ ವಿವರಗಳನ್ನೂ ಅರ್ಥಗ್ರಹಣಕ್ಕಾಗಿ ಗಮನಿಸುವುದಿಲ್ಲ. ಮುಖ್ಯವಾದುವನ್ನು ಮಾತ್ರ ಆರಿಸಿಕೊಂಡು ( selection ), ಅವುಗಳಿಗೆ ಆಕರ್ಷಕವಾದ ರೂಪವನ್ನೂ ದನಿಯನ್ನೂ ಒದಗಿಸಿ ( accentuation ), ಅವನ್ನು ಅವಧಾನದಲ್ಲಿ ಉಳಿಸಿಕೊಳ್ಳುತ್ತೇವೆ ( fixation ). ಈ ಮೂರು ಹೆಜ್ಜೆಗಳು ಪ್ರತ್ಯಕ್ಷಾನುಭವದ ಸ್ವಾರಸ್ಯವೆಂದು ಬ್ರೂನರ್, ಗುಡ್‌ಮನ್ ಮೊದಲಾದ ಮನಃ ಶಾಸ್ತ್ರಜ್ಞರು ನಿರ್ಧರಿಸಿದ್ದಾರೆ. ವಿವರಗಳಿಗೆ ಹೀಗೆ ಸಂಸ್ಕಾರ ಮಾಡುವಾಗ ಸಾಂಕೇತಿಕ ಪ್ರವೃತ್ತಿಗಳು ಉದ್ಯುಕ್ತವಾಗುತ್ತವೆ. ಪೂರ್ವಾನುಭವವನ್ನು ಪ್ರಸಕ್ತಾನುಭವದ ವಿವರ ಗಳೊಂದಿಗೆ ಬೆರೆಸಿದಲ್ಲದೆ ಅರ್ಥನಿಷ್ಪತ್ತಿಯಾಗದು. ಮುಂದೆ ಇರುವ ಮನುಷ್ಯ ನಮ್ಮ

ಪರಿಚಿತ ಎಂದು ತಿಳಿಯಬೇಕಾದರೆ ಆ ಮನುಷ್ಯನ ವಿಚಾರವಾಗಿ ನಮ್ಮಲ್ಲಿ ಇರುವ ಸ್ಮೃತಿ ಚಿತ್ರ ಉದ್ಬುದ್ಧವಾಗಬೇಕು. ಇದು ಸಂಕೇತಪ್ರಧಾನವಾದುದೇ. ಇಂದ್ರಿಯ ಪ್ರಚೋದಕವಾದ ವಸ್ತು ಜ್ಞಾನವಾಹಿಪ್ರವೃತ್ತಿಗಳನ್ನು ಉತ್ಪಾದನಮಾಡುವಾಗಲೇ ಸಂಕೇತ - ಪ್ರವೃತ್ತಿಗಳನ್ನೂ ಕಾರ್ಯಗತಮಾಡುತ್ತದೆ. ಪ್ರತ್ಯಕ್ಷಾನುಭವದಲ್ಲಿ ಜೀವಸ್ವರೂಪವಾಗಿರುವ ಅರ್ಥ ನಿಷ್ಪತ್ತಿಯು ಸಾಂಕೇತಿಕಸ್ವಭಾವದ್ದು.

೨

## ಪ್ರತ್ಯಕ್ಷೋನ್ಮುಖತೆ – ಪೂರ್ವಾನುಭವ

ನಾವು ಏನನ್ನು ನೋಡುತ್ತೇವೆ, ಅದು ಹೇಗೆ ಕಾಣುತ್ತದೆ ಎನ್ನುವುದನ್ನು ನಿರ್ಧರಿಸಲು ವ್ಯಕ್ತಿಯ ಚಿತ್ತವೃತ್ತಿಯಲ್ಲಿರುವ ಸಿದ್ಧತೆ ( preparedness ) ಅಥವಾ ಉನ್ಮುಖತೆ ( muscular set ) ಕಾರಣವಾಗುವುದೆಂದು ಮೊದಲೇ ತಿಳಿದೆವಷ್ಟೆ. ಇದನ್ನು ಪ್ರಯೋಗಗಳಿಂದಲೂ ಸ್ಪಷ್ಟಪಡಿಸಿದ್ದಾರೆ. ಕೆಲವು ವಸ್ತುಗಳು ಹೀಗೆಯೇ ಕಾಣಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡಾಗ ವಸ್ತುಗಳು ಹಾಗೆಯೇ ಕಾಣುವುದು ಯಾವ ನೆಲೆಯಲ್ಲಿ, ಅದಕ್ಕೆ ಮಿತಿ ಎಷ್ಟು, ಅದು ಒದಗುವುದು ಹೇಗೆ ಎನ್ನುವುದು ಪ್ರಯೋಗದ ಮುಂದಿರುವ ಸಮಸ್ಯೆಗಳು. ಪ್ರವರ್ತನೆ ಬಲವಾಗಿದ್ದಾಗ, ವಸ್ತುವಿನ ಆಕಾರ ನಿರ್ದಿಷ್ಟವಾಗಿಲ್ಲದೆ ಇದ್ದಾಗ, ಪ್ರಯೋಗಮಾಡುವವನು ನಮಗೆ ಏನು ನೋಡಬೇಕೆಂದು ಹೇಳುತ್ತಾನೋ ಹಾಗೆಯೇ ನಾವು ನೋಡುವುದು ಸುಲಭವಾಗುತ್ತದೆ. ಇದಕ್ಕೆ ಆದಿಷ್ಟೋನ್ಮುಖತೆ ( instructional set ) ಎಂದು ಹೆಸರಿಟ್ಟಿದ್ದಾರೆ. ಹೀಗೆಯೇ ನೋಡಬೇಕೆಂದು ಹೇಳಿದಾಗ, ನೋಡುವವನ ಮನಸ್ಸಿನಲ್ಲಿ, ಇದು ಒಂದು ಪೂರ್ವ ಸಿದ್ಧತೆಯಾಗಿ ಪರಿಣಮಿಸಿ ವಸ್ತು ಇನ್ನು ಕಾಣದಿದ್ದಾಗಲೇ ಅದರ ಆಕಾರದ ಬಗ್ಗೆ ಒಂದು ನಿರೀಕ್ಷೆ ( expectancy ) ಒದಗುತ್ತದೆ. ಹೊರಗಿನ ವಿವರಗಳು ಸ್ಪಷ್ಟವಾದ ವೇದನೆಯನ್ನು ಒದಗಿಸದಿದ್ದಾಗ ಒಳಗಿನ ನಿರೀಕ್ಷೆ ವೇದನೆಯ ವಿವರಗಳನ್ನು ತನಗೆ ಬೇಕಾದಂತೆ ಮಾರ್ಪಡಿಸಿ ನೋಡುತ್ತದೆ. ಇಂದ್ರಿಯಜನ್ಯವಾದ ಜ್ಞಾನ ವಸ್ತುವನ್ನು ಅವಲಂಬಿಸಿರುತ್ತದೆ ; ಆದಕಾರಣ ನಾಲ್ಕು ಜನ ಒಂದೇ ವಸ್ತುವನ್ನು ಒಂದೇ ಬಗೆಯಲ್ಲಿ ನೋಡುವುದು ಸಾಧ್ಯ. ಆದರೆ ನಿರೀಕ್ಷೆಯಿಂದ ಒದಗಿದ ಜ್ಞಾನ ಪುರುಷತಂತ್ರವಾದುದು, ವ್ಯಕ್ತಿಯ ಬಯಕೆಗಳನ್ನೂ ಪ್ರವರ್ತನೆಗಳನ್ನೂ ಅವಲಂಬಿಸಿದುದು ; ಇದರಲ್ಲಿ ವೈಯಕ್ತಿಕ ವೈವಿಧ್ಯ ಹೆಚ್ಚು.

ಒಬ್ಬೊಬ್ಬ ವ್ಯಕ್ತಿಯ ಪ್ರತಿಕ್ರಿಯೆಯೂ ಒಂದೊಂದು ಬಗೆ; ವ್ಯಕ್ತಿಗೇ ವಿಶಿಷ್ಟವಾದುದು. ಈ ಪ್ರತಿಕ್ರಿಯೆಯನ್ನು ವಿಶ್ಲೇಷಣ ಮಾಡುವಾಗ ವಾಸ್ತವಿಕವಿವರಗಳನ್ನು ಅದರಿಂದ ತೆಗೆದರೆ ವ್ಯಕ್ತಿಯ ವಿಕ್ಷೇಪ ( projection ) ಬಯಲಿಗೆ ಬರುತ್ತದೆ. ಈ ನಿಯಮವನ್ನವಲಂಬಿಸಿ ರೋರ್‌ಷಾಕ್, ಮಸಿಚಿತ್ರಪರೀಕ್ಷೆ, ವಾಕ್ಯಪರಿಪೂರಣ, ವಿಷಯ

ಸಂಜ್ಞಾನಪರೀಕ್ಷೆ, ಮೊದಲಾದ ವಿಕ್ಷೇಪಸಂವಿಧಾನಗಳು ಮೈದಳೆದಿವೆ. ಎದುರಿಗಿರುವ ಪ್ರಚೋದಕ ಸಾಮಗ್ರಿ ಒಂದೇ ಆದರೂ ವ್ಯಕ್ತಿಗಳು ಅವುಗಳಿಗೆ ಪ್ರತಿಕ್ರಿಯೆಗಳನ್ನು ಬೇರೆಬೇರೆ ಬಗೆಯಲ್ಲಿ ಮಾಡುತ್ತಾರೆ ; ಇದಕ್ಕೆ ಮೂಲಭೂತವಾಗಿ ಅವರವರ ಪ್ರವರ್ತನೆ, ಪ್ರವೃತ್ತಿ, ನಿರೀಕ್ಷೆಗಳಿಂದಾಗಿ ಉನ್ಮುಖತೆಯುಂಟಾಗಿ ಅದರಿಂದ ಪ್ರತ್ಯಕ್ಷಾನುಭವದಲ್ಲೇ ವೈವಿಧ್ಯ ಒದಗುತ್ತದೆ.

ಹೀಗೆ ಉನ್ಮುಖತೆಯನ್ನುಂಟುಮಾಡಲು ಪೂರ್ವಾನುಭವವೂ ನೆರವಾಗುತ್ತದೆ. ಒಮ್ಮೆ ಕೈಸುಟ್ಟುಕೊಂಡ ಮಗು ಮುಂದೆ ಎಚ್ಚರವಾಗಿರುತ್ತದೆ ಎನ್ನುವ ಗಾದೆಯನ್ನು ಕೇಳಿದ್ದೀರಲ್ಲವೆ ? ಪೂರ್ವಾನುಭವದಿಂದ ಮುಂದಿನ ಅನುಭವಗಳ ಬಗ್ಗೆ ಆತಂಕ, ಉದ್ವೇಗ ಅಥವಾ ಹರ್ಷ, ಉತ್ಸಾಹ ಒದಗುವುದು ನಮ್ಮ ನಿತ್ಯಜೀವನದಲ್ಲಿ ಕಾಣಬಹುದು. ಈಗಿನ ಸಂದರ್ಭ ಹೊಸದೇ ಆದರೂ ಅದರ ಹಿನ್ನೆಲೆ ನಮ್ಮ ಮನಸ್ಸಿನಿಂದ ಕಲ್ಪಿತವಾಗುತ್ತದೆ. ವ್ಯಕ್ತಿಯನ್ನು ಈಗಲೇ ಕಣ್ಣು ನೋಡಿ ಮಸ್ತಿಷ್ಕ ಅವನ ಪರಿಚಯವನ್ನು ಮಾಡಿಕೊಟ್ಟರೂ, ಅವನ ವಿಚಾರವಾಗಿ ನಮ್ಮ ಮನಸ್ಸಿನ ಅಂತರಾಳದಲ್ಲಿ ಅಡಗಿರುವ ಸ್ಮೃತಿಗಳು ಈ ಸಮಸಾಮಯಿಕ ಚಿತ್ರವನ್ನು ಪೂರ್ಣಮಾಡುತ್ತವೆ. ಹೊಸ ಪ್ರಸಂಗಕ್ಕೆ ನಮ್ಮ ಪೂರ್ವಾನುಭವದ ಸಂದರ್ಭವನ್ನು ಸಂಯೋಜಿಸುವುದು ಸಹಜವಾಗಿಯೇ ನಡೆಯುವ ವ್ಯಾಪಾರ. ಹೀಗೆ ಮಾಡದಿದ್ದರೆ ವೇದನೆ ಅರ್ಥಪೂರ್ಣವಾಗುವುದಿಲ್ಲ, ಸಂದರ್ಭದ ತಾತ್ಪರ್ಯ ಮನದಟ್ಟಾಗುವುದಿಲ್ಲ, ನಮ್ಮ ಪ್ರತಿಕ್ರಿಯೆ ಏನೆಂಬುದನ್ನು ನಿರ್ಧರಿಸಲಾಗುವುದಿಲ್ಲ. ಇದು ಮನುಷ್ಯರಲ್ಲಿ ಮಾತ್ರವಲ್ಲ, ಪ್ರಾಣಿಗಳಲ್ಲಿಯೂ ನಡೆಯುವ ಕ್ರಿಯೆಯೇ. ಹಲವಾರು ಪ್ರಾಣಿಗಳು ಮನುಷ್ಯರೊಡನೆ ಬೆಳೆಯುವಾಗ ಮನುಷ್ಯರ ಸಂದರ್ಭಗಳಿಗೆ ಸೂಕ್ತವಾದ ಪ್ರತಿಕ್ರಿಯೆಗಳನ್ನು ಮಾಡಲು ಕಲಿಯುತ್ತವೆ ; ನಾವು ಇಂಥ ಪ್ರಾಣಿಗಳನ್ನೇ ಸಾಕಿಕೊಳ್ಳುವುದು. ಇಲ್ಲಿ ಪೂರ್ವಾನುಭವದಿಂದ ಸಂದರ್ಭದ ಅರ್ಥಗ್ರಹಣ ಮಾಡುವ ಸಾಮರ್ಥ್ಯವೇ ಮುಖ್ಯವಾದ ವಿವರ.

ಇಂಥ ಸಂದರ್ಭಗಳಲ್ಲಿ ಮತ್ತೊಂದು ವಿಚಾರ ಸ್ಪಷ್ಟವಾಗುತ್ತದೆ. ಸಂದರ್ಭ ಪೂರ್ಣವಾಗಿಲ್ಲದೆ, ಅದು ಖಂಡವಾಗಿ ಕಾಣಿಸಿಕೊಂಡರೂ ಪ್ರತಿಕ್ರಿಯೆ ಪೂರ್ಣ ಸಂದರ್ಭಕ್ಕೆ ಸೂಕ್ತವಾಗಿರುತ್ತದೆ. ನಾಯಿ ಅದರ ಊಟದ ಹೊತ್ತು ಬಂದಾಗ ನಾವು ಅಡಿಗೆಮನೆಯಿಂದ ಹೊರಬಂದರೆ ಬಾಲ ಅಲ್ಲಾಡಿಸಿಕೊಂಡು ಬರುತ್ತದೆ; ನಾವು ಆಹಾರವನ್ನು ಅದಕ್ಕೆ ತರುತ್ತಿದ್ದೇವೆನ್ನುವ ಜ್ಞಾನ ಅದರ ಇಂದ್ರಿಯಗಳಿಂದ, ವೇದನೆಯಿಂದ, ಬಂದುದಲ್ಲ.; ಆಹಾರವನ್ನು ಅದು ಕಾಣದಿದ್ದರೂ ಪ್ರತಿಕ್ರಿಯೆ ಆಹಾರವನ್ನು ತಂದ ಸಂದರ್ಭಕ್ಕೇ ತಕ್ಕದ್ದು. ಇದು ಹಿಂದಿನ ಅನುಭವದಿಂದ ಒದಗಿದ ಪ್ರತಿಕ್ರಿಯೆ. ನಾವು ಅಡಿಗೆಮನೆಯಿಂದ ಆ ಹೊತ್ತಿಗೆ ಹೊರಬಂದುದಷ್ಟೇ ವೇದನೆ ; ಇದರಿಂದ ನಾಯಿಯ ಮನಸ್ಸಿನಲ್ಲಿ ಇಡೀ ಸಂದರ್ಭ ಹೊರಹೊಮ್ಮುತ್ತದೆ. ಬೆರಳು ತೋರಿಸಿದರೆ ಹಸ್ತ ನುಂಗುವ ಪ್ರವೃತ್ತಿಯಿದು. ಮುಖನೋಡಿ ಮನುಷ್ಯ ಸುಖವಾಗಿದ್ದಾನೋ




ಈ ಗೆರೆಯಲ್ಲಿ ಐದು ಭಾಗಗಳಿವೆ. ಅವೆಲ್ಲವೂ ಒಂದೇ ಉದ್ದ. ಆದರೆ ನಿಮಗೆ ಕಾಣುವುದು ಹೇಗೆ ? ಇದಕ್ಕೆ ಕಾರಣವೇನು ತಿಳಿಸಬಲ್ಲಿರಾ ? ಇದನ್ನು ಮೊದಲು ಗುರುತಿಸಿದಾತ ಮ್ಯುಲರ್–ಲೈರ್ (Muller-Lyer) ಎನ್ನುವ ಜರ್ಮನ್ ಪಂಡಿತ. ಇದೇ ಭ್ರಮೆಯ ಇನ್ನೆರಡು ರೂಪಗಳು ಇವು—







ಮೇಲಿನ ಚಿತ್ರಗಳಲ್ಲಿ ೧ ಮತ್ತು ೨ ಎಂದು ಕಾಣಿಸಿರುವ ಗೆರೆಗಳು ಒಂದೇ ಉದ್ದ, ಆದರೆ ೧ ದೊಡ್ಡದಾಗಿಯೂ ೨ ಚಿಕ್ಕದಾಗಿಯೂ ಕಾಣುತ್ತದೆ. ಕಾರಣವೇನು ?

ಚಿತ್ರ ೯

ಭ್ರಾಂತಿಯ ಸಂದರ್ಭಗಳು



ಚಿತ್ರ ೧೦

ಅಡ್ಡಗೆರೆಗಳು ಹೇಗೆ ಕಾಣಿಸುತ್ತವೆ? ಅವು ಏಳೂ ಸಮಾನಾಂತರ ರೇಖೆಗಳು. ಆದರ ಮೇಲೆ ನಿಂತ, ಮಲಗಿದ ಗೆರೆಗಳು ಅವು ಸಮನಾಂತರವಲ್ಲ ಎನ್ನುವ ಭ್ರಮೆಯನ್ನು ಹುಟ್ಟಿಸುತ್ತವೆ. ಈ ಸ್ವಾರಸ್ಯವನ್ನು ಮೊದಲು ಗುರುತಿಸಿದವನು ಸೋಯ್‌ಲ್ನರ್ ಎಂಬ ಜರ್ಮನ್ ಪಂಡಿತ, ಆದುದರಿಂದ ಇದನ್ನು ಸೋಯ್‌ಲ್ನರ್ ಭ್ರಮೆ ( Zollner's Illusion ) ಎನ್ನುತಾರೆ.




ಈ ಗೆರೆಯಲ್ಲಿ ಐದು ಭಾಗಗಳಿವೆ. ಅವೆಲ್ಲವೂ ಒಂದೇ ಉದ್ದ. ಆದರೆ ನಿಮಗೆ ಕಾಣುವುದು ಹೇಗೆ ? ಇದಕ್ಕೆ ಕಾರಣವೇನು ತಿಳಿಸಬಲ್ಲಿರಾ ? ಇದನ್ನು ಮೊದಲು ಗುರುತಿಸಿದಾತ ಮ್ಯುಲರ್—ಲೈರ್ (Muller-Lyer) ಎನ್ನುವ ಜರ್ಮನ್ ಪಂಡಿತ. ಇದೇ ಭ್ರಮೆಯ ಇನ್ನೆರಡು ರೂಪಗಳು ಇವು—







ಮೇಲಿನ ಚಿತ್ರಗಳಲ್ಲಿ ೧ ಮತ್ತು ೨ ಎಂದು ಕಾಣಿಸಿರುವ ಗೆರೆಗಳು ಒಂದೇ ಉದ್ದ, ಆದರೆ ೧ ದೊಡ್ಡದಾಗಿಯೂ ೨ ಚಿಕ್ಕದಾಗಿಯೂ ಕಾಣುತ್ತದೆ. ಕಾರಣವೇನು ?

ಚಿತ್ರ ೯

ಭ್ರಾಂತಿಯ ಸಂದರ್ಭಗಳು



ಚಿತ್ರ ೧೦

ಅಡ್ಡಗೆರೆಗಳು ಹೇಗೆ ಕಾಣಿಸುತ್ತವೆ? ಅವು ಏಳೂ ಸಮಾನಾಂತರ ರೇಖೆಗಳು. ಆದರ ಮೇಲೆ ನಿಂತ, ಮಲಗಿದ ಗೆರೆಗಳು ಅವು ಸಮನಾಂತರವಲ್ಲ ಎನ್ನುವ ಭ್ರಮೆಯನ್ನು ಹುಟ್ಟಿಸುತ್ತವೆ. ಈ ಸ್ವಾರಸ್ಯವನ್ನು ಮೊದಲು ಗುರುತಿಸಿದವನು ಸೋಯ್‌ಲ್ನರ್ ಎಂಬ ಜರ್ಮನ್ ಪಂಡಿತ, ಆದುದರಿಂದ ಇವನ್ನು ಸೋಯ್‌ಲ್ನರ್ ಭ್ರಮೆ ( Zollner's Illusion ) ಎನ್ನುತಾರೆ.

ಸಿಟ್ಟುಗೊಂಡಿದ್ದಾನೋ, ಕಷ್ಟಪಡುತ್ತಿದ್ದಾನೋ ತಿಳಿಯುತ್ತೇವೆ. ಅಂಶದಿಂದ ಇಡೀ ವಸ್ತುವನ್ನು ಗ್ರಹಿಸುವುದು ನಮ್ಮ ನಿತ್ಯ ಜೀವನದಲ್ಲಿ ನಿರಂತರವಾಗಿ ನಡೆಯುವ ವ್ಯಾಪಾರ. ಇದನ್ನು ಸಂಕುಚಿತ ಸಂಕೇತ ( reduced cue ) ಸಂದರ್ಭ ಎಂದು ನಿರ್ದೇಶಿಸುತ್ತಾರೆ.

ಪ್ರತ್ಯಕ್ಷಾನುಭವದಲ್ಲಿ ಸಂದರ್ಭ ( context ) ಮುಖ್ಯವಾದ ವಿವರ. ಸಂದರ್ಭ ದಿಂದ ವಿವರಗಳನ್ನು ಬೇರ್ಪಡಿಸಿದರೆ ವಿವರಗಳ ಅರ್ಥಗ್ರಹಣ ಮಾಡುವುದು ಕಷ್ಟ. ಯಾವೊಂದು ವಿವರವೂ ಸಂದರ್ಭದಿಂದಲೇ ತನ್ನ ಸ್ವರೂಪವನ್ನು ಪಡೆದುಕೊಳ್ಳುತ್ತದೆ. ಒಂದೇ ವಿವರ ಎರಡು ವಿಭಿನ್ನ ಸಂದರ್ಭಗಳಲ್ಲಿದ್ದರೆ ಅದರ ಅರ್ಥ, ಸ್ವರೂಪ ಬೇರೆ ಬೇರೆಯಾಗುತ್ತದೆ. ಸ್ವರಗಳು ಏಳೂ ಮೇಳರಾಗಗಳೆಲ್ಲದರಲ್ಲಿಯೂ ಇರುತ್ತವೆ; ಆದರೆ ಆಯಾರಾಗಗಳಲ್ಲಿ ಅದರ ಪಾತ್ರ ವಿಭಿನ್ನವಾಗುತ್ತದೆ. ಇಂದು ತುಂಬ ಉಪಯೋಗವಿರುವ ವಸ್ತು ನಾಳೆ ಉಪಯೋಗಕ್ಕೆ ಬರುವುದಿಲ್ಲ; ತಾರುಣ್ಯದಲ್ಲಿರುವ ಭೋಗಾಸಕ್ತಿ ವೃದ್ಧಾಪ್ಯದಲ್ಲಿರುವುದಿಲ್ಲ; ಹುಡುಗರಾಗಿದ್ದಾಗ ಒಟ್ಟಿಗೆ ಆಡುವವರು ಬೆಳೆದ ಮೇಲೆ ನಾಚುತ್ತಾರೆ; ಪರೀಕ್ಷೆಗೆ ಮೊದಲು ಪುಸ್ತಕಗಳಿಗಿರುವ ಬೆಲೆ ಪರೀಕ್ಷೆ ಯಾದಮೇಲೆ ಮರೆಯಾಗುತ್ತದೆ. ಇವೆಲ್ಲ ಸಂದರ್ಭಶುದ್ಧಿಯ ನಿದರ್ಶನಗಳು. ಒಂದು ವಸ್ತು ಎಲ್ಲ ಸಂದರ್ಭಗಳಲ್ಲಿಯೂ ಒಂದೇ ಬಗೆಯಾಗಿ ಕಾಣುತ್ತದೆ ಎನ್ನುವುದು ಸುಳ್ಳು. ಸಂದರ್ಭಕ್ಕೆ ತಕ್ಕಂತೆಯೇ ಪ್ರತ್ಯಕ್ಷಾನುಭವ. ದೂರ ಇರುವ ವಸ್ತು ಸಣ್ಣ ದಾಗಿಯೂ, ಹತ್ತಿರ ಇರುವ ವಸ್ತು ದೊಡ್ಡದಾಗಿಯೂ ಕಾಣುವುದು ಇದೇ ಕಾರಣ ದಿಂದ. ನಾವು ಅನುಭವಿಸುವ ಭ್ರಾಂತಿ ( illusion ) ಸಂದರ್ಭದಿಂದಲೇ ಒದಗುತ್ತದೆ. ಭ್ರಾಂತಿ ಎನ್ನುವುದು ಪ್ರತ್ಯಕ್ಷಾಭಾಸ; ಇಲ್ಲದಿದ್ದುದು ಇದ್ದಂತೆ ಕಾಣುವುದು, ಇದ್ದುದು ಇಲ್ಲದಂತೆ ಕಾಣುವುದು, ಒಂದು ಬಗೆಯಲ್ಲಿರುವುದು ಬೇರೆ ಬಗೆಯಲ್ಲಿ ಕಾಣುವುದು ಇವೆಲ್ಲ ಭ್ರಾಂತಿಯ ಸಂದರ್ಭಗಳೇ. ನಿದರ್ಶನಕ್ಕೆ ೯ನೇ ಚಿತ್ರವನ್ನು ನೋಡಿ.

ಇಲ್ಲಿ ಎರಡೂ ಗೆರೆಗಳೂ ಒಂದೇ ಉದ್ದದವು; ಆದರೂ ಗೆರೆಗಳ ಕೊನೆ ಯಲ್ಲಿರುವ ಗರಿಗಳಿಂದ ಒಂದು ಇನ್ನೊಂದಕ್ಕಿಂತ ಉದ್ದ ಇರುವಂತೆ ಕಾಣುತ್ತದೆ. ಗರಿಗಳು ಹೊರಗೆ ಮೈಚಾಚಿಕೊಂಡಿದ್ದರೆ ಗೆರೆ ಲಂಬಿತವಾದಂತೆಯೂ, ಗರಿಗಳು ಒಳಮುಚ್ಚುವಂತೆ ಇದ್ದರೆ ಗೆರೆ ಸಂಕುಚಿತವಾದಂತೆಯೂ ಭಾಸವಾಗುತ್ತದೆ. ಇದು ಸಂದರ್ಭದ ಪ್ರಭಾವ. ಹೀಗೆಯೇ ಪರಸ್ಪರ ಸಮಾನಾಂತರವಿರುವ ಗೆರೆಗಳು ಸೇರುವಂತೆ ಭಾಸವಾಗುವ ಚಿತ್ರವನ್ನು ನೋಡಿ. ಅಡ್ಡಗೆರೆಗಳು ಸಂದರ್ಭವನ್ನು ಬದಲಾಯಿಸು ತ್ತವೆ ( ಚಿತ್ರ-೧೦ ).

ಸ್ಥಿರವಾಗಿರುವ ಬಿಡಿಚಿತ್ರಗಳನ್ನು ವೇಗವಾಗಿ ಒಂದಾದಮೇಲೊಂದು ತೋರಿಸಿದರೆ ಚಲಚಿತ್ರದ ಭ್ರಾಂತಿಯಾಗುವುದೂ ಸಂದರ್ಭದಿಂದಲೇ. ಒಂದು ವಿವರವನ್ನು

ಸಂದರ್ಭದಲ್ಲಿ ಅಡಗಿಸುವುದೂ ಸಾಧ್ಯ. ಸಂದರ್ಭದಿಂದ ಬೇರ್ಪಟ್ಟರೆ ತಟ್ಟನೆ ಕಾಣುವ ವಿವರವನ್ನು ಸಂದರ್ಭದಲ್ಲಿದ್ದಾಗ ಪ್ರಯತ್ನಪಟ್ಟು ಹುಡುಕಬೇಕಾಗುತ್ತದೆ. ಇಲ್ಲಿ ಮೊದಲಿನ ಆಕೃತಿ ಉಳಿದ ಎಲ್ಲ ಆಕೃತಿಗಳಲ್ಲೂ ಅಡಗಿದೆ; ಆದರೆ ತಟ್ಟನೆ ಅದು ಕಾಣುವುದಿಲ್ಲ (ಚಿತ್ರ-೧೧).

೩

## ಅವಧಾನ

ಪ್ರತ್ಯಕ್ಷಾನುಭವಕ್ಕೆ ಪೂರ್ವಭಾವಿಯಾಗಿ ಅವಧಾನವಿರಬೇಕು. ಗಮನವಿಟ್ಟರೇ ವಸ್ತು ಅರಿವಿನ ಹಿಡಿತಕ್ಕೆ ಸಿಗುವುದು; ಇಂದ್ರಿಯಗಳು ಗ್ರಹಿಸಿದರೂ ಮನಸ್ಸು ಬೇರೆ ಕಡೆ ಇದ್ದಾಗ ವಸ್ತುವನ್ನು ನಾವು ನೋಡಲಾರೆವು, ನೋಡಿದರೂ ನೆನಪಿನಲ್ಲಿಟ್ಟುಕೊಳ್ಳಲಾರೆವು. ವ್ಯಕ್ತಿಯ ಚಿತ್ತವೃತ್ತಿಗಳು ಪ್ರಚೋದಕವಸ್ತುವಿನ ಕಡೆ ಹರಿದಾಗ, ತಿರುಗಿದಾಗ, ಅರಿವಿನ ಕಾವು ಏರುತ್ತದೆ; ವಸ್ತು ಸ್ಪಷ್ಟವಾಗುತ್ತದೆ. ಇದಕ್ಕೆ ಆವರ್ಜನ (attention) ಅಥವಾ ಅವಧಾನ ಎಂದು ಹೆಸರು. ಆವರ್ಜನವೆನ್ನುವ ಮಾತಿನಲ್ಲಿ ತಿರುಗುವುದು ಎನ್ನುವ ಅರ್ಥವೂ, ಅವಧಾನ ಎನ್ನುವ ಮಾತಿನಲ್ಲಿ ಇಡುವುದು ಎನ್ನುವ ಅರ್ಥವೂ ಇದೆ. ಬೇರೆಬೇರೆ ಚಿತ್ರವೃತ್ತಿಗಳನ್ನು ಒಂದೇ ಕಡೆ ತಿರುಗಿಸುವುದು ಆವರ್ಜನ; ಬೇರೆಬೇರೆ ಚಿತ್ತವೃತ್ತಿಗಳನ್ನು ಒಂದು ವಸ್ತುವಿನಲ್ಲಿ ಇಡುವುದು ಅವಧಾನ. ಒಂದೇ ವ್ಯಾಪಾರದ ಎರಡು ಮುಖಗಳು ಇವು.

ವಸ್ತು ಪ್ರಕಾಶವಾಗಿದ್ದರೆ, ದೊಡ್ಡದಾಗಿದ್ದರೆ, ಚಲಿಸುತ್ತಿದ್ದರೆ, ಹೊಸದಾಗಿದ್ದರೆ ಅವುಗಳ ಕಡೆ ಗಮನ ನಮ್ಮ ಯತ್ನವಿಲ್ಲದೆ ತಾನೇ ಹರಿಯುತ್ತದೆ; ನಮ್ಮ ಗಮನವನ್ನು ಸೆಳೆಯುವ ಸಾಮಗ್ರಿಗಳು ಇವು. ಇಲ್ಲಿ ನಮ್ಮ ಅವಧಾನ ಅಯತ್ನಾವಧಾನ ಅಥವಾ ವಿವಶಾವಧಾನ ( involuntary attention ). ಎಲ್ಲ ವಸ್ತುಗಳೂ ಹೀಗೆ ನಮ್ಮ ಗಮನವನ್ನು ತಾವಾಗಿ ಸೆಳೆಯಲಾರವು; ನಾವು ಬಲವಂತವಾಗಿ, ನಿರ್ಬಂಧದಿಂದ ನಮ್ಮ ಮನಸ್ಸನ್ನು ಹಲವು ವಿಷಯಗಳ ಮೇಲೆ ನಿಲ್ಲಿಸಬೇಕಾಗುತ್ತದೆ; ಇದು ಯತ್ನಾವಧಾನ ( voluntary attention ). ನಾವು ಉದ್ದೇಶಪಟ್ಟು ಗಮನವಿಡುವಾಗ ಪ್ರವರ್ತನೆಗಳ ಪಾತ್ರ ಹಿರಿದಾಗಿರುತ್ತದೆ.

ಪ್ರತ್ಯಕ್ಷಾನುಭವಕ್ಕೆ ಸಿದ್ಧತೆ ಅಗತ್ಯ ಎಂದು ತಿಳಿದೆವಷ್ಟೆ. ಅವಧಾನದಲ್ಲಿಯೂ ಸಿದ್ಧತೆ ಅಗತ್ಯ. ಆಲೋಚನೆಗಳು ಒಮ್ಮುಖವಾಗಿ ಹರಿಯಬೇಕೆಂದರೆ ಅವುಗಳಿಗೆ ಅಧಿಷ್ಠಾನರೂಪವಾಗಿ, ಸೂತ್ರಪ್ರಾಯವಾಗಿ ಸನ್ನಾಹ ( determining set ) ಇರಬೇಕು. ಈ ಸನ್ನಾಹದ ಹಿನ್ನೆಲೆಯಿಂದ ಚಿತ್ತವೃತ್ತಿಗಳು ಉನ್ಮುಖವಾಗುತ್ತವೆ; ವಸ್ತುವಿನ ರೂಪ ಸ್ಪಷ್ಟವಾಗುತ್ತದೆ. ನಿದರ್ಶನಕ್ಕೆ ವಸ್ತುವನ್ನು ಚೆನ್ನಾಗಿ ಅರಿಯಬೇಕಾದರೆ ದಿಟ್ಟಿಸಿ, ಎವೆಯಿಕ್ಕದೆ ನೋಡಬೇಕು; ಹಾಗೆ ನೋಡದೆ ಆಕಾರ ಇದೆಂದು ನಿರ್ಧರಿಸುವುದು ಸಾಧ್ಯವಿಲ್ಲ. ಇದು ದೈಹಿಕವಾದ ಸನ್ನಾಹ; ನೇತ್ರಾಂಗದ ಮಾಂಸ



ಚಿತ್ರ – ೧೧

ಅಡಗಿದ ಆಕೃತಿ





ಚಿತ್ರ ೧೨

ಮೇಲಿನ ಚಿತ್ರವನ್ನು ನೋಡಿ. ಎರಡು ಕರಿಯ ಮುಖಗಳು ಎದುರುಬದರಾಗಿರುವ ಹಾಗೆ ಕಾಣುವು ದಿಲ್ಲವೆ ? ಹಾಗೆಯೇ ನೋಡಿದರೆ ಬಿಳಿಯದೊಂದು ಸುರಾಪಾತ್ರೆ ಕರಿಯ ಹಿನ್ನೆಲೆಯಲ್ಲಿ ಕಾಣಬರುತ್ತದೆ. ಎರಡು ಚಿತ್ರಗಳೂ ಒಂದಾದಮೇಲೊಂದು ಕಾಣುವುದು ದ್ವಿಸಂಧಾನ. ಇದನ್ನು ರಚಿಸಿದವನು ರ್ಯೂಬಿನ್ ಎನ್ನುವ ಮನಃಶಾಸ್ತ್ರಜ್ಞ ; ಇದಕ್ಕೆ ಪೀಟರ್–ಪಾಲ್ ಸುರಾಪಾತ್ರೆ ಎನ್ನುತ್ತಾರೆ. ಹಾಗೆಯೇ ಕೆಳಗಡೆಯ ಚಿತ್ರದಲ್ಲಿ ಬಿಳಿಯ ಹಿನ್ನೆಲೆಯಲ್ಲಿ ಕರಿಯ ಶಿಲುಬೆಯೂ ಕರಿಯ ಹಿನ್ನೆಲೆಯಲ್ಲಿ ಬಿಳಿಯ ಶಿಲುಬೆಯೂ ಕಾಣುತ್ತವೆ. ವಿಷಯದಲ್ಲಿ ದ್ವಿಸಂಧಾನದ ಸೌಕರ್ಯವಿದ್ದಾಗ ಅವಧಾನದಲ್ಲಿ ವಿಭಜನೆಯಾಗುತ್ತದೆ.





ಚಿತ್ರ ೧೨ (೧)

ಮೇಲಿನ ಚಿತ್ರವನ್ನು ನೋಡಿ. ಹೇಗೆ ಕಾಣಿಸುತ್ತದೆ? ಹತ್ತಿ ಹೋಗುವ ಮೆಟ್ಟಿಲುಗಳು ಕಾಣುವುದಿಲ್ಲವೆ? ಹಾಗೆಯೇ ದಿಟ್ಟಿಸಿ ನೋಡಿ. ಕಂಬದ ಒಂದು ವಿನ್ಯಾಸವಿದ್ದಹಾಗೆ ಕಾಣುತ್ತದೆ. ಚಿತ್ರವನ್ನೇ ಎವೆಯಿಕ್ಕದೆ ನೋಡುತ್ತಿದ್ದರೆ ಮೊದಲು ಒಂದು ಅನಂತರ ಇನ್ನೊಂದು ಹೀಗೆ ಎರಡೂ ಭಂಗಿಗಳು ಕಾಣುತ್ತವೆ. ಒಂದೇ ವಸ್ತು ಎರಡು ರೀತಿಗಳಲ್ಲಿ ಕಾಣಿಸಿಕೊಳ್ಳುವುದಕ್ಕೆ ದ್ವಿಸಂಧಾನ ಚಿತ್ರ (double perspective) ಎಂದು ಹೆಸರು. ಈ ಚಿತ್ರದ ಸ್ವಾರಸ್ಯವನ್ನು ಮೊದಲು ತೋರಿಸಿದ ಶ್ರೋಯೆಡ್ಡರ್ (Schroeder) ಎಂಬಾತನ ಹೆಸರನ್ನೇ ಇದಕ್ಕಿಟ್ಟಿದ್ದಾರೆ.











ಚಿತ್ರ ೧೨ ( ೨ )
ಅವಧಾನದ ಚಾಂಚಲ್ಯ

ಮರದ ಚೌಕತುಂಡುಗಳನ್ನು ಜೋಡಿಸಿರುವ ಚಿತ್ರ ಇದು. ನಿಮಗೆ ಎಷ್ಟು ತುಂಡುಗಳು ಕಾಣಿಸುತ್ತವೆ ? ತುಂಡುಗಳ ಮೇಲ್ಭಾಗ ಬಿಳಿಯ ಚೌಕವಾದಾಗ ಆರು ತುಂಡುಗಳು ಕಾಣಿಸುತ್ತವೆ. ಹಾಗೆಯೇ ದಿಟ್ಟಿಸಿ ನೋಡಿದಾಗ ಬಿಳಿಯ ಚೌಕವು ತುಂಡಿನ ಕೆಳಭಾಗದಂತೆ ಕಾಣಿಸುತ್ತದೆ. ಆಗ ಏಳು ತುಂಡುಗಳನ್ನು ಎಣಿಸಬಹುದು. ನೋಡುತ್ತಿದ್ದರೆ ಒಮ್ಮೆ ಇದು, ಇನ್ನೊಮ್ಮೆ ಅದು ಕಾಣಿಸುತ್ತದೆ. ಇದೂ ದ್ವಿಸಂಧಾನದ ನಿದರ್ಶನವೇ.

ಖಂಡಗಳನ್ನೂ ಈ ಕೆಲಸಕ್ಕೆ ಸಿದ್ಧಮಾಡುತ್ತೇವೆ. ಕೆಲವೊಮ್ಮೆ ನಾವು ಅಭ್ಯಾಸದಿಂದ, ಬಯಕೆಯಿಂದ, ಆಸಕ್ತಿಯಿಂದ ಕೆಲವು ವಿವರಗಳ ಮೇಲೆ ತಟ್ಟನೆ ಗಮನ ಹರಿಸುತ್ತೇವೆ. ವೈದ್ಯನು ತನ್ನ ಟೆಲಿಫೋನ್ ಶಬ್ದಮಾಡುವುದನ್ನು ತಟ್ಟನೆ ಗಮನಿಸುತ್ತಾನೆ, ತನ್ನ ಮಗು ಅಳುವುದನ್ನು ಅಷ್ಟು ಸುಲಭವಾಗಿ ಗಮನಿಸುವುದಿಲ್ಲ. ಇಂಥ ಪ್ರಸಂಗಗಳು ನಮ್ಮ ಜೀವನದಲ್ಲಿ ಹಲವು ಬರುತ್ತವೆ. ಇದು ಮಾನಸಿಕ ಸನ್ನಾಹ ( mental set ). ನಾವು ಯಾವುದಾದರೂ ಕೆಲಸವನ್ನು ಮಾಡುವಾಗ ಅದಕ್ಕೆ ಸಂಬಂಧಪಟ್ಟ ವಿವರಗಳು ತಟ್ಟನೆ ನಮ್ಮ ಗಮನವನ್ನು ಸೆಳೆಯುತ್ತವೆ ; ಆಸಕ್ತಿ, ಅಭಿರುಚಿ. ಅಭಿನಿವೇಶ ಇವು ಮನಸ್ಸಿನಲ್ಲೇ ಪ್ರವರ್ತಕಗಳಾಗಿ ಕೆಲಸಮಾಡುವುದು ಅಭ್ಯಾಸದಿಂದ.

## ಅವಧಾನದ ವಿವರಣೆ

ಈ ಚರ್ಚೆಯಿಂದ ವ್ಯಕ್ತವಾಗುವುದೇನೆಂದರೆ ಅವಧಾನಕ್ಕೆ ವಸ್ತುವಿಗೆ ಸಂಬಂಧಪಟ್ಟ ವಿವರಗಳೂ ಮುಖ್ಯ, ಮನುಷ್ಯನ ಒಳಗಿರುವ ವಿವರಗಳೂ ಮುಖ್ಯ. ಹೊರಗಿನ ವಿವರಗಳಿಗೆ ಸಂಬಂಧಿಸಿದಂತೆ ಹಲವಾರು ಪ್ರಯೋಗಗಳನ್ನು ನಡೆಸಿದ್ದಾರೆ. ವ್ಯಾಪಾರಗಾರರು ತಂತಮ್ಮ ಸರಕುಗಳನ್ನು ಜನ ಕೊಳ್ಳಲೆಂದು ಪ್ರಚುರಪಡಿಸುವಾಗ, ಜನರ ಮನಸ್ಸನ್ನು ಸೆಳೆಯುವ ವಿವರಗಳನ್ನು ಬಳಸುತ್ತಾರೆ. ಹೇಗೆ ಪ್ರಕಟಪಡಿಸಿದರೆ ಜನರ ಕಣ್ಣನ್ನು ಕುಕ್ಕುತ್ತದೆ, ಜನರ ಗಮನಕ್ಕೆ ತಮ್ಮ ಸರಕು ಬಂದು ಅದರ ಬಗ್ಗೆ ಅವರ ಆಸಕ್ತಿ ಕೆರಳುತ್ತದೆ ಎನ್ನುವ ಪ್ರಶ್ನೆ ಮುಂದೆ ಬರುತ್ತದೆ. ಪ್ರಚೋದಕವಸ್ತುವಿನ ಗುಣ. ಸ್ವಭಾವ, ಅದು ಇರುವ ಸ್ಥಳ, ಭಂಗಿ, ನೆಲೆ, ನವ್ಯತೆ, ಪ್ರಯೋಜನ ಇವು ಮುಖ್ಯ ವಿವರಗಳು. ಒಂದು ವಿವರ ಮತ್ತೆ ಮತ್ತೆ ಪ್ರಕಟವಾಗುತ್ತಿದ್ದರೆ ಅದರ ವಿಚಾರವಾಗಿ ಅವಧಾನ ಬೆಳೆಯುತ್ತದೆ. ವಿವರವು ಹಿನ್ನಲೆಯಿಂದ ಎದ್ದು ಕಾಣುವಂತಿದ್ದರೆ, ದಪ್ಪ ದಪ್ಪ ಅಕ್ಷರಗಳಲ್ಲಿದ್ದರೆ, ಚಿತ್ರಸಮೇತವಾಗಿದ್ದರೆ, ಕಣ್ಣಿನ ನೆಲೆಗೆ ಸಮನಾಗಿದ್ದರೆ, ಬಣ್ಣಬಣ್ಣಗಳಲ್ಲಿದ್ದರೆ, ಚಲಿಸುತ್ತಿದ್ದರೆ ಗಮನ ಸೆಳೆಯುತ್ತದೆ. ಹೊಸದಾದ ವಿವರವಿರುವುದು ತಟ್ಟನೆ ನಮ್ಮ ಆಸಕ್ತಿಯನ್ನು ಕೆರಳಿಸುತ್ತದೆ. ನಾವು ಎಂದೂ ನೋಡುವ ವಸ್ತುವೇ ಆದರೂ ನಾವು ಸಾಮಾನ್ಯವಾಗಿ ನೋಡದ ಭಂಗಿಯಲ್ಲಿ ಕಾಣಿಸಿದರೆ ನಾವು ತಿರುಗಿನೋಡುತ್ತೇವೆ. ನಿತ್ಯ ಧರಿಸುವ ಉಡುಪಿಗಿಂತ ಬೇರೆ ಉಡುಪನ್ನು ಧರಿಸಿದಾಗ ಜನ ನಮ್ಮ ಕಡೆ ನೋಡುತ್ತಾರೆ. ನವ್ಯತೆಯಲ್ಲಿ ಆಕರ್ಷಕವಾದ ಗುಣವಿದೆ.

ಆಂತರಿಕವಾದ ಪ್ರವೃತ್ತಿಗಳೂ ಗಮನವನ್ನು ಸೆಳೆಯಲು ನೆರವಾಗುತ್ತವೆ. ಹಸಿವೆಯಿದ್ದಾಗ ಹೋಟಲಿನ ಕಡೆ ಗಮನ ಹೋಗುವುದು ಸುಲಭ. ಸೆಖೆಯಾಗಿರುವಾಗ ತಂಪಾದ ಮರ ನಮ್ಮ ಆಸಕ್ತಿಯನ್ನು ಸೆಳೆಯುತ್ತದೆ. ಹೀಗೆ ಒಳಗಿನ ಬಯಕೆಗಳು, ಆತಂಕಗಳು, ಆಕಾಂಕ್ಷೆಗಳು, ಪ್ರವೃತ್ತಿಗಳು, ಅಗತ್ಯಗಳು ಒಂದು ವಸ್ತುವಿನ ಮೇಲೆ ಗಮನ ಇಡಲು ಸಹಾಯಮಾಡುತ್ತವೆ.

ಅವಧಾನವೆಂಬುದು ಚಂಚಲವಾದ ಕ್ರಿಯೆ. ಬಹಳಹೊತ್ತು ಒಂದೇ ವಸ್ತುವಿನ ಮೇಲೆ ಗಮನ ಇಡುವುದು ಕಷ್ಟವೆಂದು ಎಲ್ಲರೂ ಬಲ್ಲರಷ್ಟೆ. ಮನಸ್ಸಿನ ಕ್ರಿಯೆಗಳು ಎಂದೂ ಒಂದು ವಸ್ತುವಿನಿಂದ ಮತ್ತೊಂದಕ್ಕೆ ಹಾರುವಂಥ ಸ್ವಭಾವದವು. ಎಷ್ಟು ಹೊತ್ತು ಒಂದು ವಿಷಯದಲ್ಲಿ ಗಮನ ಇಡುವುದು ಸಾಧ್ಯ ಎನ್ನುವುದನ್ನು ಮನೋವಿಜ್ಞಾನಿಗಳು ಪ್ರಯೋಗಗಳಿಂದ ನಿರ್ಧರಿಸಲೆತ್ನಿಸಿದ್ದಾರೆ. ಗಮನ ಇಟ್ಟಾಗಲೂ ಗಮನ ನಿರಂತರವಾಗಿರುವುದಿಲ್ಲ; ಸ್ವಲ್ಪಹೊತ್ತು ಗಮನವಿಟ್ಟನಂತರ ವಿವರವಾಗಿ ಮನಸ್ಸು ಚಲಿಸುತ್ತದೆ, ಮತ್ತೆ ಗಮನ ಅಲ್ಲಿಗೆ ಹಿಂದಿರುಗುತ್ತದೆ. ಇದನ್ನು ಅವಧಾನದ ಚಾಂಚಲ್ಯ ಎಂದು ನಿರ್ದೇಶಿಸಿದ್ದಾರೆ. ನಿದರ್ಶನಕ್ಕೆ ೧೨ನೇ ಚಿತ್ರವನ್ನು ನೋಡಿ.

ಇಲ್ಲಿ ಮುಖಗಳನ್ನು ಒಮ್ಮೆ ನೋಡಿದೆವೆಂದರೆ ಮರುಕ್ಷಣದಲ್ಲಿ ಹೂವಿನ ಕೂಜ ಕಾಣಿಸುತ್ತದೆ; ಮತ್ತೆ ಎದರು ಬದರು ಮುಖಗಳು ಎದ್ದು ನಿಲ್ಲುತ್ತವೆ. ಬಿಳಿಯ ಚಿತ್ರ ಕರಿಯ ಹಿನ್ನೆಲೆಯಲ್ಲಿ, ಕರಿಯ ಚಿತ್ರ ಬಿಳಿಯ ಸಂದಿಯಿಂದ ಮತ್ತೆ ಮತ್ತೆ ಮೈದಳೆಯುತ್ತವೆ. ಅವಧಾನ ಹೆಚ್ಚು ಹೊತ್ತು ನಿಲ್ಲಬೇಕಾದರೆ ವಸ್ತುವಿನಲ್ಲಿ ಸಂಕೀರ್ಣ ವಿವರಗಳಿರಬೇಕು; ನೋಡುವ ವಸ್ತು ಜಟಿಲವಾಗಿದ್ದರೆ ಅವಧಾನದ ಚಾಂಚಲ್ಯ ವಸ್ತುವಿನ ವಿವರಗಳಲ್ಲೇ ನಡೆಯುತ್ತಿದ್ದು ವಸ್ತುವಿನ ಬಗ್ಗೆ ಅವಧಾನ ನಿರಂತರ ವಾಗಿರುತ್ತದೆ. ವಸ್ತು ಸರಳವಾಗಿದ್ದರೆ ಅವಧಾನ ನಿಲ್ಲುವುದು ಕಷ್ಟ. ಅವಧಾನದಲ್ಲಿ ಮುಖ್ಯ ಅಂಶವೆಂದರೆ ಚಿತ್ತವೃತ್ತಿನಿರೋಧ; ಹರಿದಾಡುವ ಮನಸ್ಸನ್ನು ನಿಲ್ಲುವಂತೆ ಮಾಡುವುದು ಕಷ್ಟವೆನ್ನುವುದು ಪ್ರಯೋಗಗಳಿಂದ ಸ್ಪಷ್ಟವಾದಂತೆ ಯೋಗಾಭ್ಯಾಸಿ ಗಳಿಗೂ ತಿಳಿದಿದೆ. ಅವಧಾನ ನಿರಂತರವಾದರೆ ಅದು ನಿಧಿಧ್ಯಾಸನ, ವ್ಯಕ್ತಿಯು ವಿಷಯದಲ್ಲೇ ತನ್ಮಯನಾಗಿ ಉಳಿದೆಲ್ಲ ವಿವರಗಳಿಗೂ ಪರಾಙ್ಮುಖನಾಗಿದ್ದರೆ, ಅವನ ಗಮನವೆಲ್ಲ ವಸ್ತುವಿನಲ್ಲೇ ಲೀನವಾಗಿದ್ದರೆ ಅದು ಸಮಾಧಿಯ ಸ್ಥಿತಿ.




ಚಿತ್ರ ೧೨ (ಇ)

ನಿಮ್ಮ ಅವಧಾನ ಎಷ್ಟು ಸ್ಥಿರವಾಗಿದೆ ? ಮೇಲಿನ ಚಿತ್ರದಲ್ಲಿ ಹದಿನೈದು ಎಳೆಗಳು ಗೋಜಾಗಿವೆ. ಒಂದೊಂದು ಎಳೆಯ ಎರಡೂ ತುದಿಗಳು ಮಾತ್ರ ಬಿಡಿಯಾಗಿವೆ. ಅಂಕಿಹಾಕಿರುವ ಮನೆಯಿಂದ ಆರಂಭಿಸಿ ಕಣ್ಣಿನಿಂದಲೇ ಎಳೆ ಹೋಗಿರುವ ದಾರಿಯನ್ನು ಗುರುತಿಸಿ. ಆ ಕಡೆ ಅದರ ತುದಿ ಮುಟ್ಟುವ ಮನೆಯಲ್ಲಿ ಅದರ ಅಂಕಿಯನ್ನು ಹಾಕಿರಿ. ಹೀಗೆ ಒಂದು ಸಾರಿಗೆ ಎಷ್ಟು ಎಳೆಗಳನ್ನು ನೀವು ಬಿಡಿಸಬಹುದು ಎನ್ನುವುದು ನಿಮ್ಮ ಅವಧಾನದ ಸ್ಥೈರ್ಯವನ್ನು ಸೂಚಿಸುತ್ತದೆ.



ಪರಿಚ್ಛೇದ ಹನ್ನೊಂದು

# ಬುದ್ಧಿಶಕ್ತಿ, ಅದರ ಅಳತೆ

## ೧

ಪ್ರಾಣಿಗಳು ವಿಕಾಸಕ್ರಮದಲ್ಲಿ ಮೇಲೆಮೇಲೆ ಹೋಗುತ್ತ, ಅವಕ್ಕೂ ಆವರಣಕ್ಕೂ ಇರುವ ಸಂಬಂಧ ಜಟಿಲವಾಗುತ್ತದೆ. ಆವರಣದಿಂದ ಒದಗುವ ಪ್ರಚೋದನೆ ಬಹುಮುಖ ವಾಗಿದ್ದು ಪ್ರಾಣಿ ಅದಕ್ಕೆ ತಕ್ಕ ಪ್ರತಿಕ್ರಿಯೆಯನ್ನು ಮಾಡಬೇಕಾದರೆ ಕೇಂದ್ರೀಯ ನರಮಂಡಲದ ವ್ಯವಸ್ಥೆಯನ್ನು ಪಡೆಯುತ್ತದೆ; ಇಂದ್ರಿಯವೈವಿಧ್ಯ, ಅಂಗಾಂಗಗಳ ವೈವಿಧ್ಯ, ನರಮಂಡಲದ ಸೂಕ್ಷ್ಮ-ಪ್ರೌಢ ವ್ಯಾಪಾರ, ಕಶೇರುಕದ ಸೌಲಭ್ಯ, ಮಸ್ತಿಷ್ಕದ ಪ್ರಭಾವ ಇವೆಲ್ಲ ವಿಕಾಸಕ್ರಮದಲ್ಲಿ ಪ್ರಾಣಿಯ ಪ್ರತಿಕ್ರಿಯೆಗೆ ಅನುಕೂಲವಾಗುವಂತೆ ಒದಗುತ್ತವೆ. ಪ್ರಚೋದನೆಯ ವಿವರಗಳನ್ನೂ ತಾತ್ಪರ್ಯವನ್ನೂ ಅರಿತು, ಸಾವಧಾನ ವಾಗಿ ಯತ್ನಪೂರ್ವಕವಾಗಿ ಆಲೋಚಿಸಿ, ಪರಾಮರ್ಶಿಸಿ, ಅಭ್ಯಸಿಸಿ ಸೂಕ್ತವಾದ ಪ್ರತಿಕ್ರಿಯೆಯನ್ನು ಮಾಡಿ ತನ್ನನ್ನೂ ತನ್ನ ವಂಶವನ್ನೂ ಉಳಿಸಿಕೊಳ್ಳುವ ಅಗತ್ಯ ವಿಕಾಸದ ಒಂದು ಹಂತದಲ್ಲಿ ಬರುತ್ತದೆ; ಆವರಣವನ್ನು ಕೂಲಂಕಷವಾಗಿ ತಿಳಿದು ಕೊಳ್ಳುವ ಮತ್ತು ಪ್ರತಿಕ್ರಿಯೆಗಳ ಸಾಧ್ಯಾಸಾಧ್ಯತೆ, ಔಚಿತ್ಯ-ಅನೌಚಿತ್ಯ, ಅಗತ್ಯ-ಅನಗತ್ಯಗಳನ್ನು ಕುರಿತು ಸಂಕಲ್ಪಮಾಡುವ ಹವ್ಯಾಸ ಈ ಹಂತದಲ್ಲೇ ಕಾಣಿಸಿ

ಕೊಳ್ಳುತ್ತದೆ. ಈ ಅಗತ್ಯ-ಹವ್ಯಾಸಗಳಿಗೆ ಸಾಮರ್ಥ್ಯವನ್ನೂ ಮಾರ್ಗದರ್ಶನವನ್ನೂ ಒದಗಿಸುವ ಶಕ್ತಿವಿಶೇಷವೇ ಬುದ್ಧಿಯೆನಿಸಿಕೊಳ್ಳುತ್ತದೆ.

ಒಂದು ದೃಷ್ಟಿಯಿಂದ ನೋಡಿದರೆ, ವ್ಯಕ್ತಿ-ಆವರಣ ಇವುಗಳ ಸೆಣಸಾಟದಲ್ಲಿ ವ್ಯಕ್ತಿಯ ಆಯುಧ ಬುದ್ಧಿಶಕ್ತಿ. ಸಫಲವಾದ ಪ್ರತಿಕ್ರಿಯೆಯನ್ನು ನಿರ್ಧರಿಸಲೂ, ಅದನ್ನು ಯಶಸ್ವಿಯಾಗಿ ನಿರ್ವಹಿಸಲೂ ಬುದ್ಧಿಶಕ್ತಿ ಅಗತ್ಯ. ಒಮ್ಮೆ ಸಮಾಧಾನವನ್ನು ತಂದ ಪ್ರತಿಕ್ರಿಯೆಯನ್ನು ಮತ್ತೆ ಅದೇ ಸಂದರ್ಭದಲ್ಲಿ ಉಂಟುಮಾಡುವ ಸಾಮರ್ಥ್ಯ ಮೇಲ್ಮಟ್ಟದ ಪ್ರಾಣಿಗಳಲ್ಲೆಲ್ಲ ಇದೆ ; ಇದನ್ನೇ ಕಲಿಕೆಯೆನ್ನುವುದು. ಯಾವ ಪ್ರಾಣಿಯಲ್ಲಿ ಕಲಿಕೆ ಸಾಧ್ಯವೋ ಆ ಪ್ರಾಣಿಗೆ ಬುದ್ಧಿಶಕ್ತಿ ಉಂಟು ಎನ್ನಬಹುದು. ಕಲಿಕೆಯಲ್ಲಿ ಕೆಳದರ್ಜೆಗೆ ಸೇರಿದ ಪ್ರಯತ್ನ ಮತ್ತು ಸ್ಖಾಲಿತ್ಯದ ಪದ್ಧತಿಯಲ್ಲಿಯೂ ಒಮ್ಮೆ ಕಲಿಕೆ ಸಿದ್ಧಿಸಿತೆಂದರೆ ಅದನ್ನು ನೆನಪಿನಲ್ಲಿ ಉಳಿಸಿಕೊಳ್ಳಲು, ಮತ್ತೆ ಅದನ್ನು ಬಳಸಲು ಪ್ರಸಂಗವನ್ನು ಸಂಕೇತವಾಗಿ ಗ್ರಹಿಸುವ ಶಕ್ತಿ ಇರಲೇಬೇಕು. ಈ ಶಕ್ತಿ ಕಲಿಕೆ ಮೇಲುಮಟ್ಟಕ್ಕೆ ಹೋದಂತೆ ಸೂಕ್ಷ್ಮವಾಗುವುದು, ಜಟಿಲವಾಗುವುದು ; ಮನುಷ್ಯನ ನೆಲೆಯಲ್ಲಿ ಮೇಲ್ತರದ್ದಾಗುವುದು. ಮನುಷ್ಯನಲ್ಲಿ ಬುದ್ಧಿಶಕ್ತಿ ಹೆಚ್ಚಿನ ಪ್ರಮಾಣದಲ್ಲಿ ಇರುವುದರಿಂದಲೇ ಅವನ ಕಲಿಕೆ ಅಲ್ಪಶ್ರಮದಿಂದಲೇ ಸಾಧ್ಯವಾಗುತ್ತದೆ ; ಕ್ಷಿಪ್ರ ಕಾಲದಲ್ಲಿಯೇ ಕೈವಶವಾಗುತ್ತದೆ, ದೀರ್ಘಕಾಲ ಉಳಿಯುತ್ತದೆ, ಆವರಣದೊಂದಿಗೆ ಸೆಣಸಾಟ ಯಶಸ್ವಿಯಾಗುತ್ತದೆ.

ಆದರೆ ಮನುಷ್ಯನಿಗೆ ಮಾತ್ರ ಬುದ್ಧಿಶಕ್ತಿ ಮೀಸಲು ಎಂದು ಬಗೆಯಬಾರದು. ಹಲವಾರು ಹಂತಗಳ ಕೆಳಗೂ ಈ ಶಕ್ತಿ ಪ್ರಕಟವಾಗುತ್ತದೆ. ವ್ಯೂಹವನ್ನು ಸಮರ್ಪಕವಾಗಿ ನಿರ್ವಹಿಸುವ ಇಲಿಯಲ್ಲಿ ಕೂಡ ಬುದ್ಧಿಶಕ್ತಿಯುಂಟು. ನಮ್ಮೊಡನೆ ಬಾಳಲು ಕಲಿಯುವ ನಾಯಿ, ಬೆಕ್ಕು ಮೊದಲಾದ ಪ್ರಾಣಿಗಳಿಗೂ ಬುದ್ಧಿಯಿಲ್ಲದೆ ಇಲ್ಲ. ಕಪಿಗಳಿಗಂತೂ ಸರಿಯೇ ಸರಿ ; ಕೊಯ್ಲೆರ್‌ನ ಪ್ರಯೋಗಗಳು ಕಪಿಗಳಲ್ಲಿ ಮೇಲ್ಮಟ್ಟದ ಬುದ್ಧಿಯೇ ಇದೆಯೆಂದು ತೋರಿಸಿವೆ. ಮನುಷ್ಯನಲ್ಲಿ ಬುದ್ಧಿ ತುಂಬ ವಿಕಸಿತವಾಗಿದೆ. ಸಮಸ್ಯೆಗಳನ್ನು ಪರಿಹರಿಸುವಾಗ ವಸ್ತುಗಳು ಇದುರಿಗೇ ಇರಬೇಕೆಂಬ ನಿಯಮವಿಲ್ಲದೆ, ವಸ್ತುಗಳು ಮುಂದಿಲ್ಲದಿದ್ದಾಗಲೂ ಆಲೋಚನೆಯ ಮೂಲಕ (abstract thinking) ಸಮಸ್ಯೆಯನ್ನು ಬಗೆಹರಿಸುವುದು ಮನುಷ್ಯನಿಗೆ ಮಾತ್ರ ಸಾಧ್ಯ. ಇದರ ಹಿನ್ನೆಲೆಯನ್ನೇನೋ ಕೆಳಗಿನ ಪ್ರಾಣಿವರ್ಗಗಳಲ್ಲಿ ಕಾಣಬಹುದು. ಬುದ್ಧಿಶಕ್ತಿಯನ್ನು ಸಂಕೇತ ಪ್ರಮುಖವಾದ ವ್ಯಾಪಾರಕ್ಕೆ ಸಾಧನ ಎಂದು ಪರಿಗಣಿಸುತ್ತಾರೆ. ಈ ಸಾಮರ್ಥ್ಯವು ವಿಕಾಸಕ್ರಮದಲ್ಲಿ ಒದಗಿ ಬರುಬರುತ್ತ ಬೆಳೆದಿದೆ, ಮನುಷ್ಯನಲ್ಲಿ ಪಕ್ವವಾಗಿದೆ.

ಬುದ್ಧಿಶಕ್ತಿಗೂ ಶರೀರರಚನೆಗೂ ನಿಕಟಸಂಬಂಧವುಂಟು. ಕೆಳವರ್ಗದ ಪ್ರಾಣಿಗಳ ಶರೀರ ರಚನೆ ತುಂಬ ಸರಳವಾಗಿದ್ದು ಅದರಿಂದ ಪ್ರತಿಕ್ಷೇಪಕ್ರಿಯೆಗಳೂ

ಅಂಶಗಳು (ಬುದ್ಧಿಶಕ್ತಿ)

50 45 40 35 30 25 20 15 10 5

2 4 6 8 10 12 14 16 18 20

ವಯಸ್ಸು (ವರ್ಷಗಳು)

ಚಿತ್ರ ೧೩

ವಯಸ್ಸು ಹೆಚ್ಚಾದಂತೆ ಬುದ್ಧಿಶಕ್ತಿ ಬೆಳೆಯುತ್ತದೆ; ಆದರೆ ಒಂದು ವಯಸ್ಸಿನಲ್ಲಿ ಬೆಳೆಯುವುದು ನಿಲ್ಲುತ್ತದೆ. ಆಗ ವೃತ್ತ ಏರದೆ ಸಮನಾಗಿ ಉಳಿದು ಬಿಡುತ್ತದೆ. ಎಳೆಯ ವಯಸ್ಸಿನಲ್ಲಿ ಬುದ್ಧಿಶಕ್ತಿ ಬೆಳೆಯುವ ವೇಗ ಹೆಚ್ಚು; ಬರುಬರುತ್ತ ನಿಧಾನವಾಗಿ ಕಡೆಗೆ ಬೆಳವಣಿಗೆ ನಿಲ್ಲುತ್ತದೆ. ಮೇಲಿನ ಚಿತ್ರದಲ್ಲಿ ೧೨ ವರ್ಷದವರೆಗೆ ಇರುವ ಏರಿಕೆ ಅಲ್ಲಿಂದ ಮುಂದೆ ಕಾಣುವುದಿಲ್ಲ; ೧೮ ವರ್ಷವಾದಮೇಲೆ ಪ್ರಸ್ಥನೆಲೆ.

(i)



(ii)



ಚಿತ್ರ ೧೪

ನಿಮ್ಮ ಬುದ್ಧಿಶಕ್ತಿ ಎಷ್ಟಿದೆ ? ಆಲೋಚನೆ ಎಷ್ಟು ಹರಿತವಾಗಿದೆ ? ಮೇಲೆ ಎರಡು ಕುದುರೆಗಳಿರುವ ಒಂದು ಚಿತ್ರವಿದೆ; ಪಕ್ಕದಲ್ಲಿ ಮತ್ತೊಂದು ಚಿತ್ರದಲ್ಲಿ ಸವಾರರಿಬ್ಬರಿದ್ದಾರೆ. ಎರಡನೆಯ ಚಿತ್ರದಲ್ಲಿರುವ ಸವಾರರನ್ನು ಮೊದಲನೆಯ ಚಿತ್ರದ ಕುದುರೆಗಳ ಮೇಲೆ ಸರಿಯಾಗಿ ಕೂಡಿಸಿ, ನೋಡೋಣ. ಕಾಗದಗಳನ್ನು ಹರಿಯಬಾರದು ; (ii) ನ್ನು (i) ರ ಮೇಲಿಟ್ಟು ಜೋಡಿಸಬೇಕು ಅಷ್ಟೆ. ಸವಾರರು ಕುದುರೆಗಳ ಮೇಲೆ ಸರಿಯಾಗಿ ಕೂತಿರಬೇಕು. ಜೋಡಿಸಿದ ಚಿತ್ರದಲ್ಲಿ ಒಂದು ಕುದುರೆ ಅದರ ಮೇಲಿನ ಸವಾರ ನಮಗೆ ಸರಿಯಾಗಿದ್ದು ಇನ್ನೊಂದು ಕುದುರೆ ತಲೆಕೆಳಗಾಗಿರುತ್ತದೆ; ಆದರೆ ಕುದುರೆಯ ಮೇಲೆ ಸವಾರ (ತಲೆಕೆಳಗಾಗಿದ್ದರೂ) ಸರಿಯಾಗಿಯೇ ಕೂತಿರುತ್ತಾನೆ.

ಮೊದಲು ಇದು ಅಸಾಧ್ಯವೆಂದೇ ತೋರುತ್ತದೆ. ಆದರೆ ಪ್ರಯತ್ನದಿಂದ ಸರಿಯಾದ ಸಂವಿಧಾನ ಸ್ಪಷ್ಟವಾಗುತ್ತದೆ. (ii) ನ್ನು ಅಡ್ಡವಾಗಿ ಜೋಡಿಸಿದರೆ (i) ರ ಮೇಲಿನ ಕುದುಗೆಯ ತಲೆ ಕೆಳಗಿನ ಕುದುರೆಯ ಬಾಲ ಮಧ್ಯೆ ಸವಾರ ಸೇರಿ ಒಂದು ಕುದುರೆಯಾಗಿಬಿಡುತ್ತದೆ ; ಹಾಗೆಯೇ ಅದರ ಕೆಳಗೆ ಮತ್ತೊಂದು ಕುದುರೆ. ಈ ಸಮಸ್ಯೆಯ ಸ್ವಾರಸ್ಯ ಮೊದಲು ಹೊಳೆದದ್ದು ಶೀರರ್, ಗೋಲ್ಡ್‌ಸ್ಟೈನ್ ಮತ್ತು ಬೋರಿಂಗ್ ಎನ್ನುವ ಮನಃಶಾಸ್ತ್ರಜ್ಞರಿಗೆ.

ಸಹಜ ಪ್ರವೃತ್ತಿಗಳೂ ವ್ಯಕ್ತವಾಗುತ್ತವೆ. ಮುಂದೆ ಶರೀರ ರಚನೆಯಲ್ಲಿ ಸೂಕ್ಷ್ಮ ವ್ಯಾಪಾರವು ಸಾಧ್ಯವಾಗುವಂತೆ ಅಂಗೋಪಾಂಗಗಳೂ, ನರಮಂಡಲ ವ್ಯವಸ್ಥೆಯೂ ಒದಗಿದಂತೆ ಬುದ್ಧಿಶಕ್ತಿ ಕಾಣಿಸಿಕೊಳ್ಳುತ್ತದೆ. ಸ್ಮೃತಿ, ಕಲಿಕೆ, ಸಂಕಲ್ಪ, ಭಾವ, ಕೌಶಲ ಇವು ಪ್ರಾಣಿಯ ಶಾರೀರ ವ್ಯವಸ್ಥೆಯ ಫಲವಾಗಿಯೇ ಬಂದಂತೆ ಬುದ್ಧಿಶಕ್ತಿಯೂ ಶಾರೀರ ವ್ಯವಸ್ಥೆಯ ಫಲವೇ. ಕಶೇರುಕ, ಮಸ್ತಿಷ್ಕ ಇವುಗಳ ಪ್ರೌಢಸ್ಥಿತಿ ಬುದ್ಧಿ ಶಕ್ತಿಯ ಹಿರಿಮೆಗೆ ಮೂಲಕಾರಣ ; ಪಂಚೇಂದ್ರಿಯವ್ಯವಸ್ಥೆಯೂ ಇದಕ್ಕೆ ನೆರವಾಗುತ್ತದೆ. ಎಂದರೆ ಬುದ್ಧಿಶಕ್ತಿ ಕೇವಲ ಮಾನಸಿಕ ವ್ಯಾಪಾರವಲ್ಲ ; ಶಾರೀರ ಪ್ರವೃತ್ತಿಗೆ ಸಂಬಂಧಿಸಿದ ವ್ಯಾಪಾರ ಅದು. ಮಸ್ತಿಷ್ಕದ ರಚನೆಯಲ್ಲಿ ಏರುಪೇರಾದರೆ ಬುದ್ಧಿಶಕ್ತಿ ಕುಂಠಿತವಾಗುತ್ತದೆ. ಮಗು ಹುಟ್ಟುವಾಗ ಮಸ್ತಿಷ್ಕ ಸಣ್ಣದಾಗಿರುವುದಷ್ಟೆ, ಮಗು ಬೆಳೆಯುತ್ತ ಅದೂ ಬೆಳೆಯುತ್ತದೆ. ಇದಕ್ಕೆ ಹೊಂದಿಕೊಂಡು ಬುದ್ಧಿಶಕ್ತಿ ಕೂಡ ಎಳೆತನದಲ್ಲಿ ಸಣ್ಣ ಪ್ರಮಾಣದಲ್ಲಿದ್ದು ಬರುಬರುತ್ತ ದೊಡ್ಡದಾಗುತ್ತದೆ. ವ್ಯಕ್ತಿಯ ವಿಕಾಸಕ್ರಮಕ್ಕೂ ಬುದ್ಧಿಶಕ್ತಿಯ ಪ್ರಗತಿಗೂ ನೇರವಾದ ಸಂಬಂಧವಿದೆ. ಶರೀರ ರಚನೆಯಿಂದ ಬುದ್ಧಿಶಕ್ತಿ ನೇರವಾಗಿ ಪ್ರಭಾವಿತವಾಗುತ್ತದೆ. ( ಚಿತ್ರ-೧೩ )

ಶರೀರದಲ್ಲಿ ರಚನೆಯಿಂದಾಗಿ ಬುದ್ಧಿಶಕ್ತಿಯ ಸೌಲಭ್ಯವಿದ್ದಮಾತ್ರಕ್ಕೆ ಬುದ್ಧಿ ಶಕ್ತಿ ಬೆಳೆದೇ ಬೆಳೆಯುತ್ತದೆ ಎನ್ನುವ ನಿಯಮವಿಲ್ಲ. ಸಂದರ್ಭದಿಂದ ಪ್ರಚೋದನೆಯು ಆಗುತ್ತಿದ್ದರೇ ಬುದ್ಧಿಶಕ್ತಿಯ ವಿಕಾಸಕ್ಕೆ ಸ್ಫೂರ್ತಿ ಮತ್ತು ಮಾರ್ಗದರ್ಶನ. ಮಸ್ತಿಷ್ಕಕ್ಕೆ ಆವರಣದಿಂದ ಎಂಥ ಪ್ರಚೋದನೆ ದೊರೆಯುತ್ತದೆ, ಎಷ್ಟು ವಿಚಾರ ಸಾಮಗ್ರಿ ಉಪಲಬ್ಧವಾಗುತ್ತದೆ ಎನ್ನುವುದು ಮುಖ್ಯವಾದ ಅಂಶ. ಆವರಣದೊಂದಿಗೆ ವ್ಯಕ್ತಿಯ ಸಂಬಂಧ ಬಹುಮುಖವಾಗಿದ್ದರೆ, ಗಾಢವಾಗಿದ್ದರೆ ಬುದ್ಧಿಶಕ್ತಿಯೂ ಪ್ರಖರವಾಗುತ್ತದೆ, ವ್ಯಾಪ್ತವಾಗುತ್ತದೆ. ಕುರುಡರು, ಕಿವುಡರು, ಹೆಳವರು ಮೊದಲಾದ ಅಂಗವಿಕಲರು ಆವರಣದೊಂದಿಗೆ ಮಿತವಾದ ಸಂಪರ್ಕವುಳ್ಳವರಷ್ಟೆ ; ಅವರಿಗೆ ಸ್ವಭಾವ ಸಿದ್ಧವಾದ ಬುದ್ಧಿಶಕ್ತಿ ಎಷ್ಟೇ ಇರಲಿ, ಅದು ಬರುಬರುತ್ತ ಸಂಕುಚಿತವಾಗುತ್ತದೆ. ನಷ್ಟವಾಗುತ್ತದೆ ; ಈ ಅಂಗವಿಕಲತೆಯ ಅಡ್ಡಿಯನ್ನು ತೊಲಗಿಸಿ ಅವರು ವೈಯಕ್ತಿಕ ವಿಕಾಸಕ್ಕೆ ಹೋರಾಡುವಾಗ ಮಾತ್ರ ಬುದ್ಧಿಶಕ್ತಿಯ ಅಭಿವ್ಯಕ್ತಿಯಾಗುತ್ತದೆ. ಎಂದರೆ ಬುದ್ಧಿಶಕ್ತಿಗೂ ಆವರಣದಿಂದ ಒದಗುವ ಪ್ರಚೋದನೆಗೂ ಸಂಬಂಧವುಂಟು ; ಕಲಿಕೆಯು ಈ ಅಂಶದ ವ್ಯಾಪ್ತಿಯಲ್ಲಿಯೇ ಬರತಕ್ಕದ್ದು.

ಹುಟ್ಟುತ್ತಲೇ ಬುದ್ಧಿಶಕ್ತಿ ನಿರ್ದಿಷ್ಟ ಪ್ರಮಾಣದಲ್ಲಿರುತ್ತದೆ; ಇದರಲ್ಲಿ ಆನುವಂಶಿಕ ಲಕ್ಷಣವೂ ಇಲ್ಲದೆ ಇಲ್ಲ, ಇದು ಅಂತರ್ನಿಹಿತ ಶಕ್ತಿ (potentiality) ಯಷ್ಟೆ. ಅದು ಎಷ್ಟರಮಟ್ಟಿಗೆ ಬೆಳೆಯುತ್ತದೆ, ಹೇಗೆ ಅಭಿವ್ಯಕ್ತವಾಗುತ್ತದೆ ಎನ್ನುವುದು ಆವರಣದೊಂದಿಗೆ ವ್ಯಕ್ತಿಯ ಸಂಪರ್ಕದಿಂದ ನಿರ್ದಿಷ್ಟವಾಗುತ್ತದೆ. ಮಸ್ತಿಷ್ಕವನ್ನು ಅವಲಂಬಿಸಿ ಇದರ ಸಾಧ್ಯಾಸಾಧ್ಯತೆಗಳು ಗೊತ್ತಾದರೂ ನಮ್ಮ ಅನುಭವಗಳಿಂದಲೂ ಇದರ ವಿಕಾಸ ಪ್ರಭಾವಿತವಾಗುತ್ತದೆ. ಸಣ್ಣ ವಯಸ್ಸಿನಲ್ಲಿ

ನಮ್ಮ ಅನುಭವ ಸಾಮಗ್ರಿ, ಘಟನೆಗಳು, ಪ್ರಚೋದನೆ ಇವುಗಳಿಂದಲೇ ಬುದ್ಧಿಶಕ್ತಿಯ ಲಕ್ಷಣ-ಪ್ರಮಾಣಗಳು ಸಿದ್ಧವಾಗುತ್ತವೆ ಎನ್ನಬಹುದು.

೨

## ಬುದ್ಧಿಶಕ್ತಿಯ ಪರೀಕ್ಷೆ

ಬುದ್ಧಿಶಕ್ತಿ ಯಾವ ಪ್ರಮಾಣದಲ್ಲಿದೆ, ಅದರ ಲಕ್ಷಣಗಳೇನು ಎನ್ನುವುದು ಮನಃ ಶಾಸ್ತ್ರಜ್ಞರನ್ನು ಕೆರಳಿಸಿರುವ ಸಮಸ್ಯೆ. ಬುದ್ಧಿಶಕ್ತಿ ಇರುವುದಾದರೆ ನಿರ್ದಿಷ್ಟ ಪ್ರಮಾಣದಲ್ಲಿಯೇ ಇರಬೇಕು ಎನ್ನುವುದು ವೈಜ್ಞಾನಿಕಸಿದ್ಧಾಂತ ; ಇರುವುದೆಲ್ಲ ಇಂತಿಷ್ಟು ಪ್ರಮಾಣದಲ್ಲಿಯೇ ಇದೆ ಎಂದು ನಿರ್ಧರಿಸುವುದೇ ವಿಜ್ಞಾನದ ಉದ್ದೇಶ. ಬುದ್ಧಿಶಕ್ತಿಯ ವಿಚಾರದಲ್ಲಿಯೂ ಈ ಮಾತು ನಿಜ ಎನ್ನುವುದು ಬುದ್ಧಿಶಕ್ತಿಯ ಪರೀಕ್ಷೆಗಳಿಂದ ಖಚಿತವಾಗಿದೆ. ಬುದ್ಧಿಶಕ್ತಿಯ ಸ್ವರೂಪ, ಪ್ರಮಾಣಗಳನ್ನು ಪರೀಕ್ಷೆಗೆ ಒಳಪಡಿಸಿ, ಅಂಕಿ-ಅಂಶಗಳಿಂದ ಅದರ ಪ್ರವೃತ್ತಿ, ಸಾಮರ್ಥ್ಯ, ಆತಂಕ, ಅಂತರಾಯ ಗಳನ್ನು ನಿರ್ಧರಿಸುವ ಪ್ರಯತ್ನ ಮನಃಶಾಸ್ತ್ರಕ್ಷೇತ್ರದಲ್ಲಿ ವಿಪುಲವಾಗಿ ನಡೆದಿದೆ.

ಈ ಪ್ರಯತ್ನದ ಅಂಕುರಾರ್ಪಣವನ್ನು ಮಾಡಿದವನು ಆಲ್‌ಫ್ರೆಡ್ ಬಿನೇ (Binet) ಎನ್ನುವ ಫ್ರೆಂಚ್ ಮನಶಾಸ್ತ್ರಜ್ಞ. ಫ್ರಾನ್ಸ್ ಸರಕಾರದ ಶಿಕ್ಷಣಶಾಖೆಯಲ್ಲಿ ವಿದ್ಯಾಧಿಕಾರಿಯಾಗಿದ್ದ ಇವನು ಶಾಲೆಯಲ್ಲಿ ಬುದ್ಧಿಶಕ್ತಿ ಎಲ್ಲ ಮಕ್ಕಳಿಗೂ ಸಮಾನವಾಗಿ ಇರುವುದಿಲ್ಲವೆಂದೂ, ಸಾಕಷ್ಟು ಬುದ್ಧಿಶಕ್ತಿಯಿಲ್ಲದ ಮಕ್ಕಳು ಹಿಂದುಳಿಯು ವುದು ಸಹಜವೆಂದೂ, ಶಾಲೆಯಲ್ಲಿ ಅಂಥವರಿಗಾಗಿ ಬೇರೆ ತರಗತಿಗಳನ್ನು ನಡೆಸುವುದು ಅಗತ್ಯವೆಂದೂ ೧೮೯೪ ರಲ್ಲಿ ಸೂಚಿಸಿದನು. ಸಾಮಾನ್ಯವಾದ ಶಿಕ್ಷಣ ಪದ್ಧತಿ ಉಳಿದ ಮಕ್ಕಳಿಗೆ ಸಮರ್ಪಕವಾಗಿದ್ದರೂ ಬುದ್ಧಿಶಕ್ತಿಯ ಪ್ರಮಾಣ ಕಮ್ಮಿಯಿರುವ ಮಕ್ಕಳು ಇದರಿಂದ ಪ್ರಯೋಜನ ಪಡೆಯಲಾರರು ; ಆದುದರಿಂದ ಅವರಿಗಾಗಿ ಶಿಕ್ಷಣ ಪದ್ಧತಿಯನ್ನು ಪ್ರತ್ಯೇಕವಾಗಿ ನಿಶ್ಚಯಿಸುವುದು ಒಳ್ಳೆಯದೇ. ಆದರೆ ಯಾವ ಮಕ್ಕಳಿಗೆ ಬುದ್ಧಿಶಕ್ತಿ ಕಮ್ಮಿ ಪ್ರಮಾಣದಲ್ಲಿದೆ, ಎಷ್ಟು ಕಮ್ಮಿ ಪ್ರಮಾಣ ಎಂದು ನಿರ್ಧರಿಸುವುದು ಹೇಗೆ? ಉಪಾಧ್ಯಾಯರಿಗೇ ಸ್ಥೂಲವಾಗಿ ತಿಳಿಯುತ್ತದೆ, ಆದರೆ ಕೇವಲ ಅವರ ವೈಯಕ್ತಿಕ ಅಭಿಪ್ರಾಯವನ್ನೇ ಪ್ರಮಾಣವೆಂದು ಸ್ವೀಕರಿಸುವುದು ಸರಿಯಾಗದು. ಕೆಲವು ಪರೀಕ್ಷೆಗಳನ್ನು ನಡೆಸಿ ಮಕ್ಕಳ ಬುದ್ಧಿಶಕ್ತಿ ಎಷ್ಟು ಎಂದು ನಿರ್ಣಯಿಸುವ ಪ್ರಯತ್ನ ಮಾಡಬೇಕೆನ್ನುವ ಹಂಚಿಕೆ ಬಿನೇ ಮಹಾಶಯನಿಗೆ ಹೊಳೆಯಿತು.

ಬಿನೇ ಮತ್ತು ಅವನ ಮಿತ್ರ ಸೈಮನ್ (Simon) ಇಬ್ಬರೂ ಸೇರಿ ಶಾಲಾ ಮಕ್ಕಳ ಸಾಮಾನ್ಯ ಪ್ರಗತಿಯ ಬಗ್ಗೆ ಅನ್ವೇಷಣೆ ನಡೆಸುತ್ತಿದ್ದರು. ಅಷ್ಟು ಪ್ರತಿಭಾ ಶಾಲಿಗಳೂ ಅಷ್ಟು ಮಂದಬುದ್ಧಿಯವರೂ ಅಲ್ಲದ ಸಾಮಾನ್ಯ ಮಕ್ಕಳು ಸ್ಮೃತಿ,

ಅವಧಾನ, ಮೊದಲಾದ ಮಾನಸಪ್ರವೃತ್ತಿಗಳ ಪರೀಕ್ಷೆಯಲ್ಲಿ ಎಷ್ಟರಮಟ್ಟಿಗೆ ತೇರ್ಗಡೆ ಹೊಂದುತ್ತಾರೆ ಎನ್ನುವುದು ಅವರ ಅನ್ವೇಷಣೆಯ ಉದ್ದೇಶವಾಗಿದ್ದಿತು. ಮೂವತ್ತು ಪರೀಕ್ಷೆಗಳಿರುವ ಒಂದು ಶ್ರೇಣಿ ( scale ) ಯನ್ನು ಅವರು ಸಿದ್ಧಪಡಿಸಿ, ಪರೀಕ್ಷೆಗಳನ್ನು ಅತ್ಯಂತ ಸರಳದಿಂದ ಅತ್ಯಂತ ಜಟಿಲದವರೆಗೆ ಅನುಕ್ರಮವಾಗಿ ಅಳವಡಿಸಿ ಮಂದ ಬುದ್ಧಿಯವರೆಂದು ನಿಶ್ಚಿತರಾದ ವಿದ್ಯಾರ್ಥಿಗಳ ಮೇಲೆ ಪ್ರಯೋಗಿಸಿದರು. ಇದೇ ಬುದ್ಧಿಶಕ್ತಿಯ ಪರೀಕ್ಷೆಗೆ ಬುನಾದಿಯಾಯಿತು.

ಮುಂದೆ ಬಿನೇ ಮತ್ತು ಸೈಮನ್ ಬುದ್ಧಿಶಕ್ತಿಯ ಪರೀಕ್ಷಾಶ್ರೇಣಿಯನ್ನು ವ್ಯವಸ್ಥೆ ಮಾಡುವುದರ ಉದ್ದೇಶ 'ಮಗುವಿನ ಬುದ್ಧಿಶಕ್ತಿ ಇಷ್ಟೇ ಪ್ರಮಾಣದಲ್ಲಿದೆ ಎನ್ನುವುದನ್ನು ಖಚಿತವಾಗಿಯೂ ಶಾಸ್ತ್ರಶುದ್ಧವಾಗಿಯೂ ನಿರ್ಧರಿಸುವುದು ಸಾಧ್ಯ' ಎನ್ನುವುದನ್ನು ತೋರಿಸಲೇ ಆಗಿದ್ದಿತು. ಒಂದು ಮಗುವಿನ ಬುದ್ಧಿಶಕ್ತಿಯ ಮಟ್ಟ ( level ) ಉಳಿದ ಮಕ್ಕಳ ಬುದ್ಧಿಶಕ್ತಿಯ ನೆಲೆಯ ದೃಷ್ಟಿಯಿಂದ ಹೇಗಿದೆ, ಎಷ್ಟರ ಮಟ್ಟಿಗೆ ಹಿಂದುಳಿದಿದೆ ಎಂದು ನಿಶ್ಚಯಿಸುವುದೂ ಈ ಶ್ರೇಣಿಯಿಂದ ಸಾಧ್ಯವಾಯಿತು.

ಈ ಶ್ರೇಣಿಪರೀಕ್ಷೆಗಳನ್ನು ಮಕ್ಕಳು ಉತ್ತರಿಸುವಾಗ ಅವರ ವಯಸ್ಸನ್ನೂ ಪರಿಗಣಿಸಲಾಯಿತು. ಶ್ರೇಣಿಯಲ್ಲಿ ಎಷ್ಟು ಪರೀಕ್ಷೆಗಳನ್ನು ಸಾಮಾನ್ಯವಾಗಿ ಮೂರು ವರ್ಷದ ಮಗು ಸಮರ್ಪಕವಾಗಿ ಉತ್ತರಿಸಬಲ್ಲುದು ಎಂಬುದನ್ನು ನಿರ್ಧರಿಸಿ, ಅನಂತರ ಐದು ವರ್ಷದ ಮಗು ಅಷ್ಟೇ ಪರೀಕ್ಷೆಗಳನ್ನು ಮಾತ್ರ ಮಾಡಬಲ್ಲುದಾದರೆ, ಅದರ ಆಜನ್ಮ ವಯಸ್ಸು ಐದಾದರೂ ಬುದ್ಧಿಶಕ್ತಿಯ ದೃಷ್ಟಿಯಿಂದ ಮೂರು ವರ್ಷಗಳೇ ಅದರ ವಯಸ್ಸು ; ಎರಡು ವರ್ಷ ಹಿಂದುಳಿದಿದೆ ಎಂದು ನಿರ್ದೇಶನಮಾಡುವುದು ಸಾಧ್ಯವಾಯಿತು.

ಆದರೆ ಪರೀಕ್ಷೆಗಳಲ್ಲಿ ಕೇಳುವ ಪ್ರಶ್ನೆಗಳು ಶಾಲಾಭ್ಯಾಸಕ್ಕೆ, ಶಾಲೆಯಲ್ಲಿ ಕಲಿತಕ್ಕೆ ಸಂಬಂಧಪಟ್ಟಿದ್ದರೆ ಮೌಲಿಕವಾದ ಬುದ್ಧಿಶಕ್ತಿ ತಿಳಿಯುವುದು ಕಷ್ಟ. ಶಾಲೆಗೆ ಹೋದ ಮಗುವಿಗೆ ಚರಿತ್ರೆ, ಭೂಗೋಳ, ಲೆಕ್ಕ ಬರುತ್ತವೆ ; ಶಾಲೆಗೆ ಹೋಗದ ಮಗುವಿಗೆ ಈ ವಿಚಾರಗಳು ತಿಳಿದಿರುವುದಿಲ್ಲ. ಆದರೆ ಇಬ್ಬರ ಬುದ್ಧಿಶಕ್ತಿಯೂ ಸಮಾನವಾಗಿರ ಬಹುದು ; ಶಾಲೆಗೆ ಹೋಗಿದ್ದರೆ ಎರಡನೆಯ ಮಗುವಿಗೂ ಈ ವಿಚಾರಗಳೆಲ್ಲ ತಿಳಿದಿರು ತ್ತಿತ್ತು. ಬಿನೇ ಮತ್ತು ಸೈಮನ್ ಅಧ್ಯಯನ ಮಾಡುತ್ತಿದ್ದುದು ಕಲಿಕೆಯಿಂದ ಬಂದ ವಿಚಾರಸಂಗ್ರಹವಲ್ಲ, ಸಹಜವಾಗಿ ಇರುವ ಬುದ್ಧಿಶಕ್ತಿ. ಈ ದೃಷ್ಟಿಯಿಂದ ಅವರು ತಮ್ಮ ಪರೀಕ್ಷಾಶ್ರೇಣಿಯನ್ನು ಸಿದ್ಧಪಡಿಸಿದರು. ಅದಲ್ಲದೆ, ಮಕ್ಕಳ ವಯೋಮಾನ ವನ್ನವಲಂಬಿಸಿ ಪರೀಕ್ಷಾವಿವರಗಳನ್ನೂ ಅನುಕ್ರಮವಾಗಿ ಜೋಡಿಸಿದರು. ಯಾವ ವಿವರಗಳು ಪರೀಕ್ಷೆಯಲ್ಲಿ ಸೇರಬೇಕೆಂಬುದನ್ನೂ ವಿಚಾರಮಾಡಿ, ಪ್ರಯೋಗದಿಂದಲೇ ನಿರ್ಧರಿಸಿದರು ; ಹಲವಾರು ವಯೋವರ್ಗಗಳಲ್ಲಿ ಇವನ್ನು ಪ್ರಯೋಗಿಸಿ ಅವುಗಳ ಸೌಲಭ್ಯ, ಸೌಕರ್ಯ, ಕ್ಲಿಷ್ಟತೆ ಇವುಗಳ ಬಗ್ಗೆ ನಿರ್ಧಾರಕ್ಕೆ ಬಂದರು.

ಮೊದಲು ಬಿನೇ-ಸೈಮನ್ ಬುದ್ಧಿಮಾಪಕ ಶ್ರೇಣಿಯು ಮೂರು ವರ್ಷದ ಮಗುವಿನ ನೆಲೆಗಿಂತ ಮುಂದಿನ ನೆಲೆಗಳನ್ನು ಪರೀಕ್ಷಿಸುವುದಿದ್ದಿತು ; ಅಮೆರಿಕೆಯಲ್ಲಿ ಈ ಶ್ರೇಣಿಯನ್ನು ಅಳವಡಿಸಿಕೊಳ್ಳುವಾಗ ಎರಡು ವರ್ಷಗಳ ನೆಲೆಗೂ ಅದು ಉಪಯುಕ್ತವಾಗುವಂತೆ ವ್ಯವಸ್ಥೆಮಾಡಿದರು. ಎಳೆಯ ಮಕ್ಕಳ ಬುದ್ಧಿಶಕ್ತಿಯನ್ನೂ ಅಳತೆ ಮಾಡುವ ಅಗತ್ಯವನ್ನು ಅರಿತು ಯೇಲ್ ವಿಶ್ವವಿದ್ಯಾನಿಲಯದಲ್ಲಿ ಆರ್ನಾಲ್ಡ್ ಗೆಸೆಲ್ ಎಂಬುವ ಮನಃಶಾಸ್ತ್ರಜ್ಞ ಮಕ್ಕಳು ಹುಟ್ಟಿದ ಮೊದಲು ತಿಂಗಳುಗಳಲ್ಲಿ ಅವರ ಐಂದ್ರಿಯ ಮತ್ತು ಕ್ರಿಯಾತ್ಮಕಪ್ರವೃತ್ತಿಗಳು ಹೇಗೆ ವಿಕಾಸಹೊಂದುತ್ತವೆ, ಬುದ್ಧಿಶಕ್ತಿಯ ನೆಲೆಯಲ್ಲಿ ಈ ಪ್ರವೃತ್ತಿಗಳ ಪ್ರಯೋಜನ ಏನು ಎನ್ನುವುದನ್ನು ನಿರ್ಧರಿಸಲು ಶಿಶುವಿಕಸನಪ್ರಣಾಳಿಕೆ (child development schedule) ಯನ್ನು ಸಿದ್ಧಪಡಿದನು. ಶೈಶವದಲ್ಲಿ ಮಗುವಿನ ಐಂದ್ರಿಯ ( sensory ) ಮತ್ತು ಕಾರ್ಮಿಕ ( motor ) ವರ್ತನೆ ಮುಂದೆ ಮೈದಳೆಯುವ ಬುದ್ಧಿಶಕ್ತಿಯನ್ನು ನಿರ್ಧರಿಸಲು ನೆರವಾಗುತ್ತದೆ ಎನ್ನುವುದು ಈ ಪ್ರಣಾಳಿಕೆಯ ಉದ್ದೇಶವಾಗಿದ್ದಿತು. ಇದು ಅಷ್ಟಾಗಿ ಫಲಕಾರಿಯಾಗಲಿಲ್ಲವಾದರೂ ಸ್ವಾರಸ್ಯವಾದ, ಮುಖ್ಯವಾದ ಹಲವಾರು ವಿವರಗಳು ಇದರಿಂದ ಸ್ಪಷ್ಟವಾದವು.

ಬಿನೇ ಹಾಕಿದ ದಾರಿಯನ್ನು ಹಿಡಿದು ಸ್ಟಾನ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಲ್ಯೂಯಿ ಟೆರ್ಮನ್ ಎಂಬ ಮನಃಶಾಸ್ತ್ರಜ್ಞ ಬುದ್ಧಿಶಕ್ತಿ - ಮಾಪಕಶ್ರೇಣಿಯನ್ನು ಮಾರ್ಪಡಿಸಿ ೧೯೧೬ ರಲ್ಲಿ ಉಪಯೋಗಿಸಿದನು. ಇದಕ್ಕೆ ಸ್ಟಾನ್‌ಫರ್ಡ್-ಬಿನೇ ಪರೀಕ್ಷೆಗಳೆಂದು ಹೆಸರು. ಇನ್ನೂ ಕೆಲವು ವಿವರಗಳನ್ನು ಸೇರಿಸಿ, ಇನ್ನಷ್ಟು ಮಾರ್ಪಾಡು ಮಾಡಿ ೧೯೩೭ ರಲ್ಲಿ ಟೆರ್ಮನ್ ತನ್ನ ಸಹೋದ್ಯೋಗಿನಿಯಾಗಿದ್ದ ಮಾಡ್ ಮೆರ್‍ರಿಲ್‌ನ ನೆರವನ್ನು ಪಡೆದು ಮತ್ತೊಂದು ಪರಿಷ್ಕೃತ ಶ್ರೇಣಿ ( revised scale ) ಯನ್ನು ಸಿದ್ಧಪಡಿಸಿದನು. ಈ ಶ್ರೇಣಿ ತುಂಬ ಪ್ರಚಾರದಲ್ಲಿದೆ ; ಹಲವಾರು ದೇಶಗಳಲ್ಲಿ ಇದನ್ನು ಬಳಸುತ್ತಿದ್ದಾರೆ. ಇವರಿಬ್ಬರೂ ಸೇರಿ ೧೯೬೦ ರಲ್ಲಿ ಮತ್ತೊಂದು ಪರಿಷ್ಕೃತ ಶ್ರೇಣಿಯನ್ನು ಪ್ರಕಟಿಸಿದರು. ಮೊದಲನೆಯ ಸ್ಟಾನ್‌ಫರ್ಡ್ ಪರಿಷ್ಕರಣಕ್ಕೆ ಎಲ್-ಫಾರ್ಮ್ ಎಂದೂ ಎರಡನೆಯದಕ್ಕೆ ಎಂ-ಫಾರ್ಮ್ ಎಂದೂ ಮೂರನೆಯದಕ್ಕೆ ಎಲ್-ಎಂ ಫಾರ್ಮ್ ಎಂದೂ ಹೆಸರುಗಳಿವೆ. ಮೂರನೆಯದರಲ್ಲಿ ಮೊದಲ ಎರಡರಲ್ಲಿದ್ದ ಅತ್ಯುಪಯುಕ್ತ ವಿವರಗಳು ಸೇರಿದುವು. ಎರಡೂವರೆ ವರ್ಷದ ವಯಸ್ಸಿನಿಂದ ಹಿಡಿದು ಹದಿನೆಂಟು ವರ್ಷ ವಯಸ್ಸಿನವರೆಗೆ ೪೪೯೮ ಮಕ್ಕಳನ್ನು ಪರೀಕ್ಷೆಗೆ ಒಳಪಡಿಸಿ ಹಾಗೆ ದೊರೆತ ಉತ್ತರಗಳನ್ನು ವಿಶ್ಲೇಷಣ ಮಾಡಿ ಮೂರನೆಯ ಪರಿಷ್ಕರಣವನ್ನು ಸಿದ್ಧಪಡಿಸಲಾಯಿತು. ಮಗುವಿನೊಂದಿಗೆ ವಿಶ್ವಾಸದ ಸಂಪರ್ಕವನ್ನು ಇರಿಸಿಕೊಂಡು, ಮಗುವಿಗೆ ಪದೇ ಪದೇ ಉತ್ತೇಜನದ ಮಾತನ್ನಾಡುತ್ತ ಅದು ಆತಂಕವಿಲ್ಲದೆ ಸಹಜವಾಗಿ ಪರೀಕ್ಷೆಯ ವಿವರಗಳಿಗೆ ಉತ್ತರಕೊಡುವಂತೆ ಮಾಡುವ ಸಂವಿಧಾನ ಈ ಪರಿಷ್ಕರಣದಲ್ಲಿ ಮೈದಳೆಯಿತು.

ಇದು ಮಕ್ಕಳ ಬುದ್ಧಿಶಕ್ತಿಯ ಮಾತಾಯಿತು. ವಯಸ್ಕರ ಬುದ್ಧಿಶಕ್ತಿಯನ್ನು ಅಳೆಯಲು ಬೆಲ್ಲೆವ್ಯು ಮನೋಚಿಕಿತ್ಸೆಯ ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದ ಡೇವಿಡ್ ವೆಕ್ಸ್ಲರ್ ಎಂಬುವನು ಬುದ್ಧಿಮಾಪಕ ಶ್ರೇಣಿಯೊಂದನ್ನು ಸಿದ್ಧಪಡಿಸಿದನು. ಇದು ವೆಕ್ಸ್ಲರ್-ಬೆಲ್ಲೆವ್ಯೂ ಶ್ರೇಣಿ (Wechsler-Bellevue scale) ಎಂದು ಪ್ರಸಿದ್ಧವಾಗಿದೆ. ಈತನೇ ೧೯೪೯ ರಲ್ಲಿ ಮಕ್ಕಳಿಗಾಗಿ ಮತ್ತೊಂದು ಶ್ರೇಣಿಯನ್ನು ನಿರ್ಮಿಸಿದನು; ಐದು ವರ್ಷದಿಂದ ಹದಿನೈದು ವರ್ಷಗಳವರೆಗೆ ಇರುವ ಮಕ್ಕಳನ್ನು ಪರೀಕ್ಷಿಸಲು ಇದು ಉಪಯುಕ್ತವಾಗಿದೆ. ವೆಕ್ಸ್ಲರ್ ಶ್ರೇಣಿಯಲ್ಲಿ ಶಾಬ್ದಿಕ (verbal) ವಿಭಾಗದಲ್ಲಿ ವಿಚಾರ ಸಂಗ್ರಹ, ತಾತ್ಪರ್ಯ ಗ್ರಹಣ, ಗಣಿತ, ಸ್ಮೃತಿ ಮತ್ತು ಶಬ್ದ ಸಂಪತ್ತು ಇವುಗಳನ್ನು ಪರೀಕ್ಷಿಸಿ, ಕೃತಿ (performance) ವಿಭಾಗದಲ್ಲಿ ಹಲವಾರು ಕರಕೌಶಲಗಳನ್ನು ಪರೀಕ್ಷಿಸುವ ವ್ಯವಸ್ಥೆಯಿದೆ.

೧೯೧೭-೧೮ ರಲ್ಲಿ ಸಾಮೂಹಿಕಪರೀಕ್ಷೆ (group tests) ಗಳ ಅಗತ್ಯವನ್ನು ಕಂಡುಕೊಂಡು ಹಲವು ವ್ಯಕ್ತಿಗಳನ್ನು ಏಕಕಾಲದಲ್ಲಿ ಪರೀಕ್ಷಿಸುವ ಸಂವಿಧಾನವನ್ನು ಸಿದ್ಧಪಡಿಸಿದರು. ಮೇಲೆ ಹೇಳಿದುದೆಲ್ಲ ವೈಯಕ್ತಿಕ (individual) ಪರೀಕ್ಷೆಗಳನ್ನು ಒಮ್ಮೆಗೆ ಒಬ್ಬನೇ ವ್ಯಕ್ತಿಯನ್ನು ಅಭ್ಯಾಸ ಮಾಡುವಂಥವು. ಇದಕ್ಕೆ ಕಾಲ, ಜನ ಎರಡರ ಸೌಕರ್ಯವೂ ಇರಬೇಕು. ಅಲ್ಪಕಾಲದಲ್ಲಿ ನೂರಾರು ವಿದ್ಯಾರ್ಥಿಗಳನ್ನು ಒಬ್ಬನೇ ವಿಜ್ಞಾನಿ ಪರೀಕ್ಷಿಸುವುದು ಸಾಮೂಹಿಕ ಪರೀಕ್ಷೆಯಲ್ಲಿ ಸಾಧ್ಯವಾಗುತ್ತದೆ. ೧೯೧೭-೧೮ ರಲ್ಲಿ ೧,೭೫೦,೦೦೦ ಜನರನ್ನೂ, ೧೯೪೧-೪೫ರಲ್ಲಿ ೧೦,೦೦೦,೦೦೦ ಜನರನ್ನೂ ಒಟ್ಟಿಗೆ ಪರೀಕ್ಷೆ ಮಾಡುವುದು ಸಾಧ್ಯವಾಯಿತು. ಸೈನ್ಯಕ್ಕೆ ಸೇರ ಬಯಸುವ ಮಂದಿಯ ಬುದ್ಧಿಶಕ್ತಿಯನ್ನು ಅಳೆದು ಅವರ ಸಾಧ್ಯಾಸಾಧ್ಯತೆಗಳನ್ನು ಮೊದಲೇ ಅರಿಯುವ ಸಲುವಾಗಿ ಸಿ. ಎಸ್. ಯೋಅಕುಂ ಮತ್ತು ಆರ್. ಎಂ. ಯರ್ಕಿಸ್ ಎಂಬುವರು ಸೈನ್ಯಮಾನಸಿಕ ಪರೀಕ್ಷೆ (army mental tests) ಗಳನ್ನು ಸಿದ್ಧಪಡಿಸಿದರು. ಸ್ಟಾನ್‌ಫರ್ಡ್-ಬಿನೇ ಪರೀಕ್ಷೆಯ ಪದ್ಧತಿಯನ್ನೇ ಅನುಸರಿಸಿ ಸಿದ್ಧವಾದ ಈ ಪರೀಕ್ಷೆಗಳು ತುಂಬ ಹೆಚ್ಚಿನ ಪ್ರಮಾಣದಲ್ಲಿರುವ ಮಂದಿಯನ್ನು, ಸಾಧ್ಯವಾದಷ್ಟು ಅಲ್ಪಕಾಲದಲ್ಲಿ ಪರೀಕ್ಷೆಯನ್ನು ಮಾಡಿ, ಫಲಿತಾಂಶವನ್ನು ಸಾಧ್ಯವಾದಷ್ಟೂ ಬೇಗ, ಸುಲಭ ರೀತಿಯಲ್ಲಿ ವಿಶ್ಲೇಷಣ ಮಾಡುವ ಸೌಕರ್ಯವನ್ನು ಹೊಂದಿದ್ದುವು. ಈ ಮಾನಸಿಕ ಪರೀಕ್ಷೆಗಳಲ್ಲಿ ಶಾಬ್ದಿಕವಾದುದನ್ನು 'ಆರ್ಮಿ ಆಲ್ಫಾ' ಪರೀಕ್ಷೆಯೆಂದೂ ಅಶಾಬ್ದಿಕವಾದುದನ್ನು 'ಆರ್ಮಿಬೀಟ' ಪರೀಕ್ಷೆಯೆಂದೂ ವ್ಯವಹರಿಸುತ್ತಾರೆ. ಈ ಪರೀಕ್ಷೆಗಳನ್ನು ಮಂದಿಗೆ ಕೊಡುವುದೂ ಸುಲಭ, ಉತ್ತರಗಳನ್ನು ಪಡೆಯುವುದೂ ಸುಲಭ. ವಿಶ್ಲೇಷಣವನ್ನು ಯಾಂತ್ರಿಕ ಸಾಧನದಿಂದ ನಡೆಸುವುದೂ ಸಾಧ್ಯ. ಇದೇ ಕ್ರಮವನ್ನು ಅನುಸರಿಸಿ ಸೈನ್ಯ ಸಾಮಾನ್ಯ ವರ್ಗೀಕರಣ ಪರೀಕ್ಷೆ (Army General Classification Test) ಮತ್ತು ಸಶಸ್ತ್ರಯೋಧರ ಅರ್ಹತಾ ಪರೀಕ್ಷೆ (Armed Forces Qualification Test) ಇವೂ ೧೯೫೨ ರಲ್ಲಿ ಸಿದ್ಧವಾದುವು.

ಐ. ಲೋರ್ಜ್ ಮತ್ತು ಆರ್. ಎಲ್. ಥಾರ್ನ್‌ಡೈಕ್ ಇವರು ೧೯೫೭ ರಲ್ಲಿ ಮತ್ತೊಂದು ಸಾಮೂಹಿಕ ಪರೀಕ್ಷೆಯನ್ನು ಸಿದ್ಧಪಡಿಸಿ ಶಿಶು ವಿಹಾರದಿಂದ ಪ್ರೌಢ ಶಾಲೆಯವರೆಗೆ ೧೩೬,೦೦೦ ಮಕ್ಕಳನ್ನು ಪರೀಕ್ಷಿಸಿದರು. ಶಿಕ್ಷಣ ಕ್ಷೇತ್ರದಲ್ಲಿ ಸಾಮೂಹಿಕ ಪರೀಕ್ಷೆಗಳು ತುಂಬ ಉಪಯುಕ್ತವಾಗುತ್ತವೆ. ವಿದ್ಯಾರ್ಥಿಗಳನ್ನು ಯಾವುದಾದರೂ ಒಂದು ವಿಭಾಗಕ್ಕೆ ಸೇರಿಸಲು ಮತ್ತು ಹಿಂದುಳಿದ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಲು ಈ ಪರೀಕ್ಷೆಗಳು ನೆರವಾಗುತ್ತವೆ. ಆದರೆ ಸಾಮೂಹಿಕ ಪರೀಕ್ಷೆಯಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯೂ ನೆಮ್ಮದಿಯಿಂದ, ತನ್ನ ಬುದ್ಧಿಶಕ್ತಿಯಿರುವಷ್ಟು ಉತ್ತರ ಕೊಡುತ್ತಾನೆಂದು ಹೇಳಬರುವುದಿಲ್ಲ. ಗುಂಪಿನಲ್ಲಿ ಪ್ರತಿಕ್ರಿಯೆ ಮಾಡುವಾಗ ವೈಯಕ್ತಿಕ ಉತ್ಸಾಹ, ಆಸಕ್ತಿ, ಧೋರಣೆ ಮಾರ್ಪಡುತ್ತವೆ.

೩

## ಬೌದ್ಧಿಕಲಬ್ಧಾಂಶ

ಬುದ್ಧಿಶಕ್ತಿಯ ಪರೀಕ್ಷಣದಲ್ಲಿ ಆಜನ್ಮ ವಯಸ್ಸಿಗೂ ( chronological age ) ಬೌದ್ಧಿಕ ವಯಸ್ಸಿಗೂ ( mental age ) ಸಂಬಂಧವಿರುವುದೂ, ಅವು ವಿಭಿನ್ನವಾಗಿರುವುದೂ ಸ್ಪಷ್ಟವಾಗುತ್ತವೆ. ಐದು ವರ್ಷದ ಮಗು ಬಿನೇ ಪರೀಕ್ಷೆಯಲ್ಲಿ ಐದು ವರ್ಷಕ್ಕೆ ತಕ್ಕ ವಿಭಾಗದವರೆಗೆ ವಿವರಗಳನ್ನು ಯಶಸ್ವಿಯಾಗಿ ನಿರ್ವಹಿಸಿದರೆ ಅದರ ಬೌದ್ಧಿಕ ವಯಸ್ಸೂ ಐದು ವರ್ಷಗಳೇ ; ಅದು ಸಮರ್ಪಕವಾದ ಬುದ್ಧಿಶಕ್ತಿಯ ನೆಲೆ. ಆದರೆ ಮೂರು ವರ್ಷ ವಯಸ್ಸಿನ ಮಗು ಐದು ವರ್ಷಕ್ಕೆ ತಕ್ಕ ವಿಭಾಗದವರೆಗೆ ನಿರ್ವಹಿಸಿದರೆ ಅದರ ಬೌದ್ಧಿಕ ವಯಸ್ಸು ಐದು ; ತುಂಬ ಬುದ್ಧಿಯುಳ್ಳ ಮಗು ಅದು. ಹತ್ತು ವರ್ಷ ವಯಸ್ಸಿನ ಮಗು ಐದು ವರ್ಷಕ್ಕೆ ತಕ್ಕ ವಿಭಾಗದವರೆಗೆ ಮಾತ್ರ ನಿರ್ವಹಿಸಬಲ್ಲುದಾದರೆ ಅದರ ಬೌದ್ಧಿಕ ವಯಸ್ಸು ಐದೇ ವರ್ಷಗಳು ; ಮಂದ ಬುದ್ಧಿಯ ಮಗು ಅದು. ಆಜನ್ಮ ವಯಸ್ಸಿಗೆ ಮೀರಿದ ಬೌದ್ಧಿಕ ವಯಸ್ಸನ್ನು ಮಗು ಪಡೆದಾಗ ಮಾತ್ರ ಅದು ಬುದ್ಧಿಶಾಲಿಯೆಂದು ನಿಶ್ಚಯವಾಗುತ್ತದೆ. ಮಗು ಹುಟ್ಟಿದಾಗಿನಿಂದ ಎಣಿಕೆಗೆ ಬರುವ ವಯಸ್ಸು ಆಜನ್ಮವಯಸ್ಸು ; ಇದನ್ನು ಇಂಗ್ಲೀಷಿನಲ್ಲಿ CA ಎಂದು ಸಂಗ್ರಹಿಸುತ್ತಾರೆ. ಪರೀಕ್ಷೆಯಲ್ಲಿ ಯಾವ ನೆಲೆಯನ್ನು ಅದು ಮುಟ್ಟುವುದೋ ಅದು ಬೌದ್ಧಿಕ ವಯಸ್ಸು ; ಇದನ್ನು ಇಂಗ್ಲೀಷಿನಲ್ಲಿ MA ಎಂದು ನಿರ್ದೇಶಿಸುತ್ತಾರೆ. ಮಗುವಿನ ಬುದ್ಧಿಶಕ್ತಿಯನ್ನು ನಿರ್ಧರಿಸಲು ಎರಡೂ ಅಗತ್ಯ. ಯಾವ ವಯಸ್ಸಿನ ಮಗು ಯಾವ ನೆಲೆಯಷ್ಟಾದರೂ ನಿರ್ವಹಿಸಬೇಕು ಎಂಬುದು ಪರೀಕ್ಷೆಯಲ್ಲಿ ಪೂರ್ವ ನಿರ್ದಿಷ್ಟವಾಗಿರುತ್ತದೆ. ಬೌದ್ಧಿಕ ವಯೋಮಾನದ ಕಲ್ಪನೆಯನ್ನು ಈ ಸಂದರ್ಭದಲ್ಲಿ ಮೊಟ್ಟಮೊದಲು ಸೂಚಿಸಿದವನು ಬಿನೇ.

ಬೌದ್ಧಿಕ ವಯೋಮಾನಕ್ಕಿಂತ ಮಗುವಿನ ಬುದ್ಧಿಶಕ್ತಿಯ ಪ್ರಮಾಣವನ್ನು ಇನ್ನಷ್ಟು ಸ್ಪಷ್ಟವಾಗಿ ನಿರ್ದೇಶಿಸತಕ್ಕ ಬೌದ್ಧಿಕಲಬ್ಧಾಂಶ (intelligence quotient, I.Q.) ದ ಕಲ್ಪನೆಯನ್ನು ಸ್ಟೆರ್ನ್ ಎಂಬ ಜರ್ಮನ್ ಮನೋವಿಜ್ಞಾನಿ ಸೂಚಿಸಿದನು. ಬೌದ್ಧಿಕ ವಯಸ್ಸನ್ನು ಆಜನ್ಮ ವಯಸ್ಸಿನಿಂದ ಭಾಗಿಸಿ ಬಂದದನ್ನು ನೂರರಿಂದ ಗುಣಿಸಿದರೆ ಬೌದ್ಧಿಕಲಭ್ಧಾಂಶ ದೊರೆಯುತ್ತದೆ. ಸಂಖ್ಯಾನದ ಪರಿಭಾಷೆಯಲ್ಲಿ ಹೇಳಬೇಕೆಂದರೆ $\frac{\text{ಬೌ. ವ.}}{\text{ಆ. ವ.}} \times \text{೧೦೦} = \text{ಬೌ. ಲ.}$ $\left(\frac{MA}{CA} \times 100 = I.Q.\right)$. ಮಗುವಿನ ಆಜನ್ಮ ವಯಸ್ಸೂ ಐದು ವರ್ಷವಾಗಿದ್ದು, ಅದರ ಬೌದ್ಧಿಕ ವಯಸ್ಸೂ ಐದು ವರ್ಷವೆಂದು ಪರೀಕ್ಷೆಯಿಂದ ಸ್ಪಷ್ಟಪಟ್ಟರೆ, ಅದರ ಬೌದ್ಧಿಕ ಲಬ್ಧಾಂಶ ೧೦೦. $\left(\frac{\text{೫}}{\text{೫}} \times \text{೧೦೦} = \text{೧೦೦}\right)$. ಆದರೆ ಅದರ ಆಜನ್ಮ ವಯಸ್ಸು ಹತ್ತು ವರ್ಷವಾಗಿದ್ದು ಬೌದ್ಧಿಕ ವಯಸ್ಸು ಐದೇ ಆಗಿದ್ದರೆ ಅದರ ಬೌದ್ಧಿಕ ಲಬ್ಧಾಂಶ ೫೦ $\left(\frac{\text{೫}}{\text{೧೦}} \times \text{೧೦೦} = \text{೫೦}\right)$; ಅದರ ಬೌದ್ಧಿಕ ವಯಸ್ಸು ಸಮರ್ಪಕವಾಗಿಲ್ಲದಿರುವುದರಿಂದ ಮಗುವಿನ ಬುದ್ಧಿಶಕ್ತಿ ಸಾಮಾನ್ಯ ನೆಲೆಗಿಂತ ತೀರ ಕಮ್ಮಿ; ೧೦೦ ಸಾಮಾನ್ಯ ನೆಲೆಯಾದರೆ ಇದು ೫೦ ಅಂಶಗಳಷ್ಟು ಹಿಂದುಳಿದ ಮಗು. ಹಾಗೆಯೇ ಆಜನ್ಮ ವಯಸ್ಸಿಗಿಂತ ಬೌದ್ಧಿಕವಯಸ್ಸು ಹೆಚ್ಚಿದ್ದಷ್ಟು ಅದರ ಬೌದ್ಧಿಕಲಬ್ಧಾಂಶವೂ ಹೆಚ್ಚುತ್ತದೆ. ವಯಸ್ಸಿಗೆ ತಕ್ಕಂತೆ ಬುದ್ಧಿಯೂ ಬೆಳೆಯುತ್ತದೆ ಎನ್ನುವುದು ಮೂಲಭೂತ ನಿಯಮ; ವಯಸ್ಸು ಬೆಳೆದು ಬುದ್ಧಿ ಬೆಳೆಯದಿದ್ದರೆ ಅಲ್ಪ ಬೌದ್ಧಿಕ ಲಬ್ಧಾಂಶ ಒದಗುತ್ತದೆ. ಕೆಲವು ಅಸಾಧಾರಣ ಮಕ್ಕಳಿಗೆ ವಯಸ್ಸಿಗಿಂತ ಬುದ್ಧಿಯೇ ಬೇಗ ಬೆಳೆಯುತ್ತದೆ; ಇವರು ಪ್ರತಿಭಾಶಾಲಿಗಳು, ಇವರ ಬೌದ್ಧಿಕಲಬ್ಧಾಂಶ ೧೩೦, ೧೪೦, ೧೫೦, ೨೦೦ ಹೀಗೆ ಇರುತ್ತದೆ.

ಬದುಕಿರುವವರೆಗೂ ವಯಸ್ಸು ಹೆಚ್ಚಿದಂತೆ ಬುದ್ಧಿಶಕ್ತಿಯೂ ಹೆಚ್ಚುತ್ತದೆ ಎನ್ನುವುದು ಸಲ್ಲದು. ದೈಹಿಕ ಪ್ರೌಢಿಮೆ ಒದಗುವವರೆಗೂ ಬೌದ್ಧಿಕಶಕ್ತಿ ಬೆಳೆಯುತ್ತದೆ; ಅಲ್ಲಿಂದ ಮುಂದೆ ಸ್ವಲ್ಪಕಾಲ ಬೆಳೆಯುವುದೂ ಕೆಲವರಲ್ಲಿ ಸಾಧ್ಯ. ಆದರೆ ಒಂದು ನೆಲೆಯನ್ನು ಮುಟ್ಟಿ ಅಲ್ಲಿಂದ ಮುಂದೆ ಎಷ್ಟೇ ವಯಸ್ಸಾದರೂ ಅದು ಅದೇ ನೆಲೆಯಲ್ಲಿಯೇ ಇದ್ದುಬಿಡುತ್ತದೆ. ಈ ನೆಲೆಯನ್ನು ವ್ಯಕ್ತಿ ಯಾವ ವಯಸ್ಸಿನಲ್ಲಿ ಮುಟ್ಟುತ್ತಾನೆ ಎಂದು ಹೇಳುವುದು ಕಷ್ಟ; ವೈಯಕ್ತಿಕ ವೈವಿಧ್ಯದ ಮಾತು ಇದು. ಆದರೆ ಬುದ್ಧಿಶಕ್ತಿ ಕಮ್ಮಿಯಿದ್ದವರಿಗೆ ಈ ನೆಲೆ ಬೇಗನೇ ಮುಟ್ಟುತ್ತದೆ, ಬುದ್ಧಿಶಕ್ತಿ ಹೆಚ್ಚಾಗಿದ್ದರೆ ಅದು ಬೆಳೆಯದೆ ನಿಲ್ಲುವ ನೆಲೆಯೂ ನಿಧಾನವಾಗಿ ಬರುತ್ತದೆ. ಎಂದರೆ ಮಂದ ಬುದ್ಧಿಯವರು ಸಣ್ಣ ವಯಸ್ಸಿನಲ್ಲೇ ಬೆಳೆಯದೆ, ನಿಂತಲ್ಲೇ ನಿಂತು ಬಿಡುತ್ತಾರೆ; ಸಣ್ಣ ವಯಸ್ಸಿಗೇ ಅವರು ಕಲಿಯುವ ಸಾಮರ್ಥ್ಯ ಮುಂದೆ ಹೋಗದೆ

ಸಂಪು ಹೊಡುತ್ತದೆ. ಆಗ ಬೆಳೆದಷ್ಟೇ ಬುದ್ಧಿ ಅವರು ಬದುಕಿರುವವರೆಗೂ ಉಳಿಯುತ್ತದೆ. ಅನುಭವದಿಂದಲಾಗಲೀ ಕಲಿಕೆಯಿಂದಲಾಗಲೀ ಅವರು ಪ್ರಯೋಜನ ವನ್ನು ಪಡೆಯಲಾರರು. ಪ್ರತಿಭಾಶಾಲಿಗಳಾದರೋ ತುಂಬ ಕಾಲದವರೆಗೆ, ಹೆಚ್ಚು ವಯಸ್ಸಾಗುವವರೆಗೆ ಬುದ್ಧಿಶಕ್ತಿಯನ್ನು ಬೆಳೆಸಿಕೊಳ್ಳುತ್ತಾರೆ; ಕಲಿಕೆ, ಅನುಭವ ಎರಡೂ ಅವರ ನೆರವಿಗೆ ಬಹುಮಟ್ಟಿಗೆ ಬರುತ್ತದೆ. ಸಾಮಾನ್ಯವಾಗಿ ಹೇಳುವುದಾದರೆ ಸುಮಾರು ೨೦ ವರ್ಷ ವಯಸ್ಸಿಗೆ ಬುದ್ಧಿಶಕ್ತಿಯು ಬೆಳವಣಿಗೆ ನಿಲ್ಲುತ್ತದೆ, ಅಲ್ಲಿಂದ ಮುಂದೆ ಇದು ಅಷ್ಟೇ ಪ್ರಮಾಣದಲ್ಲಿರುತ್ತದೆ ಎನ್ನಬಹುದು.

ಆದರೆ ಇಷ್ಟು ಕಾಲವೂ ಬೆಳವಣಿಗೆ ಒಂದೇ ಗತಿಯಲ್ಲಿರುವುದಿಲ್ಲ. ಎಳೆಯ ವಯಸ್ಸಿನಲ್ಲಿ ಬುದ್ಧಿಶಕ್ತಿಯ ಬೆಳವಣಿಗೆ ವೇಗವಾಗಿ ನಡೆಯುತ್ತದೆ; ಬರುಬರುತ್ತಾ ಈ ವೇಗ ಕಮ್ಮಿಯಾಗಿ ಪರಾವಧಿಯನ್ನು ಮುಟ್ಟುವಾಗ ತೀರ ನಿಧಾನವಾಗಿಬಿಡುತ್ತದೆ. ಮೂರನೇ ವರ್ಷದಿಂದ ಆರಂಭಿಸಿ ಹದಿಮೂರು-ಹದಿನಾಲ್ಕು ವರ್ಷಗಳವರೆಗೆ ಬುದ್ಧಿ ಬೆಳೆಯುವುದು ಹೆಚ್ಚು; ಅದರ ಬೆಳವಣಿಗೆಯನ್ನು ರೇಖೆಯಲ್ಲಿ ಚಿತ್ರಿಸಿದರೆ, ನೇರವಾಗಿ ಮೇಲೆದ್ದು ನಿಲ್ಲುವ ರೇಖೆ ಇದು. ಹದಿನಾರನೆಯ ವರ್ಷ ಮುಟ್ಟುವಾಗ ರೇಖೆ ಮೇಲೆ ಹೋಗದೆ ಅಡ್ಡವಾಗಿ ಬಾಗುತ್ತದೆ; ಎಂದರೆ ಬೆಳವಣಿಗೆಯ ವೇಗ ಇಳಿಯಿತು ಎಂದರ್ಥ. ಇಪ್ಪತ್ತು ವರ್ಷವಾದ ಮೇಲೆ ಈ ರೇಖೆ ಮೇಲೆ ಹೋಗುವುದನ್ನು ನಿಲ್ಲಿಸಿ ಸಮನಾಗಿ ಮಲಗಿಬಿಡುತ್ತದೆ; ಇದು ರೇಖೆಯು ಪ್ರಸ್ಥಭೂಮಿಯಿದ್ದಂತೆ (ಚಿತ್ರ-೧೩).

ಬುದ್ಧಿಶಕ್ತಿ ಬೆಳೆಯುವುದು ನಿಂತಿತೆಂದರೆ ಮನುಷ್ಯನ ಮಾನಸವಿಕಾಸ ಕುಂಠಿತ ವಾಗಿಬಿಟ್ಟಿತೆಂದು ಅರ್ಥವಲ್ಲ. ಸಹಜವಾದ ಸಾಮರ್ಥ್ಯ ಒಂದು ನೆಲೆಗಿಂತ ಮೇಲೆ ಹೋಗುವುದಿಲ್ಲ. ಮಕ್ಕಳು ಬೆಳೆಯುವಾಗಲೂ ಒಂದು ವಯಸ್ಸಿಗೆ ಅವರು ಬೆಳೆಯುವುದನ್ನು ನಿಲ್ಲಿಸುತ್ತಾರೆ; ಅವರು ಆಗ ಇದ್ದಷ್ಟೇ ಎತ್ತರ ಬದುಕಿರುವವರೆಗೂ ಇರುತ್ತಾರೆ. ಹಾಗೆಯೇ ಬುದ್ಧಿಶಕ್ತಿಯೂ. ಆದರೆ ಅನುಭವದಿಂದ, ವಿಚಾರ ಸಂಗ್ರಹದಿಂದ ಅವರ ಮಾನಸಿಕ ಸಂಪತ್ತು ವೃದ್ಧಾಪ್ಯದವರೆಗೂ ಬೆಳೆಯುತ್ತದೆ. ವೃದ್ಧಾಪ್ಯದಲ್ಲಿ ಸಹಜವಾದ ದೈಹಿಕ ವಿಕಾರಗಳು, ದುರ್ಬಲತೆ, ಇಂದ್ರಿಯ ಶೈಥಿಲ್ಯ ಇವು ಒದಗಿ ಮಾನಸಿಕ ಸಾಮರ್ಥ್ಯವೂ ಕುಗ್ಗುತ್ತದೆ; ಅವರು ಕಲಿಯುವುದು ಕಷ್ಟ, ಅವರಿಗೆ ಅವಧಾನ ಸಾಧ್ಯವಿಲ್ಲ. ಮಧ್ಯ ವಯಸ್ಸಿನಲ್ಲಿ ಮಾನಸವಿಕಾಸ ಬಿರುಸಾಗಿಯೇ ನಡೆಯುತ್ತದೆ. ಬುದ್ಧಿಶಕ್ತಿ ಆಂತರಿಕ ಸೌಲಭ್ಯವೆನ್ನುವ ದೃಷ್ಟಿಯಿಂದ ಈ ಸೌಲಭ್ಯ ನಿರಂತರವಾಗಿ ಬೆಳೆಯಲಾರದು, ಅದಕ್ಕೆ ಒಂದು ಮಿತಿಯುಂಟು.

೪

## ಬುದ್ಧಿಶಕ್ತಿಯ ನೆಲೆ

ವ್ಯಕ್ತಿಯ ಬುದ್ಧಿಶಕ್ತಿ ಯಾವುದನ್ನು ಅವಲಂಬಿಸಿದೆ ಎನ್ನುವುದನ್ನು ನಿರ್ಧರಿಸಲು ಮನಃಶಾಸ್ತ್ರ ಪ್ರಯೋಗಗಳನ್ನೂ ಅನ್ವೇಷಣೆಗಳನ್ನೂ ನಡೆಸಿದೆ. ಆನುವಂಶಿಕವಾಗಿ

ಬಂದ ಸೌಲಭ್ಯ, ಆವರಣದಿಂದ ಒದಗುವ ಸೌಕರ್ಯ ಇವುಗಳಲ್ಲಿ ಯಾವುದರ ಪ್ರಭಾವ ಹೆಚ್ಚು ಎನ್ನುವ ಸಮಸ್ಯೆಗೆ ಉತ್ತರಕೊಡಲು ಮನಃಶಾಸ್ತ್ರಜ್ಞರು ಯತ್ನಿಸಿದ್ದಾರೆ. ಬುದ್ಧಿಶಕ್ತಿಗೆ ಇಂದ್ರಿಯ ಸಾಮರ್ಥ್ಯ, ನರಮಂಡಲ ವ್ಯವಸ್ಥೆ, ಮಸ್ತಿಷ್ಕ, ದೈಹಿಕ ಆನುಕೂಲ್ಯ ಇವೆಲ್ಲ ಅಗತ್ಯವಾದ ಪರಿಕರಗಳು, ಪೂರ್ವ ಸಿದ್ಧತೆಗಳು. ಇವು ನಮಗೆ ಆನುವಂಶಿಕವಾಗಿ ಬರತಕ್ಕ ವಿವರಗಳು ; ಹುಟ್ಟುವಾಗಲೇ ಅವುಗಳ ಸ್ವರೂಪ, ಸ್ವಭಾವ, ಸಾಮರ್ಥ್ಯ, ಆತಂಕಗಳು ಸಿದ್ಧವಾಗುತ್ತವೆ. ಬದುಕಿರುವವರೆಗೂ ಇವುಗಳ ಮೂಲಕವೇ ನಾವು ಆವರಣದೊಂದಿಗೆ ವ್ಯವಹರಿಸಬೇಕು. ವ್ಯಕ್ತಿಗೆ ಬುದ್ಧಿಶಕ್ತಿ ಎಷ್ಟಿರುತ್ತದೆ ಎನ್ನಲು ಈ ವಿವರಗಳನ್ನು ಪರಿಶೀಲಿಸಬೇಕಾಗುತ್ತದೆ. ಮಸ್ತಿಷ್ಕದಲ್ಲಿ ತೊಂದರೆ ಯಿದ್ದರೆ, ಇಂದ್ರಿಯಗಳಲ್ಲಿ ಲೋಪದೋಷಗಳಿದ್ದರೆ ಇವುಗಳಿಂದಾಗಿ ಬುದ್ಧಿಶಕ್ತಿಯೂ ಕುಂಠಿತವಾಗುತ್ತದೆ. ದೈಹಿಕ ಸಾಮಗ್ರಿಗಳನ್ನವಲಂಬಿಸಿ ಬುದ್ಧಿ ವಿಕಾಸಗೊಳ್ಳುತ್ತದೆ.

ಆದರೆ ಸಮನಾದ ದೈಹಿಕ ಸಾಮಗ್ರಿಗಳಿದ್ದ ಇಬ್ಬರು ಒಂದೇ ಬಗೆಯ ಅಥವಾ ಒಂದೇ ನೆಲೆಯ ಬುದ್ಧಿಶಕ್ತಿಯನ್ನು ಪಡೆದಿರುತ್ತಾರೆ ಎನ್ನಲಾಗುವುದಿಲ್ಲ. ಆನುವಂಶಿಕ ಗುಣಗಳೂ ಸಮನಾಗಿರುವ ಅವಳಿಜವಳಿ ಮಕ್ಕಳಲ್ಲಿ ಕೂಡ ಸಮಾನವಾದ ಬುದ್ಧಿಶಕ್ತಿ ಯಿರುವುದಿಲ್ಲ. ಈ ವೈವಿಧ್ಯವನ್ನು ಪರಿಗಣಿಸಿದರೆ, ಆನುವಂಶಿಕವಾಗಿಯೇ ಬುದ್ಧಿ ಶಕ್ತಿಯ ಪ್ರಮಾಣ ನಿರ್ದಿಷ್ಟವಾಗುತ್ತದೆ ಎನ್ನುವುದು ತಪ್ಪು. ಮಗು ಬೆಳೆಯುವಾಗ ಅದಕ್ಕೆ ಯಾವ ಆವರಣ, ಎಂಥ ಪ್ರಚೋದನೆ ದೊರೆಯುತ್ತದೆ ಎನ್ನುವುದು ಪ್ರಮುಖವಾದ ವಿವರ ; ಇದರಿಂದ ಬುದ್ಧಿಶಕ್ತಿ ಬೆಳೆಯುವ ಸೌಲಭ್ಯ ಸ್ಪಷ್ಟವಾಗುತ್ತದೆ. ಕೆಲವರಲ್ಲೇನೋ ಆನುವಂಶಿಕ ಗುಣವೂ ಆವರಣವೂ ಸಮಾನವಾಗಿಯೇ ಮುಖ್ಯ ವಾಗಿರುತ್ತದೆ. ಆನುವಂಶಿಕ ಗುಣದಲ್ಲಿ ಅಥವಾ ಆವರಣದಲ್ಲಿ ಇರುವ ವೈವಿಧ್ಯದಿಂದಲೇ ವೈಯಕ್ತಿಕ ಬುದ್ಧಿಶಕ್ತಿಯು ವೈವಿಧ್ಯ ಒದಗುತ್ತದೆ ; ಎರಡರಲ್ಲೂ ವೈವಿಧ್ಯವಿದ್ದರಂತೂ ವೈಯಕ್ತಿಕ ಭೇದ ಸಿದ್ಧವೇ.

ಆನುವಂಶಿಕಗುಣದಿಂದ ಬುದ್ಧಿಶಕ್ತಿಗೆ ಸ್ಥೂಲವಾದ ಮಾರ್ಗದರ್ಶನ ದೊರೆತು, ಆವರಣದಿಂದಲೇ ಅದರ ವಿಕಾಸದ ರೀತಿರಂಗುಗಳು ನಿರ್ದಿಷ್ಟವಾಗುತ್ತದೆ. ಶಾಲೆಯಲ್ಲಿ ಎಲ್ಲ ಮಕ್ಕಳಿಗೂ ಒಂದೇ ಬಗೆಯ ಶಿಕ್ಷಣ ದೊರೆತರೂ ಕೆಲವು ಮಕ್ಕಳು ಕಲಿತು ಬುದ್ಧಿವಂತರಾಗುತ್ತಾರೆ, ಮತ್ತೆ ಕೆಲವರು ಕಲಿಯಲಾರದೆ ಹಿಂದುಳಿಯುತ್ತಾರೆ. ಆವರಣದ ಪ್ರಚೋದನೆ ಎರಡು ಗುಂಪಿನ ಮಕ್ಕಳಿಗೂ ಸಮವೇ ; ಆದರೆ ಸ್ವಭಾವ ಸಿದ್ಧವಾದ ಬುದ್ಧಿಶಕ್ತಿಯ ಪ್ರಮಾಣ ಸಾಕಷ್ಟಿದ್ದರೆ ಕಲಿಯುವುದು ಸುಲಭವಾಗುತ್ತದೆ, ಕಲಿತದ್ದು ನಿಲ್ಲುತ್ತದೆ, ಇದು ಪೂರ್ವಸಿದ್ಧತೆಯಂತೆ ಅಗತ್ಯ. ಆದರೆ ಒಂದೇ ಬುದ್ಧಿಶಕ್ತಿ ಪ್ರಮಾಣವುಳ್ಳ ಮಕ್ಕಳಲ್ಲಿ ಕೆಲವರು ಹಳ್ಳಿಕೊಂಪೆಯ ಸಂಕುಚಿತ ಆವರಣದಲ್ಲಿಯೂ, ಮತ್ತೆ ಕೆಲವರು ನಗರದ ಸುಸಂಸ್ಕೃತ ವಾತಾವರಣದಲ್ಲಿಯೂ ಬೆಳೆದರೆ ಎರಡನೆಯವರ್ಗದ ಮಕ್ಕಳು ಬುದ್ಧಿಶಾಲಿಗಳಾಗಿ, ಪ್ರತಿಭಾವಂತರಾಗಿ, ಕಾರ್ಯದಕ್ಷರಾಗಿ, ಜೀವನದಲ್ಲಿ ಯಶಸ್ವಿಗಳಾಗಬಲ್ಲರು, ಮೊದಲನೆಯ ವರ್ಗದವರು ಕಲಿತದ್ದು ಸ್ವಲ್ಪವಾಗಿ, ಆವರಣ

ಸಂಕುಚಿತವಾಗಿ ಅವರ ದೃಷ್ಟಿಯೂ ಕುಗ್ಗುತ್ತದೆ, ಅವರ ವ್ಯವಹಾರ ಸಾಮರ್ಥ್ಯವೂ ಕುಂಟುತ್ತದೆ. ಬಾಳುವೆಯಲ್ಲಿ ಬುದ್ಧಿಶಕ್ತಿಯಿಂದಲೇ ಜಯ, ಪರಾಜಯ ಎನ್ನುವುದಾದರೆ ಪ್ರಾಥಮಿಕ ಆವರಣದ ಪ್ರಭಾವ ತುಂಬ ಮುಖ್ಯವಾದುದು. ಅಂತರ್ನಿಹಿತ ಶಕ್ತಿಗೆ ತಕ್ಕ ವಿಕಾಸವನ್ನು ಒದಗಿಸುವುದು ಆವರಣದ ಹೊಣೆ. ಮನೆ, ತಂದೆತಾಯಿಯರ ಆರ್ಥಿಕ ಮತ್ತು ಸಾಂಸ್ಕೃತಿಕನೆಲೆ, ಶಾಲೆ, ಗೆಳೆಯರ ಬಳಗ, ಮನೆಗೆ ಹೋಗಿಬರುವವರು, ಪ್ರಾಪಂಚಿಕ ಸುಖಸಾಧನಗಳು, ಆಟಪಾಟದ ಸೌಕರ್ಯ, ಆರೋಗ್ಯ ಮೊದಲಾದ ವಿವರಗಳು ಬುದ್ಧಿಶಕ್ತಿಯ ವಿಕಾಸಕ್ಕೆ ನೆರವಾಗುವುವು. ಇವೆಲ್ಲವೂ ಕಲೆತರೇ ಅದನ್ನು ಆವರಣ ಎಂದು ನಾವು ನಿರ್ದೇಶಿಸುವುದು.

ಃ

## ಘಟಕಗಳು

ಬುದ್ಧಿಶಕ್ತಿ ಎಂದರೇನು ಎನ್ನುವ ಸಮಸ್ಯೆ ಮನಃಶಾಸ್ತ್ರಜ್ಞರನ್ನು ಇನ್ನೂ ಕಾಡುತ್ತಿದೆ. ಕೆಲವರು ಬುದ್ಧಿಮಾಪಕ ಪರೀಕ್ಷೆಗಳು ಏನನ್ನು ಅಳೆಯುತ್ತವೆಯೋ ಪರೀಕ್ಷಿಸುತ್ತವೆಯೋ ಅದೇ ಬುದ್ಧಿಶಕ್ತಿ ಎಂದು ಸಮಾಧಾನ ಹೇಳುತ್ತಾರೆ. ಒಂದು ದೃಷ್ಟಿಯಿಂದ ಇದು ನಿಜವೇ. ಬುದ್ಧಿಮಾಪಕಯಂತ್ರಗಳಿಂದ ಬುದ್ಧಿಶಕ್ತಿ ಯಾವ ನೆಲೆಯಲ್ಲಿ ಕೆಲಸಮಾಡುತ್ತಿದೆ, ಅದರ ಸ್ವಭಾವ ಎಂಥದು ಎನ್ನುವುದು ಸ್ಪಷ್ಟವಾಗುತ್ತದೆ. ಅದು ಪರಿಶೀಲಿಸುವ ವಿಷಯ ಬುದ್ಧಿಶಕ್ತಿಗೆ ನೇರವಾಗಿ ಸಂಬಂಧಿಸಿದ್ದೇ; ಅದರಲ್ಲಿ ಸಂಶಯವಿಲ್ಲ. ಆದರೆ ಪರೀಕ್ಷೆಗಳು ಅಳೆಯುವುದು ಬುದ್ಧಿಶಕ್ತಿಯನ್ನೇ ಅಲ್ಲ, ಬುದ್ಧಿಶಕ್ತಿಯ ನೆರವಿನಿಂದ ವ್ಯಕ್ತಿ ಯಾವರೀತಿ ಉತ್ತರಿಸುತ್ತಾನೆ ಎನ್ನುವುದನ್ನು. ಹತ್ತಾರು ವಿದ್ಯಾರ್ಥಿಗಳಿದ್ದಾಗ ಅವರಲ್ಲಿ ಪರಸ್ಪರವಾದ ವೈವಿಧ್ಯ ಹೇಗೆ ಎನ್ನುವುದೂ ಪರೀಕ್ಷೆಯಿಂದಲೇ ವ್ಯಕ್ತವಾಗುತ್ತದೆ. ನಾವು ನಮ್ಮ ಶಕ್ತಿಯನ್ನು, ಎತ್ತರ - ತೂಕಗಳನ್ನು ಅಳತೆಮಾಡುವಂತೆ ನೇರವಾಗಿ ಬುದ್ಧಿಶಕ್ತಿಯನ್ನು ಅಳೆಯುವುದು ಸಾಧ್ಯವಿಲ್ಲ. ಒಬ್ಬ ಇನ್ನೊಬ್ಬನಿಗಿಂತ ಹೆಚ್ಚು ಬುದ್ಧಿಶಾಲಿ, ಅಥವಾ ಅಷ್ಟು ಬುದ್ಧಿಶಾಲಿಯಲ್ಲ ಎಂದು ಹೇಳುವುದಷ್ಟೇ ಸಾಧ್ಯ.

ಆದರೆ ಬುದ್ಧಿಶಕ್ತಿಗೆ ಮೂಲಭೂತವಾದ ಕೆಲವು ಘಟಕಗಳಿರುವುದು ಪರೀಕ್ಷೆಗಳಿಂದ ಸ್ಪಷ್ಟವಾಗಿದೆ. ಕೆಲವು ಘಟಕಗಳು ಸ್ವಭಾವಸಿದ್ಧವಾದುವು, ಅನುವಂಶಿಕವಾದುವು. ಮತ್ತೆ ಕೆಲವು ಕಲಿಕೆಯಿಂದ, ಅಭ್ಯಾಸದಿಂದ ಬಂದುವು; ಕೆಲವು ಮನೋವೃತ್ತಿಗೆ ಸಂಬಂಧಪಟ್ಟುವು, ಕೆಲವು ಸ್ವಭಾವಕ್ಕೆ ಸಂಬಂಧಿಸಿದುವು. ಈ ಘಟಕಗಳೆಲ್ಲ ಪ್ರತಿ ಪ್ರತಿಕ್ರಿಯೆಯಲ್ಲಿಯೂ ಜಾಲದಂತೆ ಸೇರಿರುತ್ತವೆ. ಇವುಗಳಲ್ಲಿ ಮೂಲಭೂತವಾದ ಘಟಕಗಳು (primary factors) ಯಾವುವು ಎಂದು ನಿರ್ಧರಿಸುವ ಪ್ರಯತ್ನವನ್ನು ಮನಃಶಾಸ್ತ್ರಜ್ಞರು ಮಾಡಿದ್ದಾರೆ. ಚಾರ್ಲ್ಸ್ ಸ್ಪಿಯರ್‌ಮನ್ ಎಂಬ ಮನಃಶಾಸ್ತ್ರಜ್ಞನು ಹಲವಾರು ಪರೀಕ್ಷೆಗಳನ್ನು ಬಳಸಿದಾಗ, ಅಥವಾ

ಒಂದೇ ಪರೀಕ್ಷೆಯ ವಿವಿಧ ಅಂಗಗಳನ್ನು ಬಳಸಿದಾಗ ಅವೆಲ್ಲವೂ ಪರಸ್ಪರ ಸಮನ್ವಿತ ವಾಗುವಂತೆ, ಸಾಹಚರ್ಯನಿಯಮವನ್ನು ( correlation ) ಅನುಸರಿಸುವಂತೆ ಕಂಡು ಬಂದುದನ್ನು ಗಮನಿಸಿದನು. ಈ ಎಲ್ಲವಿವರಗಳೂ, ಪರೀಕ್ಷೆಗಳೂ ಒಂದೇ ವಿಷಯವನ್ನು ಪರೀಕ್ಷಿಸುತ್ತಿವೆಯೆಂದು ಇದರಿಂದ ಅವನಿಗೆ ಸ್ಪಷ್ಟವಾಯಿತು. ಎಲ್ಲ ಪರೀಕ್ಷೆಗಳ ಯಶಸ್ಸಿಗೂ ಆಧಾರಭೂತವಾದ ಬುದ್ಧಿಶಕ್ತಿಯ ಘಟಕವನ್ನು 'ಸಾಮಾನ್ಯ ಬುದ್ಧಿಶಕ್ತಿ' ( general intelligence ) ಎಂದು ಸ್ಪಿಯರ್‌ಮನ್ ನಿರ್ದೇಶಿಸಿದನು. ಹಲವಾರು ವಿಶಿಷ್ಟ ಶಕ್ತಿಗಳೂ ಕೌಶಲಗಳೂ ( ಯಾಂತ್ರಿಕಕೌಶಲ, ಗಾಯನಕೌಶಲ, ಚಿತ್ರಕಲೆಯ ಸಾಮರ್ಥ್ಯ, ಪಾಠಹೇಳುವ ಚಾತುರ್ಯ, ಗಣಿತಶಕ್ತಿ, ಭಾಷಾಸಾಮರ್ಥ್ಯ ಮುಂತಾದುವು) ಈ ಸಾಮಾನ್ಯಘಟಕದಲ್ಲಿ ಮುಳುಗಿ, ಅದರಿಂದ ಸ್ಫೂರ್ತಿಯನ್ನೂ ಸ್ಥೈರ್ಯವನ್ನೂ ಪಡೆಯುವ ವಿಶಿಷ್ಟ ಘಟಕಗಳು ( special factors ) ಅಥವಾ ನಿರ್ದಿಷ್ಟ ಸಾಮರ್ಥ್ಯ ಗಳು (specific abilities). ಬೋಧನೆಯಲ್ಲಿ ಯಶಸ್ವಿಯಾದ ಉಪಾಧ್ಯಾಯನಿಗೆ ಸಾಮಾನ್ಯ ಬುದ್ಧಿಶಕ್ತಿ ( G ) ಯೂ ಅದರ ಜೊತೆಗೆ ಬೋಧನಾಶಕ್ತಿಯೆಂಬ ವಿಶಿಷ್ಟಘಟಕ ( S ) ವೂ ಇರಬೇಕು; ಯಾಂತ್ರಿಕಕ್ರಿಯೆಯಲ್ಲಿ ಕುಶಲನಾದ ಕಾರ್ಮಿಕನಿಗೂ ಸಾಮಾನ್ಯಶಕ್ತಿ (G) ಯಿದ್ದು ಅದರ ಮೇಲೆ ಯಾಂತ್ರಿಕಕೌಶಲವೆಂಬ ನಿರ್ದಿಷ್ಟಶಕ್ತಿ ( S ) ಇರಬೇಕು. ಸಾಮಾನ್ಯಶಕ್ತಿಯೂ ಹೆಚ್ಚು ಪ್ರಮಾಣದಲ್ಲಿದ್ದರೆ ಪ್ರತಿಭಾಶಾಲಿ ಯೆಂದು ವ್ಯಕ್ತಿ ಪರಿಗಣಿತನಾಗುತ್ತಾನೆ.

ಸ್ಪಿಯರ್‌ಮನ್ ಹೇಳುವ ಸಾಮಾನ್ಯಶಕ್ತಿ ಒಂದು ತತ್ವವೇ ಅಥವಾ ಹಲವಾರು ವಿಶಿಷ್ಟಶಕ್ತಿಗಳ ಸಮಷ್ಟಿಯೇ ಎನ್ನುವುದು ವಿವಾದಾಸ್ಪದವಾದ ವಿಚಾರ. ಸ್ಪಿಯರ್ ಮನ್ನನೇನೋ ಅದು ಅವಿಭಾಜ್ಯ, ಏಕಘಟಕ ಎಂದು ನಿರ್ದೇಶಿಸಿದ್ದಾನೆ. ಆದರೆ ಪ್ರಯೋಗಗಳಿಂದ ಇದು ಹೀಗೆ ಘನವಾದ ಶಕ್ತಿಯೆನ್ನುವುದು ಸ್ಪಷ್ಟವಾಗುವುದಿಲ್ಲ. ಈ ಸಾಮಾನ್ಯಶಕ್ತಿಯನ್ನು ಪರೀಕ್ಷೆಗಳ ಫಲಿತಾಂಶದ ಆಧಾರದಮೇಲೆ ವಿಶ್ಲೇಷಣಮಾಡಿದರೆ ಹಲವಾರು ಉಪಶಕ್ತಿಗಳ ವ್ಯವಸ್ಥೆಯನ್ನು ಅಲ್ಲಿ ಕಾಣಬಹುದು. ಇದು ಎಲ್. ಎಲ್. ಥರ್ಸ್ಟನ್ ಎನ್ನುವ ಮನಃಶಾಸ್ತ್ರಜ್ಞನ ವಾದ. ಬುದ್ಧಿಶಕ್ತಿಯ ಘಟಕಗಳನ್ನು ಕುರಿತು ವಿಶೇಷವಾದ ಅಧ್ಯಯನ ನಡೆಸಿದ ಈತನು ಸಂಖ್ಯಾನಶಾಸ್ತ್ರದ ನೆರವನ್ನು ಪಡೆದು ಬುದ್ಧಿಮಾಪಕಪರೀಕ್ಷೆಗಳನ್ನು ದೊಡ್ಡದೊಡ್ಡ ವಿದ್ಯಾರ್ಥಿವರ್ಗಗಳ ಮೇಲೆ ನಡೆಸಿ, ಅದರ ಫಲವಾಗಿ ಏಳು ಮೂಲಭೂತ ಘಟಕ ( primary abilities ) ಗಳು ಇರುವುದೆಂದು ನಿರ್ಧರಿಸಿದನು. ಅರವತ್ತು ಶಾಬ್ದಿಕ ಮತ್ತು ಅಶಾಬ್ದಿಕ ಪರೀಕ್ಷೆಗಳನ್ನು ನಡೆಸಿದಾಗ ಈ ಏಳು ಮೂಲಭೂತ ಬೌದ್ಧಿಕಶಕ್ತಿಗಳು ಸ್ಪಷ್ಟವಾದುವು. ಸಂಖ್ಯಾ ಸಾಮರ್ಥ್ಯ ( N ) ಶಬ್ದಪ್ರಯೋಗಸೌಲಭ್ಯ ( W ), ಶಬ್ದಾರ್ಥಕೌಶಲ ( V ), ಸ್ಮೃತಿ ( M ), ಯುಕ್ತಿ ( R ), ದೇಶಸಂಬಂಧಸಾಮರ್ಥ್ಯ ( S ), ಮತ್ತು ಪ್ರತ್ಯಕ್ಷದ ವೇಗ

(P), ಇವು ಈ ಏಳು ಘಟಕಗಳು. ಪರೀಕ್ಷೆಗಳಲ್ಲಿ ಅಷ್ಟಾದಿಡ್ಡಿಯಾಗಿ ಸ್ಥೂಲವಾದ, ಅಜ್ಞಾತವಾದ ಬುದ್ಧಿಶಕ್ತಿಯನ್ನು ಅಳೆಯಲು ಯತ್ನಿಸುವುದಕ್ಕಿಂತ ನಿರ್ದಿಷ್ಟವಾದ ಈ ಏಳು ಘಟಕಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನ ಮಾಡಿದರೆ ಹೆಚ್ಚು ಸಾರ್ಥಕವಾದೀತೆಂದು ಥರ್ಸ್‌ಟನ್ ವಾದ.

## ಪರಿಚ್ಛೇದ ಹನ್ನೆರಡು

# ವ್ಯಕ್ತಿತ್ವ, ಅದರ ವಿಕಾಸ

೧

### ವ್ಯಕ್ತಿತ್ವ ಎಂದರೇನು

ಇಲ್ಲಿಯವರೆಗೆ ಮನುಷ್ಯನ ಬೇರೆ ಬೇರೆ ಪ್ರವೃತ್ತಿಗಳನ್ನೂ, ಸಾಮರ್ಥ್ಯಗಳನ್ನೂ ಕುರಿತು ಚರ್ಚಿಸಿದೆವು. ಮನುಷ್ಯನನ್ನು ದೇಹ, ಮನಸ್ಸು, ಆಲೋಚನೆ, ಅನುಭವ, ಭಾವ, ಸ್ಮೃತಿ ಎಂದು ಮೊದಲಾಗಿ ಬೇರೆ ಬೇರೆಯಾಗಿ ವಿಭಜಿಸಿ ಖಂಡತುಂಡಾಗಿ ನೋಡುವ ಪದ್ಧತಿ ಅಷ್ಟಾಗಿ ಸಾಧುವಾದುದಲ್ಲ. ಇವೆಲ್ಲ ಒಂದೇ ಸಮಷ್ಟಿಯ ವಿಭಿನ್ನ ವಿವರಗಳು, ಒಂದೊಂದೂ ಸ್ವತಂತ್ರವಲ್ಲ. ಈ ಸಮಷ್ಟಿಯನ್ನೇ ವ್ಯಕ್ತಿತ್ವ ಎಂದು ನಿರ್ದೇಶಿಸುತ್ತಾರೆ. ಬುದ್ಧಿಶಕ್ತಿ, ಭಾವಪ್ರವೃತ್ತಿ, ಸ್ಮೃತಿ ಇವೆಲ್ಲ ವ್ಯಕ್ತಿತ್ವವನ್ನು ಆಶ್ರಯಿಸಿ ನಿಂತುವೇ; ವ್ಯಕ್ತಿತ್ವದ ವಿಶಿಷ್ಟಮುಖಗಳು ಅವು. ವ್ಯಕ್ತಿತ್ವದ ಗುಣ ಲಕ್ಷಣಗಳನ್ನು ಅರಿತರೇ ಇವು ಸ್ಪಷ್ಟವಾಗುತ್ತವೆ. ಮನಃಶಾಸ್ತ್ರದಲ್ಲಿ ಈಚೆಗೆ ವ್ಯಕ್ತಿತ್ವವನ್ನು ಕುರಿತು ವಿಪುಲವಾದ ಸಂಶೋಧನೆಗಳು ನಡೆಯುತ್ತಿವೆ, ಆಳವಾದ ಅಧ್ಯಯನ ಸಾಗುತ್ತಿದೆ. ವ್ಯಕ್ತಿತ್ವದ ಸಮಸ್ಯೆ ಮನಃಶಾಸ್ತ್ರದ ಪ್ರಮುಖ ವಿಚಾರವಾಗಿ ಪರಿಣಮಿಸಿದೆ.

ವ್ಯಕ್ತಿತ್ವ ಎನ್ನುವುದಕ್ಕೆ ಇಂಗ್ಲೀಷಿನ ಮಾತಾದ ಪರ್ಸನಾಲಿಟಿ ( personality ) ' ಪರ್ಸೊನ ' ಎನ್ನುವ ಪದದಿಂದ ಆದುದು ; ಈ ಗ್ರೀಕ್-ಲ್ಯಾಟಿನ್ ಪದಕ್ಕೆ ಅರ್ಥ

'ಮುಸುಕು', 'ಮುಖವಾಡ' ಎಂದು. ಹಿಂದೆ ನಾಟಕಗಳಲ್ಲಿ ನಟರು ರಂಗದ ಮೇಲೆ ಬರುವಾಗ ತಮ್ಮ ಪರಿಚಯ ಪ್ರೇಕ್ಷಕರಿಗೆ ಆಗದಿರಲೆಂದೂ, ತಾವು ಅಭಿನಯಿಸುವ ಪಾತ್ರಕ್ಕೆ ನೈಜಕಳೆ ಬರಲೆಂದೂ ಮುಖವಾಡಗಳನ್ನು ಧರಿಸುತ್ತಿದ್ದರು : ಈ ಪದ್ಧತಿ ಈಗಲೂ ಹಲವಾರು ಪ್ರಾಚೀನ ನಾಟಕ ಪರಂಪರೆಗಳಲ್ಲಿವೆ. ನಟರು ಪಾತ್ರಕ್ಕೆ ಒಪ್ಪುವಂತೆ, ಪ್ರೇಕ್ಷಕರಿಗೆ ಪಾತ್ರದ ಪರಿಚಯ ಆಗುವಂತೆ, ತಮ್ಮ ನಿಜಸ್ವರೂಪ ಮರೆಯಾಗುವಂತೆ ಧರಿಸುತ್ತಿದ್ದ ಮುಖವಾಡದ ಪ್ರಯೋಜನ ಸಂಘಜೀವಿಯಾದ ಮನುಷ್ಯನಲ್ಲಿಯೂ ಉಂಟು. ತನ್ನ ನೈಜ ಪ್ರವೃತ್ತಿಗಳಾದ ಕಾಮ, ಸ್ವಾರ್ಥ, ಮಾತ್ಸರ್ಯ ಮೊದಲಾದುವನ್ನು ಮುಚ್ಚಿ, ಸಮಾಜದಲ್ಲಿ ತನ್ನ ಸುತ್ತಮುತ್ತ ಇರುವ ಜನರಿಗೆ ಹಿತವಾಗುವಂಥ ಪ್ರವೃತ್ತಿಗಳನ್ನು ಬೆಳೆಸಿಕೊಳ್ಳುವುದು ಪ್ರತಿಯೊಬ್ಬ ಮನುಷ್ಯನಿಗೂ ಅಗತ್ಯವೇ ಅಲ್ಲವೆ? ನಾಲ್ಕು ಜನ ಮೆಚ್ಚುವಂತೆ ತಾನು ಕಾಣಿಸಿಕೊಳ್ಳ ಬೇಕು ಎನ್ನುವ ಹಂಬಲ ಮನುಷ್ಯನಿಗುಂಟು. ಈ ಕಾರಣದಿಂದ ಸಮಾಜದಲ್ಲಿ ಜೀವಿಸುವ ಪ್ರತಿಯೊಬ್ಬ ವ್ಯಕ್ತಿಯೂ ಒಂದು ಮುಖವಾಡವನ್ನು ನಿರ್ಮಿಸಿ ಕೊಳ್ಳುತ್ತಾನೆ ; ಇದರಿಂದ ತನಗೂ ಹಿತ, ಇತರರಿಗೂ ಮೆಚ್ಚಿಗೆ. ಇದೇ 'ಪರ್ಸನಾಲಿಟಿ'. ಸಮಾಜದ ನೆಲೆಯಲ್ಲಿ ವ್ಯಕ್ತಿ ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಸಮಾಜದ ಹಿತಕ್ಕೆ ಧಕ್ಕೆ ಬರದಂತೆ ಬಾಳಲು ನೆರವಾಗುವುದು ವ್ಯಕ್ತಿತ್ವ.

ಇದು ಹುಟ್ಟುತ್ತ ಸಿದ್ಧವಾಗತಕ್ಕ ಸಾಮಗ್ರಿಯಲ್ಲ. ಮನುಷ್ಯನು ಬೆಳೆಯುತ್ತ ಪಡೆದುಕೊಳ್ಳುವಂಥದು. ತನ್ನ ಪ್ರವೃತ್ತಿಗಳು, ಪ್ರವರ್ತನೆಗಳು ಮತ್ತು ಆವರಣದ ಅಗತ್ಯಗಳು, ಪ್ರಚೋದನೆಗಳು ಇವುಗಳ ಸಂಘರ್ಷಣದಿಂದ ಉದ್ಭೂತವಾಗುವ ಸಾಮಗ್ರಿವಿಶೇಷ. ಶರೀರದ ಪ್ರವೃತ್ತಿಗಳಿಗೆ ಶರೀರ ರಚನೆ ಹೇಗೆ ಅಧಿಷ್ಠಾನವೋ, ಹೇಗೆ ಅಗತ್ಯವೋ ಹಾಗೆಯೇ ನಮ್ಮ ಮಾನಸ ಪ್ರವರ್ತನೆಗಳಿಗೆ, ವರ್ತನೆಗಳಿಗೆಲ್ಲ ವ್ಯಕ್ತಿತ್ವವೇ ಅಧಿಷ್ಠಾನ, ಅಗತ್ಯ. ಇದಿಲ್ಲದೆ ವ್ಯಕ್ತಿಗೆ ಅನುಭವ-ಪ್ರತಿಕ್ರಿಯೆಗಳು ಸಾಧ್ಯವಾಗುವುದಿಲ್ಲ ; ವ್ಯಕ್ತಿಗೆ ಒಂದು ನೆಲೆ ಒದಗುವುದಿಲ್ಲ; ನೂರು ಅನುಭವವಿದ್ದರೂ ಸಾವಿರ ವಿಷಯವಿದ್ದರೂ ಅನುಭವಿ, ವಿಷಯಿ ಒಬ್ಬನೇ ಎನ್ನುವುದು ಸಿದ್ಧಿಸುವುದಿಲ್ಲ. ವ್ಯಕ್ತಿತ್ವದಿಂದಾಗಿ ನಮ್ಮ ಆಲೋಚನೆಗಳಿಗೆ, ವರ್ತನೆಗಳಿಗೆ, ಭಾವಗಳಿಗೆ ಏಕತಾನತೆ ಸಂಘಟಿಸುತ್ತದೆ. ನೂರು ಸಂದರ್ಭಗಳಲ್ಲಿ ಹಾದು ಹೋದರೂ ನಾವು ನಾವಾಗಿಯೇ ಉಳಿಯುವುದು ವ್ಯಕ್ತಿತ್ವದಿಂದ ; ಪ್ರಚೋದನಾ ವೈವಿಧ್ಯದಲ್ಲಿಯೂ ಪ್ರತಿಕ್ರಿಯೆಯ ಏಕಸೂತ್ರತೆ ಉಳಿಯುವುದು ವ್ಯಕ್ತಿತ್ವದಿಂದ.

ವ್ಯಕ್ತಿತ್ವ ಏನೆಂದು ನಿರ್ದೇಶಿಸಲು ಮನಃಶಾಸ್ತ್ರಜ್ಞರು ಹೆಣಗಾಡಿದ್ದಾರೆ. ಆಲ್‌ಪೋರ್ಟ್ ಎಂಬ ಪಂಡಿತನು ಐವತ್ತಕ್ಕೂ ಹೆಚ್ಚಿನ ನಿರೂಪಣೆಗಳನ್ನು ಸಂಗ್ರಹಿಸಿ, ಪರಿಶೀಲಿಸಿ ಈ ನಿರೂಪಣೆಗಳಲ್ಲೆಲ್ಲ ಆಧಾರಭೂತಗಳಾಗಿರುವ ತತ್ತ್ವಗಳು ಎರಡು ಎಂದು ಬರೆದಿದ್ದಾನೆ - ಒಂದು ಬಾಹ್ಯವಾದ, ಮೇಲ್ಮೈಯಿನ ಮುಸುಕು ಅಥವಾ ಪ್ರತಿಭಾಸ (appearance), ಇನ್ನೊಂದು ಆಂತರಿಕವಾದ, ಸಾರಭೂತವಾದ

ಸ್ವಭಾವ ( nature ). ಮೊದಲನೆಯ ತತ್ತ್ವ ಸಾಮಾಜಿಕನೆಲೆಯಲ್ಲಿ ವ್ಯಕ್ತಿತ್ವದ ಪ್ರವರ್ತನೆ, ಪ್ರಯೋಜನಗಳನ್ನು ಕುರಿತ ತತ್ತ್ವ, ಎರಡನೆಯದು ವ್ಯಕ್ತಿಗೆ ಸ್ವಭಾವ ಸಿದ್ಧವಾಗಿ ಒದಗಿಬಂದ ವ್ಯವಸ್ಥೆ. ಎರಡೂ ತತ್ತ್ವಗಳು ಪರಸ್ಪರ ಪೂರಕ ಎನ್ನುವುದು ಗಮನಾರ್ಹವಾದ ಅಂಶ. ವ್ಯಕ್ತಿ ತನ್ನ ದೇಹ, ಮನಸ್ಸು, ಆನುವಂಶಿಕಗುಣ, ಕಲಿಕೆ ಎಲ್ಲ ವಿವರಗಳಿಂದಲೂ ಸ್ವಭಾವವೆನ್ನುವ ನೆಲೆಯನ್ನು ಪಡೆದುಕೊಂಡು, ಅದರ ಮೂಲಕ ತನ್ನ ಸುತ್ತ ಇರುವ ಜನರಿಗೆ ಮೆಚ್ಚಿಗೆಯಾಗುವಂತೆ ತನಗೂ ಹಿತವಾಗುವಂತೆ ವರ್ತಿಸುತ್ತಾನೆ. ಅವನ ಪ್ರಚೋದನೆಗಳೂ ಪ್ರತಿಕೃತಿಗಳೂ ಈ ಪ್ರಯೋಜನದಿಂದಲೇ ವ್ಯವಸ್ಥಿತವಾಗಿವೆ ; ಆದರೆ ಆಹಾರವನ್ನು ಹೇಗೆ ಜೀರ್ಣಿಸಿಕೊಳ್ಳುತ್ತಾನೆ, ದೈಹಿಕ ಪ್ರವೃತ್ತಿಗಳು ಎಂಥವು, ವಿನಾಳಗ್ರಂಥಿಗಳ ಸ್ರಾವ ಹೇಗೆ ನಡೆಯುತ್ತವೆ ಮೊದಲಾದ ಅಂತರ್ನಿಹಿತ ತತ್ತ್ವಗಳು ವ್ಯಕ್ತಿತ್ವದ ವ್ಯಾಪ್ತಿಯಲ್ಲೇ ಸೇರುತ್ತವೆ. ಮುಖ್ಯವಾಗಿ ಒಂದು ಸಂದರ್ಭದಲ್ಲಿ ಮನುಷ್ಯ ಹೇಗೆ ವರ್ತಿಸುತ್ತಾನೆ ಎನ್ನುವುದನ್ನು ನಿರ್ಧರಿಸಲು ವ್ಯಕ್ತಿತ್ವದ ಪರಿಶೀಲನೆ ಅಗತ್ಯ. ಕೆಲವು ಮಂದಿ ನಿರ್ದಿಷ್ಟ ಬಗೆಗಳಲ್ಲಿ ವರ್ತಿಸುತ್ತಿದ್ದರೆ ಅದರ ಕಾರಣ ಏನು ಎಂದು ನಿರ್ಧರಿಸಲು ವ್ಯಕ್ತಿತ್ವ ನೆರವಾಗುತ್ತದೆ.

ವ್ಯಕ್ತಿತ್ವ ಎನ್ನುವುದು ವಾಸ್ತವವಾಗಿ ದೇಹವ್ಯವಸ್ಥೆಯಲ್ಲಿ ಕಾಣಬರುವ ವಿವರವಲ್ಲ ; ಶರೀರದ ಅಂಗೋಪಾಂಗಗಳಲ್ಲಿ ಇದು ಸೇರಿಲ್ಲ ; ಬೆರಳು ತೋರಿಸಿ ' ಇದೇ ವ್ಯಕ್ತಿತ್ವ ' ಎಂದು ಏನನ್ನೂ ತೋರಿಸುವಹಾಗಿಲ್ಲ. ಮನಃಶಾಸ್ತ್ರಜ್ಞರು ಮನುಷ್ಯವರ್ತನೆಯ ಉಗಮವನ್ನೂ ಸಂವಿಧಾನವನ್ನೂ ವಿವರಿಸಲು ಮಾಡಿ ಕೊಂಡಿರುವ ಒಂದು ಕಲ್ಪನೆ ಅದು ಎನ್ನುವುದನ್ನು ಮರೆಯಬಾರದು ; ಅದು ಒಂದು ಉಪಪತ್ತಿ ( hypothetical construct ), ವಿವರಣೆ, ಅದಕ್ಕೆ ವಸ್ತುತ್ವಾರೋಪಣೆ ಮಾಡುವುದು ತಪ್ಪಾದೀತು. ಒಬ್ಬ ವ್ಯಕ್ತಿ ಪೂರ್ವಾಪರಸಮನ್ವಯ ಮಾಡಿ, ವಿಕಾಸದ ಗತಿಯಲ್ಲಿಯೇ ತನ್ನ ಎಲ್ಲ ಕೆಲಸಗಳನ್ನೂ ಚಿಂತನೆಗಳನ್ನೂ, ಭಾವಗಳನ್ನೂ ಪರಸ್ಪರ ವಿರೋಧವಿಲ್ಲದಂತೆ ಅಳವಡಿಸಿಕೊಳ್ಳುತ್ತಾನಷ್ಟೆ ; ಅವನ ಆಂತರಿಕ ಪ್ರವರ್ತನೆ, ಬಾಹ್ಯ ಪ್ರತಿಕ್ರಿಯೆಗಳ ನಡುವೆ ಸಾಮರಸ್ಯವಿರುವಂತೆಯೇ ಅವನು ನಡೆದುಕೊಳ್ಳುತ್ತಾನಷ್ಟೆ ; ಅವನ ಮಾತುಕತೆಗಳಲ್ಲಿ, ಆಚಾರವಿಚಾರಗಳಲ್ಲಿ ಅವನು ಒಬ್ಬನೇ ವ್ಯಕ್ತಿ ಎಂದು ತೋರಿಸಿಕೊಳ್ಳುತ್ತಾನಷ್ಟೆ. ಇದಕ್ಕೆ ಆಧಾರಭೂತವಾಗಿರುವ ನಿಯಮವನ್ನೇ ವ್ಯಕ್ತಿತ್ವವೆಂದು ಕರೆದಿದ್ದಾರೆ.

ವರ್ತನೆ, ಕ್ರಿಯೆ ( ಮಾನಸ, ದೈಹಿಕ, ವಾಚಿಕ ), ಭಾವ ಇವನ್ನು ಬಿಟ್ಟು ವ್ಯಕ್ತಿತ್ವ ಇರಲಾರದು ; ಇವುಗಳಿಂದಲೇ ವ್ಯಕ್ತಿತ್ವದ ಅಭಿವ್ಯಕ್ತಿಯಾಗುವುದು ಕೂಡ. ಬೇರೆ ಯವರು ನಮ್ಮ ಮೇಲೆ ಯಾವ ಪ್ರಭಾವವನ್ನು ಬೀರುತ್ತಾರೆ, ನಾವು ಅವರ ಮೇಲೆ ಯಾವ ಪ್ರಭಾವವನ್ನು ಬೀರುತ್ತೇವೆ, ಹೊರಗಿನ ಆವರಣದಿಂದ ನಮಗೆ ಒದಗುವ ಪ್ರಚೋದನೆ, ನಮ್ಮಿಂದ ಅದರ ಬಗ್ಗೆ ನಡೆಯುವ ಪ್ರತಿಕ್ರಿಯೆ ಇವುಗಳು ವ್ಯಕ್ತಿತ್ವದ

ಆಸರೆಯಲ್ಲಿಯೇ ನಿರ್ದಿಷ್ಟವಾಗುವ ವಿವರಗಳು. ಮನುಷ್ಯನ ವರ್ತನೆ ಪ್ರತಿಕ್ರಿಯೆಗಳ ಪರಂಪರೆ; ಹುಟ್ಟಿನಿಂದ ಸಾವಿನವರೆಗೆ ಈ ಪರಂಪರೆಗೆ ವಿಚ್ಛಿತ್ತಿಯಿಲ್ಲ. ದೈಹಿಕ, ಮಾನಸಿಕ, ಸಾಮಾಜಿಕ ನೆಲೆಗಳಲ್ಲಿ ಈ ಪ್ರತಿಕ್ರಿಯೆಗಳು ನಡೆಯುತ್ತವೆ. ಈ ಪ್ರತಿಕ್ರಿಯೆಗಳಿಗೆ ವ್ಯಕ್ತಿತ್ವವು ಕಾರಣವೂ ಹೌದು, ಅವುಗಳಿಂದ ಉಂಟಾದ ಫಲವೂ ಹೌದು. ಎರಡನೆಯದಾಗಿ, ವರ್ತನೆಗಳ ವೈವಿಧ್ಯದಲ್ಲಿ ವ್ಯಕ್ತಿತ್ವವು ಒಂದು ವ್ಯವಸ್ಥೆ ( organisation ). ನಮ್ಮ ವರ್ತನೆಗಳನ್ನು ಪರಿಶೀಲಿಸಿದರೆ ಅವುಗಳಲ್ಲಿ ಒಂದು ಏಕಸೂತ್ರತೆ ಇರುವುದು ಸ್ಪಷ್ಟವಾಗುತ್ತದೆ; ಉನ್ಮಾದಸ್ಥಿತಿಯಲ್ಲಿ ಕಿರುಚಿ, ಹಾರಿ, ನಕ್ಕು, ಬಯ್ಯುವಾಗ ಕೂಡ ಅದನ್ನೆಲ್ಲ ಹೆಣೆಯುವ ಒಂದು ಅಸಾಧಾರಣ ಪ್ರವೃತ್ತಿಯಿರುವುದು ವ್ಯಕ್ತವಾಗುತ್ತದೆ. ನಾವು ಯಾವ ಕೆಲಸವನ್ನೇ ಮಾಡಲಿ ಅದು ಹಿಂದಿನ ಕೆಲಸಕ್ಕೆ ಸೇರಿಕೊಂಡು ಬಂದುದೇ, ಮುಂದಿನ ಕೆಲಸಕ್ಕೆ ಸಿದ್ಧತೆಯೇ. ನಮ್ಮ ದೈಹಿಕ ಕ್ರಿಯೆಗಳು ಕೂಡ ಒಮ್ಮುಖವಾಗಿಯೇ ಕಲಸ ಮಾಡುತ್ತವೆ; ಮಸ್ತಿಷ್ಕದ ನೆಲೆಯಲ್ಲಿ ನಮ್ಮ ಎಲ್ಲ ಪ್ರವರ್ತನೆಗಳಿಗೂ, ಪ್ರವೃತ್ತಿಗಳಿಗೂ, ಭಾವವಿಕಾರಗಳಿಗೂ ಸಂಘಟನೆಯಿದೆ. ಈ ಸಂಘಟನೆಯ ಕಾರಣವೇ ವ್ಯಕ್ತಿತ್ವ. ವ್ಯಕ್ತಿತ್ವದ ಪ್ರಯೋಜನ ವ್ಯವಸ್ಥೆ; ವ್ಯಕ್ತಿತ್ವವಿಲ್ಲದಿದ್ದರೆ ನಮ್ಮ ಕ್ರಿಯೆಗಳೆಲ್ಲ ಅಸಂಗತವಾಗುತ್ತಿದ್ದುವು, ಅತ್ಯಂತ ವಿವಿಕ್ತವಾಗುತ್ತಿದ್ದುವು, ಅನನ್ವಿತವಾಗುತ್ತಿದ್ದುವು.

ಮೂರನೆಯದಾಗಿ, ವ್ಯಕ್ತಿತ್ವವು ವ್ಯಕ್ತಿಗೆ ಸೀಮಿತವಾದದ್ದು, ಅವನ ವ್ಯಕ್ತಿತ್ವ ಅವನದ್ದೇ, ಬೇರೆಯವರ ವ್ಯಕ್ತಿತ್ವ ಅವನಿಗೆ ಬರುವ ಹಾಗಿಲ್ಲ. ಒಬ್ಬೊಬ್ಬ ಮನುಷ್ಯನ ವ್ಯಕ್ತಿತ್ವವೂ ವಿಶಿಷ್ಟವಾದುದು, ಅನನ್ಯಸಾಧಾರಣವಾದುದು ( unique ). ತಾನು ತನ್ನ ಸಂದರ್ಭ–ಪರಿಸರಗಳ ನಡುವೆ ತನಗೆ ಒದಗಿದ ಅನುಭವಗಳ ಆಧಾರದ ಮೇಲೆ ತನ್ನದೇ ಆದ ಪ್ರವರ್ತನೆ - ಪ್ರತಿಕ್ರಿಯೆಪದ್ಧತಿಯನ್ನು ಬೆಳೆಸಿಕೊಳ್ಳುತ್ತಾನೆ. ತನ್ನ ದೇಹ ತನಗೆ ಹೇಗೆ ವಿಶಿಷ್ಟವೋ ಹಾಗೆಯೇ ವ್ಯಕ್ತಿತ್ವವೂ ವಿಶಿಷ್ಟವಾದುದು. ಒಂದು ನೆಲೆಯಲ್ಲಿ ಎಲ್ಲ ಮನುಷ್ಯರಲ್ಲಿಯೂ ಸಮಾನಧರ್ಮವುಂಟು; ಅಂಗಾವಯವಗಳು, ಮೂಲಪ್ರವೃತ್ತಿಗಳು, ಮಾನಸವಿವರಗಳು, ದೈಹಿಕವಿಕಾರಗಳು ಎಲ್ಲರಿಗೂ ಉಂಟು; ಅವುಗಳ ರಚನೆಯಲ್ಲಾಗಲೀ ಕ್ರಿಯೆಯಲ್ಲಾಗಲೀ ಅಷ್ಟಾಗಿ ವೈವಿಧ್ಯವಿರದು. ಇನ್ನೊಂದುನೆಲೆಯಲ್ಲಿ ಕೆಲವು ಮನುಷ್ಯರು ಸಮಾನಧರ್ಮಿಗಳು; ಆಚಾರವ್ಯವಹಾರ, ಸ್ವಭಾವ, ಆಸಕ್ತಿ, ಪ್ರಸಕ್ತಿ ಇವುಗಳು ಹಲವು ಮನುಷ್ಯರಲ್ಲಿ ಒಂದೇ ಬಗೆಯಾಗಿರುವುದು ಸಹಜ. ಆದರೆ ಮತ್ತೊಂದು, ಮೂಲಭೂತವಾದ, ನೆಲೆಯಲ್ಲಿ ಒಬ್ಬನಂತೆ ಮತ್ತೊಬ್ಬನಿಲ್ಲ, ಒಬ್ಬೊಬ್ಬನೂ ಒಂದು ಬಗೆ. ಅವಳಿ ಜವಳಿ ವ್ಯಕ್ತಿಗಳಾದರೂ ಅವರಿಬ್ಬರೂ ಎಲ್ಲ ವಿವರಗಳಲ್ಲಿಯೂ ಒಂದೇ ಎಂದು ಹೇಳುವ ಹಾಗಿಲ್ಲ. ವ್ಯಕ್ತಿತ್ವವನ್ನುಪರಿಶೀಲಿಸುವಾಗ ಇದು ಮುಖ್ಯವಿವರ. ಈ ಕಾರಣದಿಂದಲೇ ವ್ಯಕ್ತಿತ್ವದ ಪರೀಕ್ಷೆಗಳೆಲ್ಲ ವೈಯಕ್ತಿಕ ಪರೀಕ್ಷೆಗಳು; ಅವನವನ ಪೂರ್ವೋತ್ತರಗಳನ್ನು ಅವನಿಗೆ ಒದಗಿದ ಸಂಧರ್ಭಗಳ ಚೌಕಟ್ಟಿನಲ್ಲೇ ಪರಿಶೀಲಿಸಬೇಕು.

ಈ ಮೂರು ಲಕ್ಷಣಗಳನ್ನು ಪರಿಶೀಲಿಸಿದಾಗ ಸ್ಪಷ್ಟವಾಗುವ ಒಂದು ಅಂಶವೆಂದರೆ ವ್ಯಕ್ತಿತ್ವವು ಸಮಷ್ಟಿವ್ಯಾಪಾರ ( total phenomenon ) ಎನ್ನುವುದು. ವ್ಯಕ್ತಿತ್ವವನ್ನು ಅಧ್ಯಯನ ಮಾಡುವಾಗ ನಾನಾತ್ವದ ನೆಲೆಯನ್ನು ಹಿಡಿದು ಘಟಕಗಳನ್ನೂ ವಿವರಗಳನ್ನೂ ಸ್ವತಂತ್ರಪ್ರಕಾರಗಳೆಂದು ಬಗೆಯುವುದು ಸಾಧುವಲ್ಲ. ವಿವರಗಳೆಷ್ಟೇ ಇದ್ದರೂ ವ್ಯಕ್ತಿತ್ವದಲ್ಲಿ ಅವೆಲ್ಲ ಬೆರೆಯುತ್ತವೆ, ಸಂಘಟಿತವಾಗುತ್ತವೆ, ಸಂಗತವಾಗುತ್ತವೆ. ಒಂದು ವಿವರಕ್ಕೂ ಇನ್ನೊಂದು ವಿವರಕ್ಕೂ ನಿಕಟವಾದ ಸಂಬಂಧವುಂಟು ; ವಿವರಗಳಿಗೂ ಸಮಷ್ಟಿಗೂ ಅವಿನಾಭಾವಸಂಬಂಧವುಂಟು. ಸಮಷ್ಟಿಯನ್ನು ಬಿಟ್ಟು ವಿವರಗಳಿಗೆ ನೆಲೆಯಿಲ್ಲ, ಅರ್ಥವಿಲ್ಲ, ಪ್ರವೃತ್ತಿಯಿಲ್ಲ. ವಿವರಗಳ ರಾಶಿಯೇ ಸಮಷ್ಟಿಯೆನ್ನುವುದು ತಪ್ಪು ; ವಿವರಗಳ ಸಮುದಾಯವನ್ನು ಮೀರಿದ ಒಂದು ಗುಣ ಸಮಷ್ಟಿಯಲ್ಲುಂಟು. ಈ ಅತಿರೇಕಗುಣವೇ ವ್ಯಕ್ತಿತ್ವದ ವೈಶಿಷ್ಟ್ಯಕ್ಕೆ ಕಾರಣ. ಎರಡು ಸಮಷ್ಟಿಗಳಲ್ಲಿ ವಿವರಗಳೆಲ್ಲ ಒಂದೇ ಇರಬಹುದು ; ಆದರೆ ಅವುಗಳ ಸ್ವರೂಪ ಬೇರೆಯಾಗಬಹುದು. ಇದಕ್ಕೆ ಕಾರಣ ವಿವರಗಳು ವ್ಯವಸ್ಥೆಗೊಳ್ಳುವ ಕ್ರಮ, ವಿಧಾನ. ಎಲ್ಲ ಮನುಷ್ಯರ ಮುಖಗಳಲ್ಲಿಯೂ ಕಣ್ಣು, ಮೂಗು, ಕಿವಿ, ಬಾಯಿ, ಹಣೆ ಮೊದಲಾದ ವಿವರಗಳೇ ಇದ್ದರೂ ಇಬ್ಬರ ಮುಖಗಳು ಒಂದೇ ರೀತಿಯಲ್ಲಿ ಕಾಣುತ್ತವೆಯೇ ? ವಿವರಗಳ ವ್ಯವಸ್ಥೆ ಮುಖ್ಯ. ವ್ಯಕ್ತಿತ್ವವು ಒಂದು, ಅದು ಹಲವು ವಿವರಗಳ ಸಮಷ್ಟಿ ( Gestalt ), ವ್ಯವಸ್ಥೆ ( organisation ) ಎನ್ನುವುದನ್ನು ಪ್ರಯೋಗಗಳು ಸ್ಪಷ್ಟಪಡಿಸಿವೆ. ಸ್ಫೋಟ ಅಥವಾ ಸಮಷ್ಟಿವಾದದ ಪ್ರತಿಕ್ರಿಯೆ ಈ ನಿಲುವನ್ನು ದೃಢಪಡಿಸಿದೆ. ಘಟಕವಿಶ್ಲೇಷಣದಲ್ಲಿ ಆಸಕ್ತರಾದವರು ಕೂಡ ವ್ಯಕ್ತಿತ್ವದ ಸಮಷ್ಟಿ ಲಕ್ಷಣವನ್ನು ಅಂಗೀಕರಿಸಿದ್ದಾರೆ.

೨

## ವ್ಯಕ್ತಿತ್ವದ ವಿಕಾಸ

ವ್ಯಕ್ತಿತ್ವವು ಜನ್ಮಸಿದ್ಧವಾದ ಪ್ರವೃತ್ತಿಯೆನ್ನುವುದು ನಿಜ. ವ್ಯಕ್ತಿತ್ವ ಬೆಳೆಯಲು ಯಾವ ಗುಣಗಳು, ವಿವರಗಳು ಅಗತ್ಯವೋ ಅವನ್ನು ಮನುಷ್ಯ ಹುಟ್ಟುವಾಗಲೇ ಪಡೆದಿರುತ್ತಾನೆ ; ಹುಟ್ಟಿದ ಮಗುವಿನ ಶರೀರರಚನೆ, ಅಂತರ್ನಿಹಿತಶಕ್ತಿ, ದತ್ತಸಾಮರ್ಥ್ಯ (potentiality) ಗಳಲ್ಲಿ ವ್ಯಕಿತ್ವ ಬೀಜರೂಪವಾಗಿ ಅಡಗಿರುತ್ತದೆ, ಶಾರೀರಪ್ರವೃತ್ತಿಗಳಿಲ್ಲದೆ ವ್ಯಕ್ತಿತ್ವವೆಲ್ಲಿ ಬಂತು ? ಮಗು ತನ್ನ ಅನುಭವಗಳಿಂದಲೇ, ತನ್ನ ಒಳಗೇ ವ್ಯಕ್ತಿತ್ವವನ್ನು ಪಡೆದುಕೊಳ್ಳುತ್ತದೆ. ವ್ಯಕ್ತಿತ್ವವು ಮನುಷ್ಯನ ಅವಿಭಾಜ್ಯಧರ್ಮ. ಎಂದರೆ, ಹುಟ್ಟುವಾಗಲೇ ವ್ಯಕ್ತಿತ್ವವು ಸಿದ್ಧವಾಗುತ್ತದೆ ಎನ್ನಲಾಗದು. ಅದು ಕಾಲಕ್ರಮೇಣ ಒದಗತಕ್ಕ ವಿವರ ; ಬೆಳವಣಿಗೆಯ ದಾರಿಯಲ್ಲಿ ಅದು ಕಾಣಿಸಿಕೊಳ್ಳುತ್ತದೆ. ವ್ಯಕ್ತಿತ್ವದ ಅಧಿಷ್ಠಾನ ಹುಟ್ಟುವಾಗಲೇ ಇದ್ದರೂ ವ್ಯಕ್ತಿತ್ವದ ರೂಪುರೇಷೆ, ಸ್ವರೂಪ-ಸ್ವಭಾವಗಳು ನಿರ್ದಿಷ್ಟವಾಗುವುದೂ

ಅಭಿವ್ಯಕ್ತವಾಗುವುದೂ ಮುಂದೆ ಮಗು ಬೆಳೆಯಲಾರಂಭಿಸಿದಾಗಲೇ, ಆವರಣದಿಂದ ಪ್ರಚೋದನೆಗಳನ್ನು ಪಡೆದು ಪ್ರತಿಕ್ರಿಯೆಗಳನ್ನು ನಡೆಸುವಾಗಲೇ.

ವ್ಯಕ್ತಿತ್ವ ಸಹಜ (inborn) ವಾದುದಲ್ಲ; ಕಲಿತದ್ದು, ಪಡೆದದ್ದು. ಎಂದ ಮೇಲೆ ಅದು ಮೈದಳೆಯಬೇಕಾದರೆ ವ್ಯಕ್ತಿಯಲ್ಲಿಯೂ ಆವರಣದಲ್ಲಿಯೂ ಸೌಲಭ್ಯವಿರ ಬೇಕು. ವ್ಯಕ್ತಿ ಆವರಣದ ಸಂಪರ್ಕವನ್ನು ಪಡೆಯದಿದ್ದರೆ ವ್ಯಕ್ತಿತ್ವವನ್ನು ಪಡೆಯುವುದು ಸಾಧ್ಯವಿಲ್ಲ; ಹಾಗೆಯೇ ವ್ಯಕ್ತಿಗೆ ಅಂತರ್ನಿಹಿತಸಾಮರ್ಥ್ಯವಿಲ್ಲದಿದ್ದರೆ ವ್ಯಕ್ತಿತ್ವ ಒದಗು ವುದಿಲ್ಲ. ವ್ಯಕ್ತಿತ್ವ ಮೈದಳೆಯಲು ವೈಯಕ್ತಿಕವಾದ ವಿವರಗಳೂ, ಪರಿವರ್ತನೆಗಳೂ ಹೇಗೆ ಅಗತ್ಯವೋ ಹಾಗೆಯೇ ಆವರಣದ ಪ್ರವೃತ್ತಿಗಳೂ, ಅನುಕೂಲ-ಆತಂಕಗಳೂ, ಪ್ರಚೋದನೆ–ಪ್ರೇರಣೆಗಳೂ ಹಾಗೆಯೇ ಅಗತ್ಯ. ಹೀಗೆ ವ್ಯಕ್ತಿಯ ಒಳಗಿನ ವಿವರಗಳು ಮತ್ತು ಹೊರಗಿನ ವಿವರಗಳು ಎರಡೂ ಅನ್ಯೋನ್ಯಾಶ್ರಯದಲ್ಲಿ ನಿಂತು ವ್ಯವ ಹರಿಸಿದರೆ ಮಾತ್ರ ವ್ಯಕ್ತಿತ್ವವು ರೂಪತಳೆಯುತ್ತದೆ. ಒಳಗಿನ ಬಯಕೆಗಳು, ಹೊರಗಿನ ನಿರ್ಬಂಧಗಳು; ಜೀವಿಯ ಪ್ರವೃತ್ತಿಗಳು, ಆವರಣದ ಪ್ರಚೋದನೆಗಳು; ಆಂತರಿಕ ಒತ್ತಡ, ಬಾಹ್ಯಪರಿಹಾರ - ಹೀಗೆ ವಿರುದ್ಧಾರ್ಥದ ವಿವರಗಳು ಸಮನ್ವಿತ ವಾದಾಗ ವ್ಯಕ್ತಿತ್ವ ಉತ್ಪನ್ನವಾಗುತ್ತದೆ.

ಆಂತರಿಕವಿವರಗಳಲ್ಲಿ ವಿನಾಳಗ್ರಂಥಿಗಳು ಮುಖ್ಯವೆಂದು ತಿಳಿದುಬಂದಿದೆ. ಈ ಗ್ರಂಥಿಗಳಲ್ಲಿ ಪಿಟ್ಯುಟರಿ, ಥೈರಾಯ್ಡ್, ಅಡ್ರೀನಲ್ ಮತ್ತು ಗೊನಾಡ್ ಇವು ವ್ಯಕ್ತಿತ್ವಕ್ಕೆ ನೇರವಾಗಿ ಸಂಬಂಧಿಸಿದುವು. ದೈಹಿಕಸ್ಥಿತಿಗೂ ಮನೋವೃತ್ತಿಗೂ ಭಾವಪ್ರಕೃತಿ (temperament) ಗೂ ಸಂಬಂಧವಿರುವುದು ಈ ಗ್ರಂಥಿಗಳಿಂದಲೇ. ಈ ಗ್ರಂಥಿಗಳಿಂದ ಅಗತ್ಯವಾದಷ್ಟು ಸ್ರಾವವಾಗದಿದ್ದರೆ ದೈಹಿಕವಿಕಾರಗಳು ಮಾತ್ರ ವಲ್ಲದೆ ಮನೋವಿಕಾರಗಳೂ ಉಂಟಾಗುತ್ತವೆ. ಕಾಮಪ್ರವೃತ್ತಿ ವ್ಯಕ್ತಿತ್ವದ ಮುಖ್ಯ ವಾದ ವಿವರ; ಇದು ಗೊನಾಡ್ ಗ್ರಂಥಿಗಳ ಸ್ರಾವದಿಂದಲೇ ಸಿದ್ಧವಾಗುವುದು. ಥೈರಾಯ್ಡ್ ಗ್ರಂಥಿಯ ಅಧಿಕ ಸ್ರಾವದಿಂದ ಮನಸ್ಸಿಗೆ ನೆಮ್ಮದಿ ತಪ್ಪಿ ವ್ಯಕ್ತಿತ್ವದಲ್ಲಿ ಒತ್ತಡದ ಪರಿಸ್ಥಿತಿ ಉಂಟಾಗುತ್ತದೆ; ಅಲ್ಪಸ್ರಾವದಿಂದ ಆಲಸ್ಯ, ಬೇಸರ ಒದಗುತ್ತವೆ. ಮಗುವಿನಲ್ಲಿ ಥೈರಾಯ್ಡ್ ಗ್ರಂಥಿಯ ಸ್ರಾವ ಅತಿ ಕಮ್ಮಿಯಾಗಿದ್ದರೆ ಮನೋ ದೌರ್ಬಲ್ಯ, ಮಂದಬುದ್ಧಿ, ಮಂಕು ಇವು ಕವಿಯುತ್ತವೆ, ಕ್ರೆಟಿನಿಸಂ ಎನ್ನುವ ರೋಗದ ಲಕ್ಷಣಗಳು ಇವು.

ಬಾಹ್ಯ ವಿವರಗಳಲ್ಲಿ ಆವರಣದ ಬಯಕೆಗಳು, ಅಗತ್ಯಗಳು, ನಿರೀಕ್ಷೆ, ಆನುಕೂಲ್ಯ ಇವು ಮಗುವಿಗೆ ಹೇಗೆ, ಎಷ್ಟು ಪ್ರಮಾಣದಲ್ಲಿ ಒದಗುತ್ತವೆ ಎನ್ನುವುದು ಮುಖ್ಯವಾದವಿವರ. ಆಂತರಿಕವಾದ ವಿವರಗಳು ಸಮರ್ಪಕವಾಗಿದ್ದರೂ ಹೊರಗಿನ ಸಂದರ್ಭಗಳಲ್ಲಿ ತೊಂದರೆ, ಬಡತನ, ಆತಂಕ, ನಿರ್ಬಂಧ ಇವು ವ್ಯಕ್ತಿತ್ವವನ್ನು ವಿಕೃತವಾಗಿಯೇ ರೂಪಿಸಬಲ್ಲುವು. ಮಗು ತನ್ನ ಎಳೆಯ ವಯಸ್ಸಿನಲ್ಲಿ ಬೆಳೆಯುವ

ಸಂದರ್ಭ, ಸನ್ನಿವೇಶ, ವಾತಾವರಣ, ಆರ್ಥಿಕಸೌಕರ್ಯ, ಶಾಲೆ, ಆಟ, ಜೊತೆಗಾರರು ಇವೆಲ್ಲವೂ ಮಗುವಿನ ವ್ಯಕ್ತಿತ್ವವನ್ನು ಸಿದ್ಧಪಡಿಸಲು ನೆರವಾಗುತ್ತವೆ.

ಮಗು ಹುಟ್ಟುವಾಗ ತನ್ನ ದೈಹಿಕ ಸಮಸ್ಥಿತಿಯನ್ನು ಉಳಿಸಿಕೊಳ್ಳಲು ಅದು ಹೆಣಗಾಡಬೇಕಾಗುತ್ತದೆ ; ಪ್ರವೃತ್ತಿಗಳು ಇನ್ನೂ ಅಸ್ಪಷ್ಟವಾಗಿದ್ದು, ಇಂದ್ರಿಯಗಳ ಸಾಮರ್ಥ್ಯ ಇಲ್ಲದೆ, ಅನುಭವಕ್ಕೆ ಅಗತ್ಯವಾದ ಸಂಪರ್ಕದ ಸೌಕರ್ಯ ಇಲ್ಲದೆ, ತನ್ನ ಅಗತ್ಯಗಳನ್ನು ದೈಹಿಕ ನೆಲೆಯಲ್ಲಿ ಮಾತ್ರ ಅರಿತು ಅದರ ಒತ್ತಡವನ್ನು ಅಳುವುದರ ಮೂಲಕ, ಕೈಕಾಲು ಬಡಿಯುವುದರ ಮೂಲಕ ವ್ಯಕ್ತಪಡಿಸುತ್ತದೆ. ತಾಯಿ ಸಂತೈಸಿದರೆ, ಆಹಾರವಿತ್ತರೆ ಅದಕ್ಕೆ ಸಮಾಧಾನವಾಗುವುದು ಮಾತ್ರವಲ್ಲದೆ ದೈಹಿಕ ವಿವರಗಳು ಸಂಘಟಿತವಾಗುತ್ತವೆ. ಇದು ಬೆಳವಣಿಗೆಗೆ ತುಂಬ ನೆರವಾಗುತ್ತದೆ. ಹೀಗೆ ಹುಟ್ಟಿದ ಮೊದಲ ತಿಂಗಳಲ್ಲಿ ಕೂಡ ಮಗುವಿಗೆ ಆವರಣದ ಸಂಪರ್ಕ ಮಿತವಾಗಿ ಇರುತ್ತದೆ. ಆದರೆ ಇಲ್ಲಿ ವ್ಯಕ್ತಿತ್ವವಿದೆಯೆಂದು ಹೇಳುವುದು ಉತ್ಪ್ರೇಕ್ಷೆಯಾದೀತು. ಆದರೆ ಒಂದೂವರೆ ವರ್ಷದ ನಂತರ ಮೂರು ವರ್ಷಗಳವರೆಗೆ ಮಗು ಎದ್ದು ಕೂಡುತ್ತದೆ, ನಡೆಯಲು ಕಲಿಯುತ್ತದೆ, ಆಟವಾಡುತ್ತದೆ, ಮಾತನ್ನಾಡುತ್ತದೆ. ಆವರಣ ದಿಂದ ಅಧಿಕ ಪ್ರಮಾಣದಲ್ಲಿ ಪ್ರಚೋದನೆಗಳೂ ನಿರ್ಬಂಧಗಳೂ ಮಗುವಿಗೆ ಒದಗಿ ತನ್ನ ಪ್ರತಿಕ್ರಿಯೆಯನ್ನು ಮಾರ್ಪಡಿಸಿಕೊಳ್ಳುತ್ತದೆ. ತನ್ನ ಬಯಕೆಗಳಿಗೂ ಸಂದರ್ಭದ ಅಗತ್ಯಗಳಿಗೂ ವಿರೋಧವಿದ್ದಾಗ ತಾನು ಹೇಗೆ ವ್ಯವಹರಿಸಬೇಕೆನ್ನುವುದನ್ನು ನಿರ್ಧರಿಸಿ ಕೊಳ್ಳುತ್ತದೆ. ಇವುಗಳಿಂದಾಗಿ ವ್ಯಕ್ತಿತ್ವದ ಬೆಳವಣಿಗೆಗೆ ಬುನಾದಿ ದೊರೆಯುತ್ತದೆ.

ಮಗು ಐದನೆಯ ವರ್ಷ ಮುಟ್ಟುವ ವೇಳೆಗೆ ಆವರಣದಿಂದ ನೂರಾರು ಸಮಸ್ಯೆಗಳು ಅದರ ಮೇಲೆರಗುತ್ತವೆ ; ಸಾಮಾಜಿಕ ರೀತಿನೀತಿಗಳನ್ನು ಅದು ಕಲಿಯ ಬೇಕಾಗುತ್ತದೆ, ಆಚಾರ ವ್ಯವಹಾರಗಳ ಮರ್ಮವನ್ನು ಅರಿತುಕೊಳ್ಳಬೇಕಾಗುತ್ತದೆ, ಇತರ ಮಕ್ಕಳ ಮನೋಧರ್ಮವನ್ನು ಗಮನಿಸಿ ಅವರೊಡನೆ ಹೊಂದಿಕೊಳ್ಳಬೇಕಾಗು ತ್ತದೆ, ತಂದೆ ತಾಯಿಯರ ಮನೋವೃತ್ತಿಗಳಲ್ಲಿ ಒದಗಿದ ಮಾರ್ಪಾಟುಗಳನ್ನು ಗಮನಿಸಿ ಅವರ ಮನಸ್ಸಿಗೆ ಸಂತೋಷವಾಗುವಂತೆ ನಡೆದುಕೊಳ್ಳಬೇಕಾಗುತ್ತದೆ, ಸಂಸ್ಕೃತಿಯ ಹತ್ತಾರು ಕೌಶಲಗಳನ್ನು ವಶಮಾಡಿಕೊಳ್ಳಬೇಕಾಗುತ್ತದೆ. ಈ ಗೊಂದಲಕ್ಕೆ ಸಿಕ್ಕಿದ ಮಗು ತನ್ನ ಪ್ರತಿಕ್ರಿಯೆ ಫಲಕಾರಿಯಾಗಬೇಕೆಂದು ಹಂಬಲಿಸಿ ತನ್ನ ವ್ಯಕ್ತಿತ್ವದ ರೂಪು ರೇಖೆಗಳನ್ನು ಸಿದ್ಧಪಡಿಸಿಕೊಳ್ಳಲಾರಂಭಿಸುತ್ತದೆ. ಈ ಅವಧಿಯಲ್ಲಿಯೇ ವ್ಯಕ್ತಿತ್ವದ ಸಾಧಾರಣ, ಅಸಾಧಾರಣ ಪ್ರವೃತ್ತಿಗಳು ಮೈದಳೆಯುತ್ತವೆ. ಇವು ಸಾಮಾನ್ಯವಾಗಿ ಬಾಳಿನುದ್ದಕ್ಕೂ ಉಳಿದುಬರುತ್ತವೆ.

ಮಗುವಿಗೆ ಏಳೆಂಟು ವರ್ಷ ವಯಸ್ಸಾದಾಗ ತಾಯಿತಂದೆಯರ ಅಂಕೆಯಿಂದಲೂ ಆರೈಕೆಯಿಂದಲೂ ಸ್ವಲ್ಪಮಟ್ಟಿಗೆ ಸ್ವತಂತ್ರವಾಗಿ, ಜೊತೆಗಾರರೊಂದಿಗೆ ಕಾಲ ಕಳೆಯುವ ಹವ್ಯಾಸ ಹೆಚ್ಚಾಗಿ ತನ್ನ ವ್ಯವಹಾರ ಕೌಶಲವನ್ನು ರೂಪುಗೊಳಿಸಿಕೊಳ್ಳುತ್ತದೆ. ತನ್ನ

ಸ್ವಭಾವ ಯಾವ ರೀತಿಯಲ್ಲಿರಬೇಕು, ತನ್ನ ಮನೋವೃತ್ತಿ ಹೇಗಿದ್ದರೆ ಒಳ್ಳೆಯದು ಎನ್ನುವ ಸಮಸ್ಯೆಗಳು ಅದನ್ನು ಆವರಿಸುತ್ತವೆ. ವ್ಯಕ್ತಿತ್ವದ ಬೆಳವಣಿಗೆಗೆ ಇದು ಮುಖ್ಯ ಹಿನ್ನೆಲೆ. ಮುಂದೆ ಹತ್ತು ಹನ್ನೆರಡು ವರ್ಷ ವಯಸ್ಸಾದಾಗ ಆಟದಲ್ಲೇ ಮಗು ಆಸಕ್ತವಾಗಿ ದಿನದ ಬಹಳವೇಳೆ ಆಟದ ಸಂದರ್ಭದಲ್ಲೇ ಜೊತೆಗಾರರೊಂದಿಗೇ ಕಳೆಯುತ್ತದೆ. ಮನೆಯಲ್ಲಿ ತಂದೆತಾಯಿಯರು ಒಪ್ಪುವ ನಡತೆ, ಹೊರಗೆ ಜೊತೆಗಾರರು ಒಪ್ಪುವ ನಡತೆ ಎರಡಕ್ಕೂ ಘರ್ಷಣೆ ಒದಗುವುದು ಸಹಜ. ಎರಡೂ ಪಕ್ಷಗಳಿಗೆ ಸಮರ್ಪಕವಾಗುವಂತೆ ತನ್ನ ನಡತೆಯನ್ನು ಅಳವಡಿಸಿಕೊಳ್ಳಬೇಕೆನ್ನುವ ಅಗತ್ಯ ಮಗುವಿಗೆ ತಿಳಿಯುತ್ತದೆ. ಅಷ್ಟಲ್ಲದೆ ವಯಸ್ಸಿಗೆ ಅನುಗುಣವಾಗಿ ಕೆಲವು ದೈಹಿಕ ವಿಕಾರಗಳು ಒದಗಿ ಕಾಮಪ್ರಸಕ್ತಿ ಮೊದಲಾಗುತ್ತದೆ. ಇದನ್ನು ನವತಾರುಣ್ಯ ಎಂದು ನಿರ್ದೇಶಿಸಬಹುದು. ಆಗ ಹುಡುಗ, ಹುಡುಗಿಯರ ಮನೋಧರ್ಮ, ಆಸಕ್ತಿ, ಅಭಿರುಚಿ ಎಲ್ಲವೂ ಮಾರ್ಪಡುತ್ತಹೆ ; ನಾಚಿಕೆ, ಬಿಂಕ, ದುಗುಡ, ಉತ್ಸಾಹ ಎಲ್ಲವೂ ಕಾಣಿಸಿಕೊಳ್ಳುತ್ತವೆ. ತಾನು, ತನ್ನದು, ತನ್ನಮಾನ, ಅಭಿಮಾನ ಎನ್ನುವ ಗುಣ ಸಣ್ಣ ವಯಸ್ಸಿನಲ್ಲೇ ಆರಂಭವಾದುದು ಈಗ ಪರಿಷ್ಕೃತವಾಗುತ್ತದೆ ; ಅಹಮಿಕೆ (ego) ಯ ತತ್ತ್ವ ವ್ಯವಹಾರ ಶುದ್ಧವಾಗಿ ಮೈದಳೆಯುತ್ತದೆ.

ಈ ಸ್ಥಿತಿ ಕಳೆದನಂತರ ಒದಗುವ ಯೌವನದಲ್ಲಿ ವಿನಾಳಗ್ರಂಥಿಗಳ ಸ್ರಾವದಿಂದಾಗಿ ಕಾಮ ಪ್ರಮುಖವಾದ ಪ್ರವೃತ್ತಿಗಳು ಮುಂದೆ ನಿಲ್ಲುತ್ತವೆ. ದೇಹ ಮಾರ್ಪಡುತ್ತದೆ, ಮನಸ್ಸೂ ಬದಲಾಗುತ್ತದೆ. ತನ್ನ ನೆಲೆಯ ಬಗ್ಗೆ ಹೆಚ್ಚಿನ ಅರಿವಾಗುತ್ತದೆ. ತಂದೆ ತಾಯಿಯರ, ಹಿರಿಯರ ಅಂಕೆ ಅಪ್ರಿಯವಾಗಿ ಸ್ವಾಭಿಮಾನ, ಆತ್ಮವಿಶ್ವಾಸ, ಸ್ವಾತಂತ್ರ್ಯ, ಪ್ರೀತಿ ಇವು ಬೆಳೆಯುತ್ತವೆ. ತಾನು ಎಳೆಯವನಲ್ಲ, ಬೆಳೆದವನು ಎನ್ನುವ ವಿಶ್ವಾಸ ಹಟವಾಗಿ ಪರಿಣಮಿಸುವುದೂ ಸಾಧ್ಯ. ವಯಸ್ಕರಂತೆ ತಾವು ಸಮಾಜದಿಂದ ಪರಿಗಣಿಸಲ್ಪಡಬೇಕೆಂಬ ಕಾತರ ಯುವಕರಿಗಿರುವುದು ಸಹಜ. ಇದಕ್ಕೆ ಯಾವ ಕಾರಣದಿಂದಲಾದರೂ ಅಡ್ಡಿಬಂದರೆ ಅವರಿಗೆ ನಿರಾಶೆಯಾಗುತ್ತದೆ, ಉದ್ರೇಕವೊದಗುತ್ತದೆ, ಆವರಣದೊಂದಿಗೆ ಸೆಣಸಾಡಲು ಸಿದ್ಧರಾಗುತ್ತಾರೆ, ಬಲ ಪ್ರಯೋಗ ಮಾಡುತ್ತಾರೆ. ಮದುವೆಯಾಗಬೇಕು, ಮನೆ ಮಾಡಬೇಕು, ಉದ್ಯೋಗ ದೊರೆಕಿಸಿಕೊಳ್ಳಬೇಕು, ಧನಾರ್ಜನೆ ಮಾಡಬೇಕು, ಕೀರ್ತಿ ಬರಬೇಕು ಎಂಬುವ ಹಂಬಲಗಳು ಈ ವಯಸ್ಸಿನಲ್ಲಿ ಬಹುಮಟ್ಟಿಗೆ ಕಾಣಿಸಿಕೊಳ್ಳುತ್ತವೆ. ಕಲೆ, ಸಾಹಿತ್ಯ, ರಾಜಕಾರಣ ಮೊದಲಾದ ವಿಚಾರಗಳಲ್ಲಿ ಆಸಕ್ತಿಯೂ ಬೆಳೆಯುತ್ತದೆ. ಆದರೂ ಯೌವನದ ಸ್ಥಿತಿ ತೀರ ಗೊಂದಲದ, ಪೇಚಿನ ಸ್ಥಿತಿ. ಭಾವಗಳ ತುಯ್ದಾಟ ಇಲ್ಲಿ ನಡೆಯುವಷ್ಟು ಬೇರೆ ಯಾವ ವಯಸ್ಸಿನಲ್ಲಿಯೂ ನಡೆಯುವುದಿಲ್ಲ. ಈ ಕಾರಣದಿಂದ ಮನಸ್ಸಿಗೆ ನೆಮ್ಮದಿಯಿಲ್ಲದೆ ಅತಿಯಾಗಿ ಓಡಾಡುವುದು ; ಉತ್ಸಾಹದಿಂದ, ಸಂಭ್ರಮದಿಂದ ಓಲಾಡುವುದು ; ನಿರಾಶೆಯಿಂದ ಮುಗುಡವಾಗುವುದು ; ಹೆಂಗಳೆಯರಲ್ಲಿ ಅಧಿಕವಾದ ಆಸಕ್ತಿಯನ್ನು ತಳೆಯುವುದು ; ವೀರನಂತೆ ವರ್ತಿಸುವುದು, - ಇವನ್ನೆಲ್ಲ

ಪರಿಶೀಲಿಸಿದರೆ ವ್ಯಕ್ತಿತ್ವ ಯಾವ ರೀತಿಯಲ್ಲಿ ಸಿದ್ಧವಾಗುತ್ತಿದೆ ಎನ್ನುವುದು ತಿಳಿಯುತ್ತದೆ. ಈ ಅವಧಿ ಮುಗಿಯುವ ಹೊತ್ತಿಗೆ ವ್ಯಕ್ತಿತ್ವ ದೃಢವಾಗುತ್ತದೆ, ಸ್ಪಷ್ಟವಾಗುತ್ತದೆ. ಹೊಂದಾಣಿಕೆ, ಸಮನ್ವಯ ಇವು ಜೀವನದ ಮೂಲ ತತ್ತ್ವಗಳೆಂಬ ಜ್ಞಾನ ಯುವಕನಿಗೆ ಉಂಟಾಗುತ್ತದೆ. ಇಲ್ಲಿಗೆ ವ್ಯಕ್ತಿತ್ವ ಸಮರ್ಪಕವಾಗಿ ಬೆಳೆದು ಪ್ರೌಢವಾಯಿತೆಂದರ್ಥ.

ಮುಂದೆ ಸಂಸಾರದಲ್ಲಿ, ಉದ್ಯೋಗದಲ್ಲಿ, ಸಮಾಜದಲ್ಲಿ ನಿಂತ ವ್ಯಕ್ತಿ ತನ್ನ ಹಿತವನ್ನೂ ಸಮಾಜದ ನಿರ್ಬಂಧಗಳನ್ನೂ ಹೊಂದಿಸಿಕೊಂಡು ಬಾಳುವಾಗ ವ್ಯಕ್ತಿತ್ವ ಅವನ ನೆರವಿಗೆ ಬರುತ್ತದೆ. ಯಾವ ಸಂದರ್ಭದಲ್ಲಾಗಲೀ ಸಮರ್ಪಕವಾದ ಪ್ರತಿಕ್ರಿಯೆಯನ್ನು ಮಾಡಲು ಅವನು ವಿಶೇಷ ಶ್ರಮ ವಹಿಸಬೇಕಾದುದಿಲ್ಲ ; ವ್ಯಕ್ತಿತ್ವ ಒಳಗಿದ್ದು ಈ ಪ್ರತಿಕ್ರಿಯೆಗಳನ್ನು ಅವನಿಗೆ ತಿಳಿಯದಂತೆಯೇ ನಡೆಸಿಬಿಡುತ್ತದೆ. ಇತರರೊಂದಿಗೆ ವ್ಯವಹರಿಸುವಾಗ, ಸಮಸ್ಯೆಗಳನ್ನು ಪರಿಹರಿಸಬೇಕಾದಾಗ, ಆವರಣದೊಂದಿಗೆ ಹೊಂದಿಕೊಳ್ಳುವಾಗ ಅವನ ವ್ಯಕ್ತಿತ್ವ ಮಾರ್ಗದರ್ಶನವನ್ನು ಮಾಡುತ್ತದೆ. ಅಷ್ಟುಮಾತ್ರವಲ್ಲ, ಅದೇ ಪ್ರವರ್ತನೆಯನ್ನೂ ಒದಗಿಸುತ್ತದೆ. ಯಾವ ಆಸಕ್ತಿ ಮುಖ್ಯ, ಯಾವ ಕೆಲಸ ಅಮುಖ್ಯ, ಯಾವ ವಿವರದ ಮೌಲ್ಯ ಎಷ್ಟು, ಯಾವುದು ಜನಸಮ್ಮತವಾದುದು, ಯಾವುದು ಗರ್ಹ್ಯ ಇಂಥ ವಿವರಗಳೆಲ್ಲ ವ್ಯಕ್ತಿತ್ವದಿಂದ ಅವನಿಗೆ ತಿಳಿಯುತ್ತದೆ. ಮನುಷ್ಯ ಸುಖವಾಗಿ ಸಮಾಜಜೀವಿಯಾಗಿ ಬಾಳಲು ಅವನು ಬೆಳೆಸಿಕೊಂಡ ವ್ಯಕ್ತಿತ್ವ ನೆರವಾಗುತ್ತದೆ.

೩

## ವ್ಯಕ್ತಿತ್ವದ ಅನುಸಂಧಾನ

ವ್ಯಕ್ತಿತ್ವ ಸಮಷ್ಟಿಯೆಂದೆವಷ್ಟೆ. ಈ ಮಾತಿನಿಂದ ಅದು ಒಂದೇ ವಿವರವಲ್ಲ, ಹಲವಾರು ವಿವರಗಳು ಅದರಲ್ಲಿ ಸೇರಿವೆ ಎನ್ನುವುದು ಧ್ವನಿತವಾಗುತ್ತದೆ. ವ್ಯಕ್ತಿತ್ವದಲ್ಲಿರುವ ವಿವರಗಳಿಗೆ ಘಟಕಗಳು (factors), ಲಕ್ಷಣಗಳು (traits) ಎಂದು ಹೆಸರು. ಪ್ರಾಣಿಜೀವನಕ್ಕೆ ಸಹಜವಾದ ಪ್ರವೃತ್ತಿಗಳು ಎಲ್ಲರಲ್ಲಿಯೂ ಸಮನಾಗಿರುವುದರಿಂದ ಕೆಲವು ಲಕ್ಷಣಗಳು ಸರ್ವಸಾಮಾನ್ಯವಾಗಿರುತ್ತವೆ ; ನಮ್ಮ ಸಾಮಾಜಿಕ, ಭೌಗೋಳಿಕ ಆವರಣಗಳೂ ಎಲ್ಲರಿಗೂ ಸಮನಾಗಿರುವಾಗ ವ್ಯಕ್ತಿಯ ಲಕ್ಷಣಗಳೂ ಸಾಮಾನ್ಯವಾಗಿರುವುದು ಸಹಜವೇ. ಆದರೆ ಕೆಲವು ಲಕ್ಷಣಗಳು ವ್ಯಕ್ತಿ-ವ್ಯಕ್ತಿಗಳಲ್ಲಿ ಭಿನ್ನವಾಗಿರುತ್ತದೆ. ಆಸಕ್ತಿ, ಅಭಿರುಚಿ, ಸ್ವಭಾವ ಇವು ಎಲ್ಲರಲ್ಲಿಯೂ ಒಂದೇ ಆಗಿರುವುದಿಲ್ಲ. ಕೆಲವು ಲಕ್ಷಣಗಳು ಹೀಗೆ ವ್ಯಕ್ತಿಗೆ ವಿಶಿಷ್ಟವಾದುವು. ಯಾವ ವ್ಯಕ್ತಿತ್ವ ಲಕ್ಷಣಗಳು ಸಾಮಾನ್ಯ, ಯಾವುವು ವಿಶಿಷ್ಟ ಎಂದು ನಿರ್ಧರಿಸುವುದು ಮನಃಶಾಸ್ತ್ರದ ಸಮಸ್ಯೆ. ಲಕ್ಷಣ ಎನ್ನುವುದು ಮೇಲೆ ಕಾಣುವಂಥ ವರ್ತನೆಗೆ ಹಿನ್ನೆಲೆಯಾಗಿ

ಅವ್ಯಕ್ತವಾಗಿ ಒಳಗೇ ಇರುವುದು ; ಇದು ಆಂತರಿಕ ವ್ಯವಸ್ಥೆಯ ವಿವರ. ವ್ಯಕ್ತಿಯಲ್ಲಿ ರೂಢಮೂಲವಾಗಿರುವ ಈ ಗುಣ ಕಾಲಕಾಲಕ್ಕೆ ಅಭಿವ್ಯಕ್ತಿ ತಳೆಯುತ್ತದೆ.

ಥರ್ಸ್‌ಟನ್ ಎನ್ನುವ ಮನೋವಿಜ್ಞಾನಿ ವ್ಯಕ್ತಿತ್ವದಲ್ಲಿ ಐದು ಘಟಕಗಳಿವೆ ಯೆಂದು ನಿಶ್ಚಯಿಸಿದನು ; ಕಾರ್ಯಗೌರವ, ಪೌರುಷ, ಭಾವಸ್ಥೈರ್ಯ, ಸಾಮಾಜಿಕ ಕೌಶಲ, ಆಲೋಚನಾಪರತೆ ಇವೇ ಘಟಕಗಳು. ಇವನ್ನು ನಿರ್ಣಯಿಸಲು ಈತನು ಸಂಖ್ಯಾನಪದ್ಧತಿಯನ್ನು ಬಳಸಿದನು. ವ್ಯಕ್ತಿತ್ವದಲ್ಲಿ ಪದರಗಳಿವೆ. ಮೇಲಿನ ಪದರದ ವಿವರಗಳು ಸ್ಥೂಲಪರಿಶೀಲನೆಗೆ ದೊರೆಯುತ್ತವೆ ; ಇವನ್ನೇ ಮೂಲಭೂತ ಎಂದು ಬಗೆಯುವ ಭ್ರಾಂತಿ ಮೊದಮೊದಲಿಗೆ ಇದ್ದಿತು. ಆದರೆ ಸಂಖ್ಯಾನ ಪದ್ಧತಿ ಯನ್ನು ಬಳಸಲು ಆರಂಭಿಸಿದನಂತರ ಒಳಪದರಗಳ ವಿವರಗಳನ್ನು ತಿಳಿಯುವುದು ಸಾಧ್ಯವಾಯಿತು. ಮೂಲಭೂತವಾದ ಲಕ್ಷಣಗಳು ( primary traits ) ಯಾವುವು ಎನ್ನುವುದನ್ನು ನಿರ್ಧರಿಸಲು ಮನಃಶಾಸ್ತ್ರಜ್ಞರು ಶ್ರಮಿಸಿದರು. ಯಾವ ಲಕ್ಷಣಗಳನ್ನು ಮುಂದೆ ವಿಶ್ಲೇಷಣಮಾಡುವುದು ಸಾಧ್ಯವಿಲ್ಲವೋ, ಯಾವ ಲಕ್ಷಣಗಳಿಂದಲೇ ಉಳಿದ ಲಕ್ಷಣಗಳೆಲ್ಲ ಆಗುವುವೋ ಅವು ಮೂಲಭೂತ ಲಕ್ಷಣಗಳು ; ಇವೇ ವ್ಯಕ್ತಿತ್ವದ ಆಧಾರ ಘಟಕಗಳು. ಇವನ್ನು ಕಂಡುಹಿಡಿಯುವುದು ವ್ಯಕ್ತಿತ್ವ ಪರೀಕ್ಷೆಯ ಉದ್ದೇಶ

ವಿವರಗಳ ಅನುಸಂಧಾನದಿಂದ ಮತ್ತೊಂದು ಅಂಶ ಬೆಳಕಿಗೆ ಬಂದಿತು ; ಅದು ಪ್ರತಿರೂಪ ( type ) ಗಳ ವಿಚಾರ. ಜನರನ್ನು 'ಒಳ್ಳೆಯವರು', 'ಕೆಟ್ಟವರು', 'ವಿಷಯಪರರು', 'ಜಂಬಗಾರರು', ಸಿಟ್ಟಿನವರು', ' 'ಶಾಂತಸ್ವಭಾವದವರು', 'ಸರಳಸ್ವಭಾವದವರು', 'ಕುಟಿಲರು', 'ದಯಾಪರರು', 'ಕ್ರೂರಿಗಳು' ಎಂದು ಮುಂತಾಗಿ ವರ್ಗೀಕರಣ ಮಾಡುವುದು ವಾಡಿಕೆಯಲ್ಲಿದೆ. ಇದು ಅವರ ವರ್ತನೆಯಿಂದ, ಮನೋವೃತ್ತಿಯಿಂದ ಸ್ಪಷ್ಟವಾಗತಕ್ಕದ್ದು. ಆದರೆ ವ್ಯಕ್ತಿತ್ವದ ಮೂಲಭೂತ ವಿವರಗಳ ವ್ಯವಸ್ಥೆಯಿಂದ ವ್ಯಕ್ತಿಗಳನ್ನು ವಿಭಾಗಮಾಡುವುದು ಸಾಧ್ಯವೇ ಎನ್ನುವ ಸಮಸ್ಯೆಯನ್ನು ಮನೋವಿಜ್ಞಾನಿಗಳು ಎದುರಿಸಿದ್ದಾರೆ. ವ್ಯಕ್ತಿಗಳನ್ನು ವರ್ಗೀಕರಣ ಮಾಡುವಾಗ ಸಂಖ್ಯಾನಶಾಸ್ತ್ರದ ನೆರವನ್ನು ಪಡೆದುಕೊಂಡು ಅದರ ಮಾರ್ಗದರ್ಶನ ದಿಂದ ವ್ಯಕ್ತಿಗಳನ್ನು ನಿರ್ದಿಷ್ಟ ಪ್ರತಿರೂಪಗಳಲ್ಲಿ ಅಡಕಮಾಡಿದ್ದಾರೆ.

ಇವುಗಳಲ್ಲಿ ತುಂಬ ಪ್ರಸಿದ್ಧವಾದ ಪ್ರತಿರೂಪವಿಭಜನೆಯೆಂದರೆ ಕಾರ್ಲ್‌ಯೂಂಗ್ ( Carl Jung ) ಎಂಬ ಪ್ರತಿಭಾಶಾಲಿಯಾದ ಮನೋವಿಜ್ಞಾನಿ ಸಿದ್ಧಪಡಿಸಿದ 'ಅಂತರ್ಮುಖಿಗಳು' ( introverts ) ಮತ್ತು 'ಬಹಿರ್ಮುಖಿಗಳು' ( extroverts ) ಎನ್ನುವ ವಿಭಜನೆ. ಮೊದಲನೆ ಬಗೆಯ ಜನರು ತಮ್ಮಷ್ಟಿಗೆ ತಾವು ಇದ್ದುಕೊಂಡಿರುವವರು ; ಆವರಣದೊಂದಿಗೆ ಹೆಚ್ಚಿನ ಸಂಪರ್ಕವನ್ನು ಬೆಳೆಸಿಕೊಳ್ಳು ವವರಲ್ಲ, ಏಕಾಂತಪ್ರಿಯರು ; ಅದರಿಂದ ನಿವೃತ್ತರಾಗುವುದೇ ಅವರ ಪ್ರತಿಕ್ರಿಯೆ. ಅವರು ಆಲೋಚನಾಪರರು, ಸಾಮಾಜಿಕ ಕಾರ್ಯಗಳಲ್ಲಿ ಅಷ್ಟಾಗಿ ಸೇರರು. ಇದಕ್ಕೆ

ವಿರುದ್ಧವಾಗಿ ಬಹಿರ್ಮುಖಿಗಳು ಸಂಗಪ್ರಿಯರು, ಉತ್ಸಾಹಿಗಳು, ಕಾರ್ಯಶೀಲರು ; ಜನರೊಂದಿಗೆ ಇರುವುದೆಂದರೆ ಅವರಿಗೆ ಹೆಚ್ಚಿನ ಆಸಕ್ತಿ. ಹೀಗೆ ನಿರ್ದಿಷ್ಟವಾದ ಎರಡು ಪ್ರತಿರೂಪಗಳು ದಿನದಿನದ ವ್ಯವಹಾರದಲ್ಲಿ ಕೂಡ ಸ್ಪಷ್ಟವಾಗುತ್ತದೆ. ನಾವು ಯಾವುದಾದರೂ ವಿಚಾರದಲ್ಲಿ ತೋರಿಸುವ ಆಸಕ್ತಿಯಿಂದ, ಅಥವಾ ಯಾವುದಾದರೂ ಸಂದರ್ಭದಲ್ಲಿ ಮಾಡುವ ಪ್ರತಿಕ್ರಿಯೆಯಿಂದ ನಾವು ಯಾವ ಪ್ರತಿರೂಪಕ್ಕೆ ಸೇರಿದವರು ಎನ್ನುವುದು ತಿಳಿಯುತ್ತದೆ. ಎಲ್. ಆರ್. ಮಾರ್ಸ್ಟನ್ ( L. R. Marston ) ಎನ್ನುವವನು ಮಕ್ಕಳಮೇಲೆ ಈ ವಿಭಜನಾ ಪ್ರಯೋಗವನ್ನು ನಡೆಸುವಾಗ ಅವರನ್ನು ವಸ್ತುಸಂಗ್ರಹಾಲಯಕ್ಕೆ ಕರೆದೊಯ್ದು ಮಕ್ಕಳು ಯಾವ ಯಾವ ವಸ್ತುಗಳ ಮೇಲೆ ತಾವಾಗಿ ಗಮನವಿಡುತ್ತಾರೆ ಎನ್ನುವುದನ್ನು ಗಮನಿಸಿದನು. ಗಮನ ಅಪ್ರಚೋದಿತವಾಗಿ ಒಂದು ವಿಷಯದ ಮೇಲೆ ಹರಿದರೆ ಅದಕ್ಕೆ ವ್ಯಕ್ತಿತ್ವದ ಪ್ರವೃತ್ತಿಯೇ ಕಾರಣ ಎನ್ನುವುದು ಸಿದ್ಧಾಂತ.

ಅಂತರ್ಮುಖಿಗಳು ಬಹಿರ್ಮುಖಿಗಳು ಎನ್ನುವುದು ಸ್ಥೂಲವಾದ ನಿರ್ದೇಶನ, ಎಲ್ಲ ಮನುಷ್ಯರನ್ನೂ ಒಂದು ಇಲ್ಲವೇ ಇನ್ನೊಂದು ಎಂದು ವರ್ಗೀಕರಣ ಮಾಡುವುದು ಸಾಧ್ಯವಿಲ್ಲ. ಬಹುಮಟ್ಟಿಗೆ ಜನರು ಸಂದರ್ಭಕ್ಕೆ ಅನುಸಾರವಾಗಿ ವರ್ತಿಸುತ್ತಾರೆ ; ಕೆಲವೊಮ್ಮೆ ಅಂತರ್ಮುಖಿಗಳು, ಕೆಲವೊಮ್ಮೆ ಬಹಿರ್ಮುಖಿಗಳು. ಅಂತರ್ಮುಖಿಗಳಾದವರು ಕೂಡ ಎಂದೂ ಬಹಿರ್ಮುಖಿಗಳಾಗುವುದೇ ಇಲ್ಲವೆಂದು ಹೇಳಬರುವುದಿಲ್ಲ ; ಹಾಗೆಯೇ ಬಹಿರ್ಮುಖಿಗಳೂ ಆಗಾಗ ಅಂತರ್ಮುಖಿಗಳಾಗಬಲ್ಲರು. ಸಂಶೋಧನೆಯಿಂದ ವ್ಯಕ್ತವಾದ ಈ ಅಂಶ ಉಭಯಮುಖಿಗಳು ( ambiverts ) ಎನ್ನುವ ಕಲ್ಪನೆಗೆ ಎಡೆಮಾಡಿಕೊಟ್ಟಿತು. ಸಾಮಾನ್ಯವಾಗಿ ಜನರು ಉಭಯಮುಖಿಗಳು ; ಸಂದರ್ಭ ಬಂದಾಗ ಅಂತರ್ಮುಖಿಗಳಾಗುತ್ತಾರೆ, ಬಹಿರ್ಮುಖಿಗಳಾಗುತ್ತಾರೆ. ಆತ್ಯಂತಿಕ ಪಕ್ಷವೆಂದು ಯಾರನ್ನೂ ಅಂತರ್ಮುಖಿಗಳೆಂದಾಗಲೀ ಬಹಿರ್ಮುಖಿಗಳೆಂದಾಗಲೀ ವಿಭಾಗ ಮಾಡುವುದು ತಪ್ಪಾಗುತ್ತದೆ. ಆದರೆ ವ್ಯವಹಾರದಲ್ಲಿ ಕವಿಗಳು, ಕಲೆಗಾರರು, ಜಿಜ್ಞಾಸುಗಳು ಇವರಲ್ಲಿ ಅಂತರ್ಮುಖ ಪ್ರವೃತ್ತಿ ಹೆಚ್ಚು ; ರಾಜಕಾರಣಿಗಳು, ಉದ್ಯಮಿಗಳು, ಸಮಾಜ ಸುಧಾರಕರು, ಆಟಗಾರರು ಇವರೆಲ್ಲ ಬಹುಮಟ್ಟಿಗೆ ಬಹಿರ್ಮುಖಪ್ರವೃತ್ತಿಯುಳ್ಳವರು.

ವ್ಯಕ್ತಿತ್ವದ ಅನುಸಂಧಾನದಲ್ಲಿ ಇಡೀ ವ್ಯಕ್ತಿತ್ವವನ್ನೇ ಪರಿಶೀಲನ ಮಾಡುವ ಸಂಕಲ್ಪದಿಂದ ಉದ್ಯುಕ್ತರಾದವರು ಕೆಲವರು ; ಇವರ ದೃಷ್ಟಿಯಲ್ಲಿ ವ್ಯಕ್ತಿತ್ವ ಅವಿಭಾಜ್ಯ ತತ್ತ್ವ. ಜರ್ಮನ್ ದೇಶದಲ್ಲಿ ಆರಂಭವಾದ ಈ ಅನುಸಂಧಾನ ಪದ್ಧತಿ ' ಈ ಮನುಷ್ಯ ಎಂಥವನು ? ' ಎಂಬ ಸಮಸ್ಯೆಯನ್ನು ಮುಂದಿರಿಸಿಕೊಂಡಿದೆ ; ಇವರ ದೃಷ್ಟಿಯನ್ನು ಪೂರ್ಣತಾದೃಷ್ಟಿ ( holistic approach ) ಎನ್ನುತ್ತಾರೆ. ಈ ದೃಷ್ಟಿಗೆ ವಿರುದ್ಧವಾಗಿ ವ್ಯಕ್ತಿತ್ವದಲ್ಲಿ ವಿವರಗಳೂ ಘಟಕಗಳೂ ಮುಖ್ಯ, ವ್ಯಕ್ತಿತ್ವವನ್ನು ಹೀಗೆ ವಿಭಜಿಸುವುದು

ಸಾಧ್ಯ ಎಂದು ಕೆಲವರು ವಾದಿಸಿದರು. ಇವರು ಬೇರೆ ಬೇರೆ ವಿವರಗಳನ್ನು ಬಿಡಿ ಬಿಡಿಯಾಗಿ ಮಾಪನ ಮಾಡುವ ಪದ್ಧತಿಯನ್ನು ಬೆಳೆಸಿದರು. ಇವರ ದೃಷ್ಟಿಗೆ 'ಘಟಕ ದೃಷ್ಟಿ' (trait approach) ಎಂದು ಹೆಸರು. ಮೇಲೆ ಹೇಳಿದ ಮೂಲ-ಭೂತ ವಿವರಗಳನ್ನು ಪರಿಶೀಲನೆ ಮಾಡಿದ ಥರ್ಸ್‌ಟನ್ ಮೊದಲಾದವರು ಹಿಡಿದ ಪದ್ಧತಿ ಇದೇ. ಎರಡೂ ದೃಷ್ಟಿಗಳಿಗೆ ಮಧ್ಯವರ್ತಿಯಾಗಿ ವ್ಯಕ್ತಿತ್ವವು ಪೂರ್ಣವೇ ಆದರೂ ಅವಿಭಾಜ್ಯವಾದುದಲ್ಲ, ಸಮಷ್ಟಿಯನ್ನು ವಿಶ್ಲೇಷಣ ಮಾಡಿ ಅಂಗಭೂತವಾದ ಘಟಕಗಳನ್ನು ಪಡೆಯುವುದು ಸಾಧ್ಯ ಎಂದು ಹೇಳುವವರಿದ್ದಾರೆ. ಇವರು ವ್ಯಕ್ತಿತ್ವವನ್ನು ಅನುಸಂಧಾನ ಮಾಡುವಾಗ ವಿಕ್ಷೇಪಪದ್ಧತಿ (projective method) ಯನ್ನು ಬಳಸುತ್ತಾರೆ.

೪

## ಸಂವಿಧಾನ ವಿಮರ್ಶೆ

ವ್ಯಕ್ತಿತ್ವವನ್ನು ಅಧ್ಯಯನ ಮಾಡುವಾಗ ಘಟಕಗಳಿಗೆ, ವಿವರಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟು ಅವನ್ನು ತಿಳಿಯಲು, ಅಳೆಯಲು ಯತ್ನಿಸುವುದು ಒಂದು ಸಂವಿಧಾನ. ವ್ಯಕ್ತಿತ್ವದ ಹಲವಾರು ಮುಖಗಳನ್ನು, ಅಂಶಗಳನ್ನು ವಿಚಾರ ಮಾಡುವಾಗ ಅವು ಮೇಲ್ಮೈ ವಿವರಗಳೋ (surface aspects) ಅಥವಾ ಆಳದ ವಿವರಗಳೋ (depth factors) ಎಂದು ನಿರ್ಧರಿಸಬೇಕು. ಒಂದು ವಿವರವನ್ನು ಅಥವಾ ಒಂದೇ ಜಾತಿಗೆ ಸೇರಿದ ಕೆಲವು ವಿವರಗಳನ್ನು ಪರೀಕ್ಷೆಗೆ ಒಳಪಡಿಸುತ್ತಾರೆ. ಇಂಥ ವ್ಯಕ್ತಿತ್ವ ವಿವರಪರೀಕ್ಷೆಗಳಲ್ಲಿ ಮಿನೆಸೋಟ - ಅನೇಕಮುಖ-ವ್ಯಕ್ತಿತ್ವ ಪ್ರಣಾಳಿಕೆ (Minnesota Multiphasic Personality Inventory, MMPI) ಮುಖ್ಯವಾದುದು. ಇದರಲ್ಲಿ ಮಾನಸಿಕ ರೋಗಕ್ಕೆ ಸಂಬಂಧಪಟ್ಟ ವಿಕಾರಗಳ ಕಡೆ ಒಲುವಿರುವ ವಿವರಗಳನ್ನು ವ್ಯಕ್ತಿ ಓದಿ ಒಂದೊಂದು ವಿವರವನ್ನೂ "ನಿಜ", "ಸುಳ್ಳು", "ಹೇಳಲಾಗುವುದಿಲ್ಲ" ಎಂದು ವರ್ಗೀಕರಣ ಮಾಡುವುದು ಈ ಪ್ರಣಾಳಿಕೆಯ ಮುಖ್ಯ ಲಕ್ಷಣ. ಎಸ್. ಆರ್. ಹಾಥವೇ (S. R. Hatheway) ಮತ್ತು ಜೇ. ಸಿ. ಮಕ್ಕಿನ್ಲೆ (J. C. Mckinley) ಎಂಬುವರು ಮಿನೆಸೋಟ ವಿಶ್ವವಿದ್ಯಾನಿಲಯದಲ್ಲಿ ಸಿದ್ಧಪಡಿಸಿದ ಈ ಪ್ರಣಾಳಿಕೆಯಲ್ಲಿ ೫೫೦ ವಿವರಗಳಿವೆ. ಪ್ರಣಾಳಿಕೆಗಳಲ್ಲದೆ ಪ್ರಶ್ನಾವಳಿಗಳನ್ನೂ (questionnaires) ಬಳಸುವ ವಾಡಿಕೆಯಿದೆ.

ಪ್ರಶ್ನಾವಳಿಗಳಲ್ಲಿಯೂ ವಿವರಗಳ ಕಡೆ ಲಕ್ಷ್ಯ ಹೆಚ್ಚು. ವ್ಯಕ್ತಿತ್ವದಲ್ಲಿ ವಿಕಾರ ಮೊದಗಿದಾಗ ಯಾವ ವಿವರಗಳು ವಿಕೃತವಾಗಿ ಉಳಿದವನ್ನು ಕೂಡ ಈ ಪ್ರಭಾವದಲ್ಲಿ ಸಿಕ್ಕುವಂತೆ ಮಾಡಿವೆ ಎಂಬುದನ್ನು ಕಂಡುಹಿಡಿಯಲು ವ್ಯಕ್ತಿಯ ಅನುಭವ, ಶೈಶವ ವಿಕಾಸ, ಮನೋವೃತ್ತಿ, ಅಭಿರುಚಿ, ಇವುಗಳನ್ನು ಒಳಗೊಂಡ ಹಲವಾರು ಪ್ರಶ್ನೆಗಳನ್ನು ಹೆಣೆದು ಇವುಗಳಿಗೆ ವ್ಯಕ್ತಿ ಕೊಡುವ ಉತ್ತರವನ್ನು ಸಂಖ್ಯಾನ ಶಾಸ್ತ್ರದ ನೆಲೆಯಲ್ಲಿ

ವಿಶ್ಲೇಷಣ ಮಾಡಿ ವಿಕಾರಹೇತುವನ್ನೂ ವ್ಯಕ್ತಿತ್ವದ ಅಂಕುಡೊಂಕನ್ನೂ ನಿರ್ಧರಿಸುತ್ತಾರೆ, ಪ್ರಶ್ನಾವಳಿಯ ಪ್ರಶ್ನೆಗಳಿಗೆ "ಹೌದು", "ಅಲ್ಲ" ಎಂದು ಉತ್ತರ ಕೊಡುವುದೂ, "ಯಾವಾಗಲೂ," "ಅನೇಕ ವೇಳೆ", "ಕೆಲವು ವೇಳೆ", "ಯಾವಾಗಲೋ ಒಮ್ಮೆ", "ಯಾವಾಗಲೂ ಇಲ್ಲ" ಎಂದು ವರ್ಗಗಳಲ್ಲಿ ಉತ್ತರವನ್ನು ಸೂಚಿಸುವುದೂ ವಿಧಾನಗಳು.

ವ್ಯಕ್ತಿತ್ವದ ಪರೀಕ್ಷೆಯಲ್ಲಿ ತುಂಬ ಪ್ರಸಿದ್ಧವಾದ ಸಂವಿಧಾನವೆಂದರೆ ವಿಕ್ಷೇಪ ಪದ್ಧತಿ ( projective method ). ೧೮೯೪ ರಲ್ಲಿ ಸಿಗ್ಮಂಡ್ ಫ್ರಾಯ್ಡನು ಇದನ್ನು ತನ್ನ ಮಾನಸಿಕ ರೋಗ ಚಿಕಿತ್ಸೆಯ ಅಂಗವಾಗಿ ಬಳಸಿದನು. ತನ್ನದೇ ಆದ ಬಯಕೆಗಳನ್ನೂ ಆತಂಕಗಳನ್ನೂ ಆವರಣದ ಮೇಲೆ, ಇತರರ ಮೇಲೆ ಹೊರಿಸುವುದು ವಿಕ್ಷೇಪವೆನಿಸಿಕೊಳ್ಳುತ್ತದೆ. ವ್ಯಕ್ತಿ ಇವು ತನ್ನದೇ ಪ್ರವೃತ್ತಿಗಳು, ತನ್ನದೇ ಆತಂಕಗಳು ಎಂದು ತಿಳಿಯದಂತೆ, ಮುಂದಿರುವ ಅಸ್ಪಷ್ಟವಾದ ಮತ್ತು ಅನಿರ್ದಿಷ್ಟವಾದ ಪ್ರಚೋದಕ ಸಾಮಗ್ರಿಗಳಿಗೆ ಪ್ರತಿಕ್ರಿಯೆ ಮಾಡುವಾಗ ಅವನ್ನು ಅದರ ಮೇಲೆ ಹೊರಿಸುತ್ತಾನೆ. ಮಸಿಮಚ್ಚೆ ಅಯತ್ನವಾಗಿ ಒದಗುವ ಪ್ರಚೋದಕ ಸಾಮಗ್ರಿ. ಅದನ್ನು ನೋಡಿದಾಗ ಒಳಗೆ ಒತ್ತಡವಿರುವ ವ್ಯಕ್ತಿ ಮಸಿಮಚ್ಚೆಯನ್ನು ತನ್ನ ವ್ಯಕ್ತಿತ್ವದ ಆತಂಕಕ್ಕೆ ಸರಿಯಾಗಿ ಕಾಣುತ್ತಾನೆ. ಇದರಲ್ಲಿ ಒಂದು ಸಂದರ್ಭವನ್ನು ಕಾಣುತ್ತಾನೆ ; ಮಚ್ಚೆಯ ಓರೆಕೋರೆಗಳಲ್ಲಿ ವ್ಯಕ್ತಿಗಳನ್ನೂ ಚಲನವಲನಗಳನ್ನೂ ಕಾಣುತ್ತಾನೆ. ಪ್ರತಿ ವ್ಯಕ್ತಿಯೂ ತನ್ನ ಅಂತರಾಳದಲ್ಲಿ ಹುದುಗಿದ ಪ್ರವೃತ್ತಿಗಳಿಗೆ ಅನುಸಾರವಾಗಿ ಹೀಗೆ ಪ್ರಸಂಗಗಳನ್ನೂ, ಸಂದರ್ಭಗಳನ್ನೂ ಕಾಣುವುದು ಸಹಜ. ಒಂದೇ ಪ್ರಚೋದಕ ಸಾಮಗ್ರಿಯಾದರೂ ಒಬ್ಬೊಬ್ಬ ವ್ಯಕ್ತಿಯ ಪ್ರತಿಕ್ರಿಯೆ ಒಂದೊಂದು ಬಗೆಯದು ; ಪ್ರತಿಯೊಂದು ಪ್ರತಿಕ್ರಿಯೆಯೂ ವ್ಯಕ್ತಿಯ ಸ್ವಭಾವ, ಪ್ರವರ್ತನೆ, ಆತಂಕಗಳಿಂದಲೇ ಅರ್ಥಪೂರ್ಣವಾಗುತ್ತದೆ. ನಮ್ಮ ಒಂದೊಂದು ವರ್ತನೆಯಲ್ಲಿಯೂ ಆಂತರಿಕ ವಿವರಗಳು ಹೊರಹೊಮ್ಮುತ್ತವೆ. ನಾವು ಸಿಟ್ಟುಗೊಂಡಾಗ, ಸಂತೋಷವಾಗಿದ್ದಾಗ, ಆತಂಕಗೊಂಡಾಗ ನಮ್ಮ ಮುಖದಲ್ಲಿಯೂ ಮಾತಿನಲ್ಲಿಯೂ ನಡತೆಯಲ್ಲಿಯೂ ಇದು ಕಾಣುತ್ತದೆ. ಪ್ರಯೋಗ ಸಂದರ್ಭದಲ್ಲಿ ಪ್ರಚೋದನೆಯನ್ನು ನಿರ್ದಿಷ್ಟಗೊಳಿಸಿದಾಗ ಪ್ರತಿಕ್ರಿಯೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಆಂತರಿಕ ಕಾರಣವನ್ನು ಕಂಡುಹಿಡಿಯು ವುದು ಸಾಧ್ಯ. ವಿಕ್ಷೇಪ ಸಂವಿಧಾನವನ್ನು ಅನುಸರಿಸಿರುವ ಪರೀಕ್ಷೆಗಳು ಈ ತತ್ತ್ವವನ್ನು ಅನುಸರಿಸಿ, ಸಾಮಗ್ರಿಗೆ ಪ್ರತಿಕ್ರಿಯೆಯನ್ನು ಮಾಡುವಾಗ ವ್ಯಕ್ತಿ ತನ್ನ ಒಳಗಿರುವ ಮಾನಸವಿಕಾರಗಳನ್ನು ಹೊರಗೆಡಹುತ್ತಾನೆ ಎಂದು ನಂಬುತ್ತವೆ. ಸಾಮಾನ್ಯ ವ್ಯಕ್ತಿಗಳ ವ್ಯಕ್ತಿತ್ವವನ್ನು ನಿರ್ಧರಿಸುವುದಕ್ಕಿಂತ ಹೆಚ್ಚಾಗಿ ವಿಕ್ಷೇಪ ಪದ್ಧತಿಯ ಪರೀಕ್ಷೆಗಳು ಮನೋವಿಕಾರದ ಸಂದರ್ಭದಲ್ಲಿ ಉಪಯೋಗಕ್ಕೆ ಬಂದಿವೆ.

ಹೆರ್‌ಮನ್ ರೋರ್‌ಷಾಕ್ (Rorschach) ಎನ್ನುವ ಜರ್ಮನ್ ಮನೋ ರೋಗ ಚಿಕಿತ್ಸಕ ಮಸಿಮಚ್ಚೆ ( ink-blots ) ಗಳನ್ನು ೧೯೨೧ ರಲ್ಲಿ ಬಳಸಿ ವ್ಯಕ್ತಿತ್ವದ

ವಿರುಪೇರುಗಳನ್ನು ವಿಶ್ಲೇಷಣ ಮಾಡುವ ಸಂವಿಧಾನವನ್ನು ಬೆಳೆಸಿದನು. ಇದು ಅವನ ಹೆಸರಿನಿಂದಲೇ ಪ್ರಸಿದ್ಧವಾಗಿದೆ. ಪ್ರಚೋದಕ ಸಾಮಗ್ರಿ ಇಲ್ಲಿ ತೀರ ಅನಿರ್ದಿಷ್ಟವಾದುದು ; ಮಸಿಮುಚ್ಚೆಗಳು ಪ್ರಯತ್ನಪೂರ್ವಕವಾಗಿ ಆದುವಲ್ಲ, ಆಕಸ್ಮಿಕ ವ್ಯಾಪಾರದಿಂದ ಆದುವು. ( ಚಿತ್ರ-೧೪ ).

ಮಸಿಮುಚ್ಚೆಗಳನ್ನು ಮಾನಸ ಪರೀಕ್ಷೆಗೆ ಬಿನೇ ಮತ್ತು ಹೆನ್ರಿ ಇವರು ೧೮೯೫ರಷ್ಟು ಹಿಂದೆಯೇ ಬಳಸಿದ್ದರು. ಗಾಲ್ಟನ್ ಎಂಬ ವಿಜ್ಞಾನಿಯು ಸ್ವೇಚ್ಛಾ ಸಂಯೋಜನೆ ( free association ) ಯ ಸಂವಿಧಾನವನ್ನು ಬಳಸಲು ಆರಂಭಿಸಿದವನು. ಸಿಗ್ಮಂಡ್ ಫ್ರಾಯ್ಡನು ಇದೇ ಸಂವಿಧಾನವನ್ನು ವಿಕ್ಷೇಪ ಪದ್ಧತಿಯಾಗಿ ತನ್ನ ಬಳಿ ಬಂದ ಮನೋರೋಗಿಗಳ ಜಾಡ್ಯದ ಸುಪ್ತನೆಲೆಯ ವಿವರಗಳನ್ನು ಅರಿಯಲು ಅಳವಡಿಸಿಕೊಂಡನು. ವಿಕ್ಷೇಪ ಪದ್ಧತಿಯ ಪ್ರಯೋಜನವನ್ನು ಗ್ರಹಿಸಿದವರಲ್ಲಿ ಫ್ರಾಯ್ಡನೇ ಮೊದಲಿಗ. ಅನಂತರ ಕಾರ್ಲ್‌ಯೂಂಗನು ೧೯೦೪ ರ ಸುಮಾರಿಗೆ ನಿರ್ದಿಷ್ಟ ಪ್ರೇರಕ ಪದಗಳನ್ನು ಪ್ರಚೋದನೆಗಾಗಿ ಬಳಸಿ ಸ್ವೇಚ್ಛಾ ಸಂಯೋಜನೆಯ ಕ್ರಮವನ್ನು ಪುಷ್ಟಿಪಡಿಸಿದನು. ೧೯೩೫ ರ ಸುಮಾರಿಗೆ ಮೋರ್ಗನ್ ಮತ್ತು ಮರ್ರೆ ಎಂಬಿಬ್ಬರು ಮನೋವಿಜ್ಞಾನಿಗಳು ವಿಷಯಸಂಜ್ಞಾನಪರೀಕ್ಷೆ ( thematic apperception test ) ಯನ್ನು ಸಿದ್ಧಪಡಿಸಿದರು. ಜಿ. ಸ್ಟಾನ್ಲಿ ಹಾಲ್ ಎಂಬ ಮನೋವಿಜ್ಞಾನಿ ೧೯೦೭ ರಲ್ಲಿಯೇ ಚಿತ್ರಗಳ ಮೇಲೆ ಮಕ್ಕಳ ಕಥೆಗಳನ್ನು ಪಡೆಯುವ ಪ್ರಯೋಗ ನಡೆಸಿದ್ದನು. ಇದರಲ್ಲಿ ಅಸ್ಪಷ್ಟವಾದ ಚಿತ್ರಗಳಿದ್ದು ಒಂದೊಂದರಲ್ಲೂ ಅನಿರ್ದಿಷ್ಟವಾದ ಸಂದರ್ಭಗಳನ್ನು ಅಳವಡಿಸಿ ಅವುಗಳನ್ನು ನೋಡಿದ ವ್ಯಕ್ತಿ ಅವುಗಳ ಮೇಲೆ ಕಥೆಯೊಂದನ್ನು ಕಟ್ಟುವಂತೆ ಸೂಚಿಸುತ್ತಾರೆ. ಕಥೆಗಳನ್ನು ಒಂದು ನಿಯತ ಕ್ರಮದಲ್ಲಿ ವಿಶ್ಲೇಷಣ ಮಾಡಿ ವ್ಯಕ್ತಿತ್ವದ ಮೂಲಭೂತ ವಿವರಗಳನ್ನು ಪರೋಕ್ಷವಾಗಿ ಹೊರತೆಗೆಯುತ್ತಾರೆ. ಅಪೂರ್ಣ ವಾಕ್ಯಗಳನ್ನು ಕೊಟ್ಟು ಅವನ್ನು ಪೂರಣ ಮಾಡುವಂತೆ ನಿಯೋಜಿಸುವ ವಾಕ್ಯಪೂರಣ ಪರೀಕ್ಷೆಯೂ ಮುಖ್ಯವಾದುದು.

ಈ ವಿಕ್ಷೇಪ ಪರೀಕ್ಷೆಗಳಲ್ಲಿ ಪ್ರತಿಕ್ರಿಯೆ ಇಂಥದೇ ಇರಬೇಕೆಂಬ ನಿಯಮವಿಲ್ಲ ; ಇದೇ ಉತ್ತರ ಸರಿ ಎನ್ನುವ ನಿರ್ಬಂಧವಿಲ್ಲ. ವ್ಯಕ್ತಿಗೆ ತನಗೆ ತೋರಿದ ಉತ್ತರವನ್ನು ಕೊಡುವ ಸ್ವಾತಂತ್ರ್ಯವಿದೆ; ಯಾವುದೇ ಉತ್ತರವಾದರೂ ವಿಶ್ಲೇಷಣ ಪದ್ಧತಿಯ ದೃಷ್ಟಿಯಿಂದ ಅದು ಮುಖ್ಯವಾದುದೇ. ಉತ್ತರವನ್ನು ಒಗಟಿನಂತೆ ಬಗೆದು ಅದನ್ನು ಬಿಡಿಸುವ ಪ್ರಯತ್ನ ಇಲ್ಲಿದೆ. ಪ್ರಶ್ನಾವಳಿಯಲ್ಲಿದ್ದಂತೆ, ಉಳಿದ ಮಾಪಕ ಪರೀಕ್ಷೆಗಳಲ್ಲಿದ್ದಂತೆ ಒಂದು ಪ್ರಶ್ನೆಗೆ ಒಂದೇ ಉತ್ತರ ಸರಿ, ಉಳಿದದ್ದು ತಪ್ಪು ಎನ್ನುವ ನಿಯಮ ಇಲ್ಲಿಲ್ಲ : ವಿವರಗಳಿಗೆ ಅಂಕಗಳನ್ನು ಕೊಡುವ ಕ್ರಮವೂ ಇಲ್ಲಿಲ್ಲ. ಈ ಸಂವಿಧಾನದ ಉಪಯುಕ್ತತೆಯಿರುವುದು ವಿಶ್ಲೇಷಣ ಪದ್ಧತಿಯಲ್ಲಿ.

ಇದರ ಜೊತೆಯಲ್ಲಿ ವ್ಯಕ್ತಿಯ ಹಿಂದಿನ ವಿವರಗಳನ್ನೂ ಪಡೆದುಕೊಂಡು ಈ ಪರೀಕ್ಷೆಗಳಿಂದ ಬಂದ ದತ್ತಾಂಶಗಳಿಗೂ ಪೂರ್ವ ಚರಿತ್ರೆಯ ವಿವರಗಳಿಗೂ ಸಂಬಂಧ





ಚಿತ್ರ – ೧೫

ಮಸೀಮುಚ್ಚೆ ಚಿತ್ರಗಳು

ಕಲ್ಪಿಸುತ್ತಾರೆ. ವ್ಯಕ್ತಿಚರಿತ್ರೆ (case history) ವ್ಯಕ್ತಿತ್ವದ ಅನುಸಂಧಾನದಲ್ಲಿ ಮುಖ್ಯವಾದ ಪರಿಕರ. ಇದರಲ್ಲಿ ವ್ಯಕ್ತಿಯ ಆನುವಂಶಿಕ ಲಕ್ಷಣಗಳು, ಶೈಶವದ ಘಟನೆಗಳು, ಬಾಲ್ಯದ ಅನುಭವಗಳೂ, ಮನೆಯಲ್ಲಿ, ಶಾಲೆಯಲ್ಲಿ, ನೆರೆಹೊರೆಯಲ್ಲಿ ನಡೆದ ಪ್ರಸಂಗಗಳು, ಪ್ರಚೋದನೆ-ಪ್ರತಿಕ್ರಿಯೆಗಳ ಪ್ರಮುಖ ಪರಂಪರೆ ಇವನ್ನೆಲ್ಲ ವ್ಯಕ್ತಿಯಿಂದಲೇ ಅಥವಾ ಅವನಿಗೆ ನೆನಪಿಲ್ಲದಿದ್ದರೆ ಅಥವಾ ವಿವರಗಳನ್ನು ಕೊಡುವುದು ಸಾಧ್ಯವಿಲ್ಲದಿದ್ದರೆ ಅವನ ಹಿರಿಯರಿಂದ ಜೊತೆಗಾರರಿಂದ ವಿವರಗಳನ್ನು ಸಂಗ್ರಹಿಸಿ ವ್ಯಕ್ತಿಯ ವ್ಯಕ್ತಿತ್ವ ಬೆಳದ ಬಗೆ, ಬೆಳೆಯುವಾಗ ಒದಗಿದ ಘಟಕಗಳು, ವ್ಯಕ್ತಿತ್ವದ ವಿಕಾರಕ್ಕೆ, ಅಥವಾ ವೈಶಿಷ್ಟ್ಯಕ್ಕೆ ಅವನ ಬಾಳಿನಲ್ಲಿಯೇ ಒದಗಿದ ಕಾರಣಗಳು, ಅವನ ಸಂಸಾರಪ್ರವೃತ್ತಿ, ನಡತೆ, ಮನೋವೃತ್ತಿ, ಮುಂತಾದ ವಿವರಗಳನ್ನು ಮನೋವಿಜ್ಞಾನಿ ಪಡೆದು ಅವನ ವೈಯಕ್ತಿಕ ಇತಿಹಾಸವನ್ನು ಪುನರ್ನಿರ್ಮಾಣಮಾಡಲೆತ್ನಿಸುತ್ತಾನೆ. ಇದು ವ್ಯಕ್ತಿತ್ವದ ಅನುಸಂಧಾನದಲ್ಲಿ ಅವಶ್ಯವಾದ ಅಂಗವೆಂದು ಸರ್ವಸಮ್ಮತವಾಗಿದೆ.

ಅಂತೂ ಮಾನವ ಜೀವನದಲ್ಲಿ ವ್ಯಕ್ತಿತ್ವದ ಪ್ರಾಮುಖ್ಯತೆಯನ್ನು ಮನಃಶಾಸ್ತ್ರ ಸ್ಪಷ್ಟಪಡಿಸಿದೆ. ಅದನ್ನು ಅರಿಯಲು ವೈಜ್ಞಾನಿಕ ಪದ್ಧತಿಗಳನ್ನು ಬಳಸಿ ಸ್ವಾರಸ್ಯವಾದ ಅಂಶಗಳನ್ನು ಹೊರತೆಗೆಯಲು ಮನಃಶಾಸ್ತ್ರ ನೆರವಾಗಿದೆ. ಮನಃಶಾಸ್ತ್ರದ ಎಲ್ಲ ವಿವರಗಳನ್ನೂ ವ್ಯಕ್ತಿತ್ವದ ನೆಲೆಯಲ್ಲಿಯೇ ಪರಿಶೀಲನೆಮಾಡುವ ಕ್ರಮ ಈಗೀಗ ಮೈದಳೆದು ಜನಪ್ರಿಯವಾಗುತ್ತಿದೆ. 'ನಿನ್ನನ್ನೇ ಅರಿತುಕೋ' ಎನ್ನುವ ಪ್ರಾಚೀನ ಉಪದೇಶವನ್ನು ಮನಃಶಾಸ್ತ್ರ ಮನ್ನಿಸಿ ವ್ಯಕ್ತಿತ್ವದ ಅನುಸಂಧಾನದಲ್ಲಿ ತನ್ನೆಲ್ಲ ಸಾಧನಗಳನ್ನೂ ಅಳವಡಿಸಿ, ವ್ಯಕ್ತಿಯನ್ನು ಅರಿಯಲು ನೆರವಾಗಿದೆ.

## ಪರಿಚ್ಛೇದ ಹದಿಮೂರು

# ಪರಾಮಾನಸಶಾಸ್ತ್ರ

೧

**ಅದ್ಭುತ ಅನುಭವ**

ಮನುಷ್ಯನ ಜ್ಞಾನ ಬೆಳೆದಂತೆ ಜಗತ್ತಿನಲ್ಲಿ ಅದ್ಭುತ ಎನ್ನುವುದು ಮರೆಯಾಗುತ್ತಿದೆ. ಆದರೂ ಸೋಜಿಗದ, ಕೌತುಕದ ವಿವರಗಳಿಗೇನೂ ಕೊರತೆಯಿಲ್ಲ; ನಿದರ್ಶನಕ್ಕೆ ಒಂದು ಪ್ರಸಿದ್ಧವಾದ ಪ್ರಸಂಗವನ್ನು ನೋಡಿ. ಇಮಾನ್ಯುಯಲ್ ಸ್ವೀಡನ್‌ಬೊರ್ಗ್ ವಿಶ್ವವಿಖ್ಯಾತನಾದ ದಾರ್ಶನಿಕ. ಆತ ೧೭೫೯ರಲ್ಲಿ ಗ್ಯೋಟನ್‌ಬೊರ್ಗ್ ಎಂಬ ಊರಿನಲ್ಲಿದ್ದಾಗ ಅವನಿಗೆ ಒಂದು ವಿಚಿತ್ರವಾದ ಅನುಭವವಾಯಿತು. ಅಲ್ಲಿಗೆ ಮುನ್ನೂರು ಮೈಲು ದೂರದಲ್ಲಿದ್ದ ಸ್ಟಾಕ್‌ಹೋಂ ನಗರದಲ್ಲಿ ಒಬ್ಬಾನೊಬ್ಬ ಗೃಹಸ್ಥನ ಮನೆಗೆ ಬೆಂಕಿ ಬಿದ್ದಂತೆ ಅವನಿಗೆ ಅರಿವಾಯಿತು. ಅರಿವಾದದ್ದು ಮಾತ್ರವಲ್ಲ, ಅದು ಯಾರ ಮನೆ, ಯಾವ ಬೀದಿ, ಬೆಂಕಿ ಹೇಗೆ ಉರಿಯುತ್ತಿದೆ, ಅದರಿಂದಾದ ನಷ್ಟ ಎಷ್ಟು, ಅದನ್ನು ಆರಿಸಿದ್ದು ಹೇಗೆ, ಇಷ್ಟೂ ಅವನ ಕಣ್ಣಿಗೆ ಕಟ್ಟಿದಂತೆ ನಡೆಯಿತು. ಒಡನೆಯೇ ಆತ ತಾನಿದ್ದ ಊರಿನ ಅಧಿಕಾರಿಗಳಿಗೆ ತಾನು ಕಂಡುದನ್ನು ತಿಳಿಸಿದ. ಮುನ್ನೂರು ಮೈಲು ದೂರದಲ್ಲಿ ನಡೆಯಿತೆಂದು ಸ್ವೀಡನ್‌ಬೊರ್ಗ್ ಹೇಳಿದ ಕಥೆಯನ್ನು ಅವರು ನಂಬಲಿಲ್ಲ. ಆದರೆ ನಾಲ್ಕೈದು ದಿನಗಳನಂತರ ಸ್ಟಾಕ್‌ಹೋಂ ನಗರದ ಅಧಿಕಾರಿಗಳು ಅಲ್ಲಿ ನಡೆದ ಬೆಂಕಿ ದುರಂತವನ್ನು ಪ್ರಕಟಿಸಿ

ದರು ; ಅವರು ಕೊಟ್ಟ ವಿವರಗಳೂ ಸ್ವೀಡನ್‌ಬೋರ್ಗ್ ನೋಡಿದ ವಿವರಗಳೂ ತೀರ ಸದೃಶವಾಗಿದ್ದುವು !

ಇನ್ನೊಂದು ಪ್ರಸಂಗ. ಹತ್ತು ವರ್ಷದ ಹುಡುಗಿಯೊಬ್ಬಳು ಒಮ್ಮೆ ಯಾವುದೋ ಪುಸ್ತಕವನ್ನೋದುತ್ತ ಬೀದಿಯಲ್ಲಿ ಹೋಗುತ್ತಿದ್ದಳು. ಅವಳಿಗೆ ಇದ್ದಕ್ಕಿದಂತೆ ಸುತ್ತಲಿನ ವಿವರಗಳೆಲ್ಲ ಮಂಜು ಮಂಜಾಗಿ, ತನ್ನ ಮನೆಯ ಒಂದು ಕೋಣೆಯಲ್ಲಿ ತನ್ನ ತಾಯಿ ಸತ್ತುಬಿದ್ದಿದ್ದಂತೆ ಗೋಚರವಾಯಿತು. ಆ ಕೋಣೆಯನ್ನು ಮನೆಯಲ್ಲಿ ಯಾರೂ ಬಳಸುತ್ತಿದ್ದಿಲ್ಲ ; ಹುಡುಗಿ ಮನೆಯಿಂದ ಹೊರಡುವಾಗ ಆರೋಗ್ಯವಾಗಿಯೇ ಇದ್ದ ತಾಯಿ ತಾನೂ ಹೊರಗೆ ಹೋಗಲು ಸಿದ್ಧವಾಗುತ್ತಿದ್ದಳು. ಆದುದರಿಂದ ಹುಡುಗಿ ತಾನು ನೋಡಿದುದನ್ನು ನಂಬಲಿಲ್ಲ. ಆದರೆ ಆ ದೃಶ್ಯ ಸ್ಪಷ್ಟವಾಗಿದ್ದುದರಿಂದ ಹೇಗೂ ಇರಲಿ ಎಂದುಕೊಂಡು ಒಬ್ಬ ವೈದ್ಯನ ಮನೆಗೆ ಹೋಗಿ ಅವನನ್ನು ಕರೆದು ಕೊಂಡು ತನ್ನ ಮನೆಗೆ ಬಂದಳು. ಅವರು ಬಾಗಿಲ ಬಳಿ ಬಂದುದೂ ಹುಡುಗಿಯ ತಂದೆ ಮನೆಗೆ ಹಿಂದಿರುಗಿದುದೂ ಸರಿಯಾಯಿತು. ವೈದ್ಯ ಬಂದುದನ್ನು ನೋಡಿ, ತಂದೆ, "ಯಾರಿಗೆ ಏನಾಗಿದೆ ?" ಎಂದು ಕೇಳಿದನು. ಹುಡುಗಿ ತಾನು ಕಂಡುದನ್ನು ತಿಳಿಸಿದಳು. ಮೂವರೂ ಮನೆಯ ಒಳಗೆ ಹೋಗಿ ಹುಡುಗಿ ತಿಳಿಸಿದ ಕೋಣೆಗೆ ಬಂದರು. ಅಲ್ಲಿ ಅವಳ ತಾಯಿ, ಹುಡುಗಿ ಕಂಡಂತೆಯೇ ಪ್ರಜ್ಞೆ ತಪ್ಪಿ ಬಿದ್ದಿದ್ದಳು. ಹೃದಯಾಘಾತವೆಂದು ವೈದ್ಯ ಪರೀಕ್ಷಿಸಿ ತಿಳಿಸಿದನು. ಅಲ್ಲಿಯವರೆಗೆ ಆಕೆ ದೃಢಯಾಗಿ ಳಾಗಿಯೇ ಇದ್ದಳು ; ಇದಾದುದು ಹೇಗೆ ಎಂದು ಯಾರಿಗೂ ಊಹಿಸಲು ಸಾಧ್ಯ ಇರಲಿಲ್ಲ. ಅದಲ್ಲದೆ, ಸಾಮಾನ್ಯವಾಗಿ ಬಳಸದ ಕೋಣೆಗೆ ಆಕೆ ಅಂದು ಹೋಗುವಳೆಂದು ಹುಡುಗಿ ನಿರೀಕ್ಷಿಸಲು ಸಾಧ್ಯವಿರಲಿಲ್ಲ. ಆದರೆ ವಾಸ್ತವವಾಗಿ ದೃಶ್ಯ ಹುಡುಗಿ ಕಂಡಂತೆಯೇ ಇದ್ದಿತು !

- 09461

ಇಂಥ ಕಥೆಗಳನ್ನು ನಾವೆಲ್ಲ ಕೇಳಿಯೇ ಇದ್ದೇವೆ. ಸರಳ ಸ್ವಭಾವದವರು ಎಲ್ಲವನ್ನೂ ನಂಬಿಬಿಡುತ್ತಾರೆ; ನಾಗರಿಕತೆಯಿಂದ ಕರ್ಕಶರಾದವರು 'ಅಡಗೂಲಜ್ಜಿ ಕಥೆ'ಗಳೆಂದು ತಳ್ಳಿಬಿಡುತ್ತಾರೆ. ವಿಚಾರಪರರಾದವರು 'ಸಾಧ್ಯ, ಆದರೆ ಅಸಂಭವ' ಎನ್ನಬಹುದು. ನಾವು ಕೇಳುವ ಕಥೆಗಳಲ್ಲಿ ತಥ್ಯಾಂಶವೆಷ್ಟು 'ಸ್ವಕಪೋಲ ಕಲ್ಪಿತ' ವಿವರಗಳು ಎಷ್ಟು ಎಂದು ನಿರ್ಧರಿಸುವುದು ಕಷ್ಟ. ನಡೆದ ಪ್ರಸಂಗವನ್ನು ನಡೆದಂತೆಯೇ ನಿರೂಪಣೆ ಮಾಡಲು ಎಲ್ಲರಿಗೂ ಸಾಧ್ಯವಿಲ್ಲ ; ತಾವು ಕೇಳಿದುದನ್ನು ಕೇಳಿದಂತೆಯೇ ಹೇಳುವುದೂ ಒಂದು ಬಗೆಯ ಸಾಮರ್ಥ್ಯ ವಿಶೇಷ, ಬೇಕೆಂದು ನಾವು ಕಲ್ಪನೆಗಳನ್ನು ಸೇರಿಸುತ್ತೇವೆ ಎಂದಲ್ಲ, ನಮ್ಮ ಅರಿವು ಇಲ್ಲದೆಯೇ ಇರುವ ಕೆಲವು ವಿವರಗಳು ಜಾರಿ ಕೊಂಡು ಇಲ್ಲದ ಕೆಲವು ಸೇರಿಬಿಡುತ್ತವೆ. ಮನಸ್ಸಿನ ವ್ಯಾಪಾರವೇ ಹಾಗೆ.

ಮೇಲೆ ಹೇಳಿದ ಎರಡು ಕಥೆಗಳು ದೂರದರ್ಶನ (clairvoyance) ಕ್ಕೆ ಸಂಬಂಧಿಸುವುದು. ನಮಗೆ, ನಿಮಗೆ ನಿತ್ಯಜೀವನದಲ್ಲಿ ಸಾಧ್ಯ, ಸಾಮಾನ ಎನಿಸುವಂಥ

ಪ್ರಸಂಗಗಳಲ್ಲ ಅವು. ಕೆಲವರಿಗೆ ಸಾಮಾನ್ಯವಾಗಿ, ಹಲವರಿಗೆ ಒಂದೊಂದು ವೇಳೆ ಇಂಥ ಸಂಗತಿಗಳು ಕೈಗೂಡುವುದುಂಟು. ಯಾವುದಾದರೊಂದು ವಿಷಮ ಸಂದರ್ಭದಲ್ಲಿ ಮನಸ್ಸು ಉದ್ವಿಗ್ನವಾಗಿದ್ದಾಗ, ಹೃದಯ ಕಾತರವಾಗಿದ್ದಾಗ ಮುಂದೆ ನಡೆಯುವುದು ಹೇಗೋ ನಮಗೆ ತಿಳಿದುಬಿಡುತ್ತದೆ. ಇದು ಹಲವರ ಅನುಭವದಲ್ಲಿದೆ. ಭವಿಷ್ಯವು ಕೇವಲ ಮಾನಸಿಕ ಪರಿಕಲ್ಪನೆ, ಊಹೆ ಎನ್ನದಂತೆ 'ಕಣ್ಣಿಗೆ ಕಟ್ಟಿ'ದ್ದಷ್ಟು ಸ್ಪಷ್ಟವಾಗಿ ಮುಂದೆ ನಿಲ್ಲುವುದುಂಟು. ಈ ಭವಿಷ್ಯ ದರ್ಶನ (precognition) ಕೆಲವೊಮ್ಮೆ ಅನುಭವಸಿದ್ಧವಾದರೂ ಅದರ ಕಡೆ ನಾವು ಅಷ್ಟಾಗಿ ಗಮನ ಹರಿಸುವುದಿಲ್ಲ. ಅವನ್ನೆಲ್ಲ ನಂಬಿದರೆ ಹೇಗೋ, ಅವನ್ನು ಬೇರೆಯವರಿಗೆ ಹೇಳಿದರೆ ಅವರು ನಕ್ಕಾರೋ ಏನೋ ಎಂಬ ಅಳುಕು ನಮಗೆ.

ಕೆಲವೊಮ್ಮೆ ಇಂಥ ಅಸಾಧಾರಣ ದರ್ಶನ ಬಲವಾಗಿ ಆತಂಕಕ್ಕೆ ಎಡೆಮಾಡಿ ಕೊಡುತ್ತದೆ; ಅಂಥ ಸಂದರ್ಭಗಳಲ್ಲಿ ಸಮಾಜದ ಸಭ್ಯತೆಯ ಹಿಡಿತ ಸಡಿಲವಾಗಿ ಅನುಭವದಲ್ಲಿ ವಿವಶರಾಗಿ ಪಾಲ್ಗೊಳ್ಳುತ್ತೇವೆ. ಕಳೆದ ಮಹಾ ಯುದ್ಧದ ಸಮಯದಲ್ಲಿ ಇಂಗ್ಲೆಂಡಿನ ಊರೊಂದರಲ್ಲಿ ನಡೆದದ್ದು ಇದು. ಒಂದು ರಾತ್ರಿ (೧೯೪೫ರ ನವೆಂಬರ್ ೧೮ ರಂದು) ಒಬ್ಬಾತ ತನ್ನ ಹೆಂಡತಿ ಅಳುತ್ತಿರುವುದನ್ನು ಕೇಳಿ ಎದ್ದ. ಹೆಂಡತಿ ತಮ್ಮ ಮಗ ಸತ್ತನೆಂದು ಹೇಳಿ ಅಳುತ್ತಿದ್ದಳು. ಆಗ ಮಗ ಯುದ್ಧ ಭೂಮಿಯಲ್ಲೇ ಇದ್ದನಾದರೂ ಅಲ್ಲಿ ಯಾವ ದುರಂತವೂ ನಡೆದ ಸುದ್ದಿ ಇವರಿಗೆ ಬಂದಿರಲಿಲ್ಲ. ಗಂಡ ಅವಳನ್ನು ಸಮಾಧಾನಗೊಳಿಸಲು ಯತ್ನಿಸಿದ; ಆಕೆ ದುರ್ಭರವಾದ ಶೋಕದಿಂದ ಕಂಗಾಲಾಗಿದ್ದಳು. ವೈದ್ಯರಿಗೆ ಹೇಳಿ ಕಳುಹಿಸಿ ನಿದ್ರೆ ಬರುವಂತೆ ಔಷಧಿಯನ್ನು ಕೊಡಿಸಬೇಕಾಯಿತು. ಇದಾದ ಕೆಲವು ದಿನಗಳ ಮೇಲೆ ಮತ್ತೆ ಆಕೆ ಹೀಗೆಯೇ ತನ್ನ ಮಗ ಸತ್ತೇ ಸತ್ತನೆಂದು ಗೋಳಾಡಲು ಆರಂಭಿಸಿದಳು. ಕಾರಣವೇ ಇಲ್ಲದೆ ಹೀಗೆ ಅಳುತ್ತ, ಊಟ ನಿದ್ರೆಗಳನ್ನು ಬಿಟ್ಟು, ಹಟ ಹಿಡಿದು ಕುಳಿತಿದ್ದ ಹೆಂಡತಿಯನ್ನು ಹುಚ್ಚರ ಆಸ್ಪತ್ರೆಗೆ ಸೇರಿಸಬೇಕಾಯಿತು. ಆದರೆ ಇದಾದ ಮರು ದಿನವೇ ಯುದ್ಧರಂಗದಿಂದ ಅವರಿಗೆ ತಮ್ಮ ಮಗ ನವೆಂಬರ್ ೧೭ ರಂದು ಹಠಾತ್ತಾಗಿ ತೀರಿಕೊಂಡನೆಂದು ತಂತೀ ಸಮಾಚಾರ ಬಂದಿತು! ಯುದ್ಧಕ್ಕೆ ಹೋದ ಮಗನ ಬಗ್ಗೆ ತಾಯಿಗೆ ಆತಂಕ ಇರುವುದು ಸಹಜ; ಆದರೆ ದೂರದಲ್ಲಿ ನಡೆದ ದುರ್ಘಟನೆ ಆಕೆಗೆ ಒಡನೆಯೇ ತಿಳಿದದ್ದು ಹೇಗೆ?

ಇಂಥ ನೂರಾರು ಪ್ರಸಂಗಗಳು ಸಾಧಾರವಾಗಿ ಪ್ರಕಟವಾಗಿವೆ. ಅವನ್ನು ಸುಳ್ಳೆಂದು ಬದಿಗೊತ್ತುವ ಹಾಗಿಲ್ಲ. ವಿಶ್ವಾಸಾರ್ಹರಾದ ವಿಜ್ಞಾನಿಗಳೇ ಅವುಗಳನ್ನು ನಿರೂಪಿಸಿರುವ ಸಂದರ್ಭವೂ ಉಂಟು. 'ಲಿವರ್‌ಪೂಲ್ ವಿಶ್ವವಿದ್ಯಾನಿಲಯದಲ್ಲಿ ಭೌತಶಾಸ್ತ್ರದ ಪ್ರಾಧ್ಯಾಪಕನಾಗಿದ್ದ, ಪ್ರಸಿದ್ಧ ವಿಜ್ಞಾನಿ ಆಲಿವರ್ ಲಾಜ್, ಕೇಂಬ್ರಿಜ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಹೆನ್ರಿ ಸಿಜ್‌ವಿಕ್, ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಗಿಲ್‌ಬರ್ಟ್ ಮರ್ರೆ, ಸರ್ ವಿಲಿಯಂ ಬ್ಯಾರೆಟ್, ಜರ್ಮನಿಯ

ವೈದ್ಯ ಕಾರ್ಲ್ ಬ್ರುಕ್, ಫ್ರಾನ್ಸ್ ದೇಶದ ಎಂಜಿನಿಯರ್ ರಿನಿ ವೊರ್‌ಕೊಲಿ, ವಿಜ್ಞಾನಿ ರುಡೊಲ್ಫ್ ಟಿಷ್ನರ್ ಮೊದಲಾದವರು ಇಂಥ ಪ್ರಸಂಗಗಳನ್ನು ನಿರೂಪಿಸಿದ್ದಾರೆ. ಈ ಪ್ರಸಂಗಗಳ ವಿವರಣೆ ಸ್ಪಷ್ಟವಾಗಿಲ್ಲ ಎನ್ನುವಷ್ಟೇ ಕಾರಣದಿಂದ ಪ್ರಸಂಗಗಳೇ ಅಸಂಗತ ಎನ್ನುವಹಾಗಿಲ್ಲ. "ಅಸ್ತೀತಿ ಚೇದ್ವೇದ, ಸಂತಮೇನಂ ತತೋ ವಿದುಃ" ಎನ್ನುವ ಉಪನಿಷತ್ತಿನ ಸೂತ್ರ ಇಲ್ಲಿಯೂ ಮಾನ್ಯವೆ. ಸೋಜಿಗವೆನಿಸಿದರೂ, ವಿಚಿತ್ರವೆನಿಸಿದರೂ ಇಂಥ ಪ್ರಸಂಗಗಳು ನಡೆಯುವುದುಂಟು ಎಂದು ನಾವು ಒಪ್ಪಿಕೊಳ್ಳಬೇಕು. ವಿವರಣೆ ಅಷ್ಟು ಸುಲಭಸಾಧ್ಯವಂತೂ ಅಲ್ಲ. ಸಂಶೋಧನೆ ಹೆಚ್ಚು ಹೆಚ್ಚು ನಡೆದಾಗಲೇ ವಿವರಣೆ ಸ್ಪಷ್ಟವಾಗುವುದು,

**ಪುನರ್ಜನ್ಮದ ಕಲ್ಪನೆ**

ನಮ್ಮ ದೇಶದಲ್ಲಿ ಪುನರ್ಜನ್ಮದ ಕಲ್ಪನೆ ದೃಢವಾಗಿದೆಯಷ್ಟೆ. ಎಲ್ಲ ಧರ್ಮಗಳಲ್ಲೂ ಇದರ ಪ್ರಕ್ರಿಯೆ ಬಳಕೆಯಲ್ಲಿ ಇದೆ ; ಇಸ್ಲಾಂ ಧರ್ಮ ಒಂದು ಇದಕ್ಕೆ ಅಪವಾದ ಎನ್ನಬಹುದು, ಪುನರ್ಜನ್ಮವನ್ನು ತಾತ್ತ್ವಿಕವಾಗಿ ನಂಬಿದರೂ, ವಾಸ್ತವವಾಗಿ ಅದು ಜರುಗುತ್ತದೆ ಎನ್ನಲು ಆಧಾರ ಸಾಲದು ಎಂದೇ ವಿದ್ವಾಂಸರ ಅಭಿಪ್ರಾಯ. ಸತ್ತು, ಮರಳಿ ಜೀವಲೋಕಕ್ಕೆ ಬಂದು ಮರಣಾನಂತರದ ಸ್ಥಿತಿಯನ್ನು ಹೇಳಬಲ್ಲವರು ಯಾರೂ ಇಲ್ಲ. ಸತ್ತವನು ಮತ್ತೆ ಜನ್ಮವೆತ್ತಿ ಹಿಂದಿನದನ್ನೆಲ್ಲ ನೆನೆಸಿಕೊಳ್ಳುವುದೂ ಸಾಮಾನ್ಯವಾಗಿ ನಮ್ಮ ಅನುಭವದಲ್ಲಿಲ್ಲ. ಸಾವೆನ್ನುವುದೇ ಅದ್ಭುತ ಸ್ಥಿತಿ ; ಅದರಾಚೆ ಏನಿದೆಯೋ ಯಾರು ಬಲ್ಲರು ? ಧರ್ಮದ ವಿವರಗಳಲ್ಲಿ ಪುನರ್ಜನ್ಮದಲ್ಲಿ ವಿಶ್ವಾಸವೂ ಒಂದು ; ಎಂದೇ ನಾವು ಅದನ್ನು ನಂಬಿದ್ದೇವೆ. ಸತ್ತವರನ್ನು ಎಬ್ಬಿಸಿ ಅವರು ಮತ್ತೆ ಜೀವಂತರಾದವರೊಡನೆ ವ್ಯವಹರಿಸುವಂತೆ ಮಾಡುವುದು ಸಾಧ್ಯ ಎಂದು ಅಧ್ಯಾತ್ಮವಾದಿಗಳು ( spiritualists ) ಹೇಳುತ್ತಾರೆ. ದಿವ್ಯ ಜ್ಞಾನ ( ಅಥವಾ ಥಿಯಾಸಫಿ ) ತನ್ನ ಆರಂಭ ದಿನಗಳಲ್ಲಿ ಹೀಗೆ ಮೃತ ಜೀವಂತ ಸಮಾಗಮವನ್ನು ಒದಗಿಸುವ ರಹಸ್ಯ ಮಂಡಲಗಳನ್ನು ಏರ್ಪಡಿಸುತ್ತಿದ್ದರೂ, ಮೃತಕನಾದ ಜೀವ ತನ್ನ ಅಭಿವ್ಯಕ್ತಿಗೆ ಅನುಕೂಲವೆನಿಸಿದ ಮನುಷ್ಯನ ( medium ) ಮೇಲೆ ಆವಿಷ್ಟನಾಗಿ ಉಳಿದವರಿಗೆ ತನ್ನ ಆಕಾಂಕ್ಷೆ-ಆತಂಕಗಳನ್ನು ತಿಳಿಸುವನೆಂದು ಈ ಮಂಡಲದವರ ನಂಬಿಕೆಯಿದ್ದಿತು. ದೇವತೆ ಅಥವಾ ಭೂತ ಮನುಷ್ಯರ ಮೇಲೆ ಆವೇಶದಂತೆ ಬರುವುದು ಬೇರೆಯ ಮಾತು. ಆದರೆ ಸಾಮಾನ್ಯ ಮನುಷ್ಯ ತೀರಿಕೊಂಡ ಮೇಲೂ ಸಂಸಾರದಲ್ಲಿಯೇ ಉಳಿದುಕೊಳ್ಳುವುದು ಗುಹ್ಯವಾದ ವಿಚಾರವಷ್ಟೆ.

ಸಾವೆನ್ನುವುದು ಜೀವದ ವಿಚ್ಛೇದವಲ್ಲ, ಜೀವವಸ್ತು ಶಾಶ್ವತವಾದುದು ; ಒಂದು ದೇಹವನ್ನು ಬಿಟ್ಟು ಜೀವ ಮತ್ತೊಂದು ದೇಹವನ್ನು ಪಡೆಯುತ್ತದೆ ; ಈ ದೇಹಾಂತರ ಪ್ರಾಪ್ತಿಯಲ್ಲಿ ದೇಹಿಯೆನಿಸಿದ ಜೀವ ಉಳಿದೇ ಇರುತ್ತಾನೆ. ಈ ನಿಲುವನ್ನು ಹೊಂದಿದ ಎಲ್ಲ ಧರ್ಮಗಳೂ ಪುನರ್ಜನ್ಮವನ್ನೂ ನಂಬುತ್ತವೆ. ಪುನರ್‌ಜನ್ಮ ಸಿದ್ಧವಾದ ಮೇಲೆ ಪೂರ್ವಜನ್ಮಸ್ಮೃತಿಯೂ ಸಾಧ್ಯವೇ ಇರಬೇಕು. ಜೈನರ, ಬೌದ್ಧರ ಉಳಿದ

ಹಿಂದುಗಳ ಯೋಗಸಾಧನೆಯಲ್ಲಿ ಆವರಣಗಳು ಕಳಚಿಬಿದ್ದಾಗ ಪೂರ್ವಾನುಸ್ಮೃತಿ ಒದಗುವುದೆಂದು ನಂಬಿಕೆಯಿದೆ. ಆದರೆ ಸಾಧನೆಯಿಲ್ಲದೆಯೇ ಪೂರ್ವಜನ್ಮ ಸ್ಮರಣೆ ಇರುವ ಕೆಲವರು ಬೆಳಕಿಗೆ ಬಂದಿದ್ದಾರೆ. ಆಗಾಗ ವೃತ್ತ ಪತ್ರಿಕೆಗಳಲ್ಲಿ ಇವರ ಕಥೆಗಳು ಪ್ರಕಟವಾಗುತ್ತಿರುತ್ತವೆ. ಅವೆಲ್ಲವೂ ನಿಜವೆಂದು ಸಾಧಿಸಬಾರದು. ಉತ್ಪ್ರೇಕ್ಷೆಗಳು, ಕಲ್ಪನೆಗಳು, ವಿಪರ್ಯಾಸಗಳು ಒದಗಿಬರುವುದು ಸಹಜ. ಆದರೆ ಮೂಲಭೂತವಾಗಿ ಈ ಪೂರ್ವಜನ್ಮ ಸ್ಮೃತಿ ಅಸಂಭವವಲ್ಲವೆಂದು ಸ್ಪಷ್ಟವಾಗಿದೆ.

ಆಗ್ರಾ ನಗರದಲ್ಲಿ ಪೋಸ್ಟ್ ಮಾಸ್ಟರ್ ಆಗಿದ್ದ ಭಾರ್ಗವ ಎಂಬ ಸದ್ಗೃಹಸ್ಥರ ಮಗಳು, ಎರಡು ವರ್ಷ ವಯಸ್ಸಿನ ಮಂಜುಲತಾ, ತಾನು ಇಲ್ಲಿ ಹುಟ್ಟುವ ಮೊದಲು ಧುಲಿಯಾಗಂಜಿನ ಒಂದು ಮನೆಯಲ್ಲಿ ಇದ್ದುದಾಗಿ ಹೇಳಿದಳು. ಆ ಊರಿಗೆ ಅವಳನ್ನು ಕರೆದೊಯ್ದಾಗ ತಾನಿದ್ದ ಮನೆಯನ್ನೂ ಗುರುತಿಸಿದಳು. ಪ್ರತಾಪಸಿಂಹ ಚತುರ್ವೇದಿ ಎನ್ನುವ ವಕೀಲರ ಮನೆ ಅದು. ಮನೆಯಲ್ಲಿನ ಹಲವಾರು ವಿವರಗಳನ್ನು ಹುಡುಗಿ ಖಚಿತವಾಗಿ, ಚಾಚೂ ತಪ್ಪದೆ ತಿಳಿಸಿದಳು. ವಕೀಲರ ತಮ್ಮ ವಿಶ್ವೇಶ್ವರನಾಥನ ಹೆಂಡತಿ ೧೯೫೨ ರಲ್ಲಿ ತೀರಿಕೊಂಡಳೆಂದೂ, ಈ ಹುಡುಗಿ ಅದೇ ಸಮಯದಲ್ಲಿ ಹುಟ್ಟಿದಳೆಂದೂ ತಿಳಿದುಬಂದಿತು. ಕ್ಯೂಬಾಲ್ಲಿದ್ದ ಇನ್ನೊಂದು ಮಗು ನಾಲ್ಕು ವರ್ಷದವನಿದ್ದಾಗಲೇ, ತನ್ನ ಪೂರ್ವಜನ್ಮದ ತಂದೆ ತಾಯಿಯರು, ಅಣ್ಣಂದಿರು, ಮನೆ, ನಡೆದ ಘಟನೆಗಳು ಇವುಗಳ ವಿವರಗಳನ್ನೆಲ್ಲ ಸ್ಪಷ್ಟವಾಗಿ ತಿಳಿಸಿದನು. ಪರಾಮರ್ಶೆ ಮಾಡಿ ನೋಡಿದಾಗ, ವಿವರಗಳೆಲ್ಲ ಸರಿಯಾಗಿದ್ದುವು. ನಾರ್ಥಂಬರ್‌ಲ್ಯಾಂಡಿನ ಪೋಲಾಕ್ ದಂಪತಿಗಳಿಗೆ ಇಬ್ಬರು ಹೆಣ್ಣು ಮಕ್ಕಳಿದ್ದರು. ಒಂದು ದಿನ ಅವರು ಮನೆಗೆ ಬರುತ್ತಿದ್ದಾಗ ಕಾರೊಂದು ಅವರ ಮೇಲೆ ಹರಿದು ಇಬ್ಬರೂ ಸತ್ತರು. ಈ ಘಟನೆಯಾದ ಕೆಲವು ತಿಂಗಳಲ್ಲಿ ಪೋಲಾಕ್‌ನ ಹೆಂಡತಿ ಅವಳಿಜವಳಿ ಹೆಣ್ಣು ಮಕ್ಕಳನ್ನು ಹೆತ್ತಳು. ತಂದೆಗೆ ತನ್ನ ಹಿಂದಿನ ಮಕ್ಕಳೇ ಬರುತ್ತಾರೆ ಎಂದು ಎನಿಸುತ್ತಿದ್ದಿತಂತೆ, ಆದರೆ ಹೇಗೆಂದು ಅವನಿಗೆ ಅರ್ಥವಾಗಲಿಲ್ಲ. ಈ ಅವಳಿಜವಳಿ ಮಕ್ಕಳು ಬೆಳೆದಾಗ ತೀರಿಕೊಂಡ ಮಕ್ಕಳಂತೆಯೆ ಇದ್ದುದು ಸ್ಪಷ್ಟವಾಯಿತು. ಅವಳಲ್ಲಿ ಒಬ್ಬಳಿಗೆ ಮನೆಯಲ್ಲಿದ್ದ ಗೊಂಬೆಯೊಂದನ್ನು ಕೊಡಲು "ಓ, ಇದೇ ನನ್ನ ಮೇರಿ" ಎಂದಳು. ಗೊಂಬೆಗೆ ತೀರಿಕೊಂಡ ಮಗಳು ಇಟ್ಟ ಹೆಸರೇ ಇದು. ಇಬ್ಬರೂ ಆಟಪಾಟಗಳನ್ನು ಹಿಂದಿನ ಮಕ್ಕಳಂತೆಯೇ ಆಡುತ್ತಿದ್ದುದೂ ತಂದೆ ತಾಯಿಯರಿಗೆ ಸೋಜಿಗವೆನಿಸಿತು. ಅಷ್ಟುಮಾತ್ರವಲ್ಲದೆ, ಹಿಂದಿನ ಮಕ್ಕಳು ಅನುಭವಿಸಿದ ಕಾರಿನ ಅಪಘಾತವನ್ನು ಈ ಮಕ್ಕಳು ವಿಸ್ತಾರವಾಗಿ ಯಥಾವತ್ತಾಗಿ ವರ್ಣಿಸುತ್ತಿದ್ದರು.

ಇಂಥ ಕಥೆಗಳೂ ನೂರಾರು ಬೆಳಕಿಗೆ ಬಂದಿವೆ. ಟಿಬೆಟ್ ದೇಶದಲ್ಲಿ ಲಾಮಾ ಪೀಠಗಳಿಗೆ ಅಧಿಕಾರಿಗಳನ್ನು ಆರಿಸುವಾಗ ಪೂರ್ವಜನ್ಮ ಸ್ಮೃತಿಯನ್ನೂ ಗಮನಿಸುತ್ತಾರೆ. ಒಬ್ಬ ಲಾಮಾ ತೀರಿಕೊಂಡಾಗ, ತನ್ನ ಉತ್ತರಾಧಿಕಾರಿಯಾಗಿ ತಾನೆ ಜನ್ಮ

ವೆತ್ತುತ್ತಾನೆ ಎನ್ನುವ ನಂಬಿಕೆ ಅವರಲ್ಲಿದೆ. ಉತ್ತರಾಧಿಕಾರಿಗಳು ಸಾಮಾನ್ಯವಾಗಿ ಮಕ್ಕಳು ಅಥವಾ ಸಣ್ಣ ಹುಡುಗರು. ಒಮ್ಮೆ ಒಂದು ಶ್ರೀಮಂತ ಮಠದ ಲಾಮಾ ತೀರಿ ಕೊಂಡ. ಅವನ ಉತ್ತರಾಧಿಕಾರಿಯನ್ನು ಹುಡುಕಲು ಮಠದ ನಿರ್ವಾಹಕರು ಸಂಪ್ರದಾಯ ದಂತೆ ಊರೂರು ಅಲೆದು, ಶಕುನಗಳನ್ನೂ ಸಂಕೇತಗಳನ್ನೂ ಅವಲಂಬಿಸಿ ಯಾವುದೋ ಹಳ್ಳಿಯ ಮಗುವೊಂದನ್ನು ಆರಿಸಿದರು. ಆ ವೇಳೆಗಾಗಲೇ ಲಾಮಾ ತೀರಿಕೊಂಡು ನಾಲ್ಕು ವರ್ಷಗಳಾಗಿದ್ದುವು, ಈ ಮಗುವಿಗೂ ನಾಲ್ಕು ವರ್ಷ. ಹಲವಾರು ವಿವರಗಳಿಂದ ಮಠದ ನಿರ್ವಾಹಕರಿಗೆ ಈ ಮಗುವೇ ಆ ಲಾಮಾ ಎಂದು ಖಚಿತ ವಾಯಿತು. ಮಗುವನ್ನು ಕರೆತರುತ್ತಿದ್ದಾಗ, ಊಳಿಗದವನೊಬ್ಬ ನಶ್ಯ ಹಾಕಿಕೊಳ್ಳಲು ಬೆಳ್ಳಿಯ ಡಬ್ಬಿಯನ್ನು ತನ್ನ ಕಿಸೆಯಲ್ಲಿ ತಡುಕಾಡಿದ, ಒಡನೆಯೇ ಮಗು ಅವನ ಕಡೆ ಹಿರಿಯ ಸನ್ಯಾಸಿಯ ಗಾಂಭೀರ್ಯದಿಂದ ದಿಟ್ಟಿಸಿ ನೋಡಿ, "ಅದು ನನ್ನ ಡಬ್ಬಿ, ಕೊಡು, ಕಳುವು ಮಾಡಬಾರದು" ಎಂದಿತು. ಊಳಿಗದವನೂ ಬೆಚ್ಚಿಬಿದ್ದ. ದಿಟವಾಗಿ ಅದು ತೀರಿಕೊಂಡ ಲಾಮಾದಾಗಿದ್ದಿತು; ಇವನು ಅದನ್ನು ಕಳುವು ಮಾಡಿದ್ದುದು ನಿಜ. ಮಠಕ್ಕೆ ಬಂದೊಡನೆ ಮಗು "ಬಲಕ್ಕೆ ತಿರುಗಿ, ಅದು ನನ್ನ ಕೋಣೆ" ಎಂದಿತು. ಆಗ ಬಲಭಾಗದಲ್ಲಿ ಗೋಡೆಯನ್ನು ಎಬ್ಬಿಸಿದ್ದರು; ತಿರುಗುವ ಹಾಗಿರಲಿಲ್ಲ. ಆದರೆ ಅಲ್ಲಿ ಹಿಂದಿನ ಲಾಮಾನ ಕೋಣೆಯಿದ್ದುದು ನಿಜ. ಅವನು ತೀರಿಕೊಂಡಮೇಲೆ ಆ ಕೋಣೆಯನ್ನು ಮುಚ್ಚಿ ಎಡ ಭಾಗದ ಕೋಣೆಯೊಂದನ್ನು ಉತ್ತರಾಧಿಕಾರಿಗೆ ಸಜ್ಜು ಮಾಡಿದ್ದರು. ಮಗು ಅಧಿಕಾರ ಸ್ವೀಕಾರ ಮಾಡಿಕೊಳ್ಳುವ ಸಂದರ್ಭದಲ್ಲಿ ಚಾ ಕುಡಿಯುವ ಬಟ್ಟಲೊಂದನ್ನು ಮುಂದೆ ಇಟ್ಟಿದ್ದರು. ಮಗು ಅದನ್ನು ನೋಡಿ "ಇದು ಬೇಡ, ನನ್ನದೇ ಬೆಳ್ಳಿಯ ಬಟ್ಟಲೊಂದು ಹಿಂದುಗಡೆ ಉಗ್ರಾಣದಲ್ಲಿ ಕೆಳಗಿನ ಪೆಟ್ಟಿಗೆ ಯಲ್ಲಿದೆ, ತೆಗೆದುಕೊಂಡು ಬನ್ನಿ" ಎಂದಿತು. ಹೋಗಿ ನೋಡಲು ಹಿಂದೆ ಲಾಮಾನ ಹೆಸರು ಮೂಡಿಸಿದ್ದ ಬೆಳ್ಳಿಯ ಬಟ್ಟಲಿದ್ದಿತು. ಅದು ಅಲ್ಲಿದ್ದುದು ಮಠದ ಹಿರಿಯ ನಿರ್ವಾಹಕರಿಗೇ ತಿಳಿದಿರಲಿಲ್ಲ. ನಾಲ್ಕು ವರ್ಷದ ಮಗು ದೂರದ ಯಾವುದೋ ಹಳ್ಳಿಯಲ್ಲಿ ಹುಟ್ಟಿ ಬೆಳೆದು ಈ ಮಠದ ವಿಚಾರ ಏನನ್ನೂ ಅರಿಯುವುದು ಸಾಧ್ಯ ವಿರಲಿಲ್ಲ; ಈ ಮಠವನ್ನು ಅದು ಕಂಡು ಕೇಳಿದುದೂ ಇಲ್ಲ. ಹೀಗಿದ್ದರೂ ಮಠದಲ್ಲಿ ಚಿರಪರಿಚಿತನಂತೆ ವ್ಯವಹರಿಸುವುದು ನಮಗೆ ಸೋಜಿಗವೆನಿಸುತ್ತದೆ. ಆದರೆ ಟಿಬೆಟ್ ಜನರಿಗೆ ಇದು ಅಚ್ಚರಿಯೆನಿಸುವುದಿಲ್ಲ, ಪುನರ್ಜನ್ಮದಲ್ಲಿ ಅವರ ವಿಶ್ವಾಸ ಅಷ್ಟು ದೃಢವಾದುದು.

ಇಂಥ ನೆನಪು ನಮ್ಮ ಸಾಮಾನ್ಯ ನೆನಪಿನಂತೆ ಇರುವುದಿಲ್ಲ. ಸಾಧಾರಣವಾಗಿ ಸ್ಮೃತಿಯೆನ್ನುವುದು ಮಸ್ತಿಷ್ಕಕ್ರಿಯೆ, ಮಿದುಳಿನ ವ್ಯಾಪಾರ. ಹಿಂದೆ ನಡೆದ ಸಂಗತಿ ಮನಸ್ಸಿನ ಮೇಲೆ ಮುದ್ರೆಯೊತ್ತಿ, ಆ ಮುದ್ರೆ ಮತ್ತೆ ಜಾಗ್ರತವಾದಾಗ ಸ್ಮೃತಿ ಒದಗುತ್ತದೆ. ಜನ್ಮಾಂತರದ ಸ್ಮೃತಿಯಲ್ಲಿ ಮಸ್ತಿಷ್ಕ ವ್ಯಾಪಾರ ಇರುವುದು ಹೇಗೆ, ಜೀವದ ನಿತ್ಯತೆಯನ್ನು ಒಪ್ಪಿಕೊಂಡರೂ ದೇಹವಂತೂ ಸಂಪೂರ್ಣವಾಗಿ ನಾಶವಾಗು

ವುದಷ್ಟೆ. ಹೊಸಮಸ್ತಿಷ್ಕದಲ್ಲಿ ಹಳೆಯ ಸಂಸ್ಕಾರ ಉಳಿಯುವುದು ಸಾಧ್ಯವೆ? ಇವೇ ಮೊದಲಾದ ಸಮಸ್ಯೆಗಳು ಇಲ್ಲಿ ಪ್ರವೃತ್ತವಾಗುತ್ತವೆ. 'ಅತಿ ಮಸ್ತಿಷ್ಕ ಸ್ಮೃತಿ' ಎಂದು ಒಂದು ವಿವರಣೆಯೇನೋ ಇದೆ; ಆದರೆ ಇದೇನು ಸಮರ್ಪಕವಾದುದಲ್ಲ.

ಅಂತೂ ಮನುಷ್ಯನ ಅನುಭವದಲ್ಲಿ ಬಂದಿರುವ ಇಂಥ ಅಸಾಧಾರಣ ಪ್ರಸಂಗಗಳನ್ನು ಅಧ್ಯಯನ ಮಾಡುವ ಕಾತರ ವಿಜ್ಞಾನಕ್ಷೇತ್ರದಲ್ಲಿಯೂ ಅಲ್ಲಲ್ಲಿ ಕಾಣಬರುತ್ತಿದೆ.

೨

## ವೈಜ್ಞಾನಿಕ ಅನ್ವೇಷಣೆ

ವಿಜ್ಞಾನಸಿದ್ಧವಾದುದಷ್ಟೇ ಸತ್ಯ, ಉಳಿದುದೆಲ್ಲ ಭ್ರಮೆ ಎನ್ನುವ ಮನೋವೃತ್ತಿ ನಮ್ಮಲ್ಲಿ ಬೆಳೆದುಬಂದಿದೆ. ಜಗತ್ತಿನ ರಹಸ್ಯಗಳನ್ನೂ ಮನುಷ್ಯಜೀವನದ ಮರ್ಮಗಳನ್ನೂ ಬಯಲಿಗೆಳೆಯಲು ವಿಜ್ಞಾನವೇನೋ ಶ್ರಮಿಸುತ್ತಿದೆ. ಕಲ್ಪನೆಗಳ ಕಾಡಿನಲ್ಲಿ ದಾರಿಗಾಣದೆ ಅಲೆದಾಡುವಂತೆ ಆಗಬಾರದೆಂದು ವಿಜ್ಞಾನ ಪ್ರಯೋಗವಿಧಾನವನ್ನೂ ಇಂದ್ರಿಯ ಪ್ರಾಮಾಣ್ಯವನ್ನೂ ಎತ್ತಿ ಹಿಡಿದಿದೆ. "ಕಣ್ಣಿಗೆ ಕಂಡಷ್ಟೇ ನಿಜ; ನೋಡಿದಾಗಲೇ ನಂಬಬೇಕು. ಇರುವುದಾದರೆ ಅದನ್ನು ಪ್ರಯೋಗಶಾಲೆಯಲ್ಲಿ ತರಬಹುದು; ಇದ್ದುದನ್ನು ಅಳೆಯಬಹುದು. ಇಂದ್ರಿಯಗಳಿಗೆ ಅತೀತವಾದುದನ್ನೂ, ಪ್ರಯೋಗಕ್ಕೆ ಅಸಾಧ್ಯವಾದುದನ್ನು ನಂಬಬಾರದು" ಎನ್ನುವುದು ವಿಜ್ಞಾನದ ನಿಲುವು. ವಿಜ್ಞಾನದ ಬಲದಿಂದ ಉದ್ಯಮ ಯಶಸ್ವಿಯಾದಾಗ ವಿಜ್ಞಾನಕ್ಕೆ ಹೆಚ್ಚಿನ ಪ್ರಾಶಸ್ತ್ಯ ಒದಗಿತು, ವಿಜ್ಞಾನದ ಮನೋಧರ್ಮ ಪ್ರಚಲಿತವಾಯಿತು. ಸಾಮಾನ್ಯ ಜನರೂ ವಿಜ್ಞಾನದ ನಿಲುವನ್ನು ಅಳವಡಿಸಿಕೊಂಡರು.

ಆದರೆ ವಿಜ್ಞಾನವೆನ್ನುವುದು ಕೇವಲ ಒಂದು ಜ್ಞಾನ ಸಾಧನ; ಅದರ ಯೋಗ್ಯತೆಗೆ ತಕ್ಕಷ್ಟು ವಿವರಗಳನ್ನು ಮಾತ್ರ ಅದು ಗ್ರಹಿಸಬಲ್ಲುದು. ಪಾತ್ರೆ ಇದ್ದಷ್ಟು ನೀರು ತುಂಬಬಹುದು. ಆದರೆ ಇರುವ ನೀರೇ ಅಷ್ಟು ಎನ್ನಲಾದೀತೆ? ಅಳತೆಗೋಲು ಇದ್ದಂತೆ ಅಳತೆ ತಿಳಿಯುತ್ತದೆ; ಆದರೆ ಅಳತೆಗೆ ಅಳತೆಗೋಲನ್ನು ಅಳವಡಿಸಬೇಕಲ್ಲವೆ? ವಿಜ್ಞಾನ, ಸದ್ಯದ ಪರಿಕರಗಳನ್ನು ಅವಲಂಬಿಸಿ ಪ್ರಪಂಚದ ವಿವರಗಳನ್ನು ತಿಳಿಯಲು ಯತ್ನಿಸುತ್ತದೆ. ಪರಿಕರಗಳ ಮಿತಿ ಜ್ಞಾನದ ವ್ಯಾಪ್ತಿಯನ್ನು ನಿರ್ಧರಿಸುತ್ತದೆ. ಪರಿಕರಗಳಿಂದ ಒದಗಿದ ಜ್ಞಾನವೇ ಸರ್ವಸ್ವ; ಅವುಗಳ ಮಿತಿಗೆ ಮೀರಿದುದು ಬರಿಯ ಕಲ್ಪನೆ ಎಂದು ಹೇಳುವುದು ತಪ್ಪಾದೀತು. ಅಷ್ಟಲ್ಲದೆ, ವಿಜ್ಞಾನವೂ ಬೆಳೆಯುತ್ತಿರುವ ಸಾಧನ. ಪ್ರಪಂಚವನ್ನು ಹೆಚ್ಚು ಹೆಚ್ಚು ತಿಳಿಯಬೇಕೆಂಬ ಕಾತರದಿಂದ ಅದರ ಸಾಮಗ್ರಿಗಳೂ ವಿಕಸಿತವಾಗುತ್ತಿವೆ, ಪರಿಕರಗಳೂ ಪ್ರೌಢವಾಗುತ್ತಿವೆ. ಒಂದು ಕಾಲದಲ್ಲಿ ಇರುವ ನಿಲುವೇ ಸಿದ್ಧಾಂತ ಎನ್ನಲಾಗದು. ಐವತ್ತು ವರ್ಷಗಳ ಹಿಂದೆ ವಿಜ್ಞಾನ

ಕ್ಷೇತ್ರದಲ್ಲಿ ಪ್ರಚಲಿತವಾಗಿದ್ದ ಭೌತಿಕವಾದ ಇಂದು ದುರ್ಬಲವಾಗಿದೆ, ಅಣುವಾದ ಮಾರ್ಪಟ್ಟಿದೆ. ವಿಜ್ಞಾನವು ಸಾಪೇಕ್ಷವಾದುದು; ಅದರ ಹಿಡಿತಕ್ಕೆ ಸಿಗದಿರುವ ವಿವರಗಳು ಅಸಂಖ್ಯವಾಗಿವೆ.

ಹಿಂದೆ ಕಾಣದಿದ್ದ ವಿವರಗಳು ಇಂದು ಸಾಮಗ್ರಿಗಳ ಸೌಲಭ್ಯದಿಂದ ಕಾಣ ಬರುತ್ತಿವೆ; ಹಿಂದೆ ಅಸ್ಪಷ್ಟವಾಗಿದ್ದುದು ಈಗ ಸ್ಪಷ್ಟವಾಗುತ್ತಿದೆ. ಎಂದ ಮೇಲೆ, ಇಂದು ಅಸ್ಪಷ್ಟವಾಗಿರುವುದು ಮುಂದೆ ಸ್ಪಷ್ಟವಾಗುವ ಸಂಭವವುಂಟು. ಇಂದು ನಾವು ನಂಬಲಾಗದುದನ್ನು ಮುಂದೆ ನಂಬಬಹುದು. ಇದು ನಿಸರ್ಗವಿಕಾಸದ ನಿಯಮ.

## ಅತೀಂದ್ರಿಯ ದರ್ಶನ

ಈಗ್ಗೆ ಸುಮಾರು ನೂರು ವರ್ಷಗಳ ಹಿಂದೆ ವೈಜ್ಞಾನಿಕ ಮನೋವೃತ್ತಿಯ ಕೆಲವರು ಅತೀಂದ್ರಿಯ ದರ್ಶನ, ಅತಿಲೌಕಿಕ ಘಟನೆ, ಅಭೌತಿಕ ಸಂಸರ್ಗ, ಪೂರ್ವಜನ್ಮ ಸ್ಮೃತಿ, ಭವಿಷ್ಯದರ್ಶನ ಮೊದಲಾದ ವಿವರಗಳನ್ನು ಕುರಿತು ಪರಾಮರ್ಶೆ ಮಾಡ ಲಾರಂಭಿಸಿದರು. ಆಗ ಪ್ರಯೋಗಶರಣರಾದ ವಿಜ್ಞಾನಿಗಳು ಅವರನ್ನು ಮುಗ್ಧರೆಂದು ಮೂದಲಿಸಿದರು. ಇಂದ್ರಿಯಾತೀತವಾದುದನ್ನು ನಂಬುವುದು ಹೇಗೆ? ಭೌತಿಕ ವಲ್ಲದ ಆತ್ಮ, ಅಂತಃಕರಣ, ಚೇತನ ಇವುಗಳ ವ್ಯಾಪಾರಕ್ಕೂ ವಿಜ್ಞಾನಕ್ಕೂ ಏನು ಸಂಬಂಧ? ಪುರಾಣಕಥೆಗಳು ಎಷ್ಟು ವಿಶ್ವಾಸಾರ್ಹವೋ ಇವೂ ಅಷ್ಟೇ, ಎಂದು ಅವರು ವಾದಿಸಿದರು. ಪ್ರತ್ಯಕ್ಷ ಪ್ರಯೋಗವೇ ಪರಮಾಂತಿಕವೆಂದು ನಂಬಿದ್ದ ಸನಾತನಿಗಳು ಅವರು. ಅವರ ಅಪಹಾಸ್ಯಕ್ಕೆ ಅಳುಕದೆ, ಅತಿಲೌಕಿಕ ಪ್ರಸಂಗಗಳ ಅನು ಸಂಧಾನದಲ್ಲಿ ನಿರತರಾದವರು ೧೮೭೧ ರಂದು ಲಂಡನ್ ನಗರದಲ್ಲಿ ನೆರೆದು ಈ ಅಸ್ಪಷ್ಟ ಕ್ಷೇತ್ರದಲ್ಲಿ ಹೆಚ್ಚು ಉತ್ಸಾಹದಿಂದ ಉದ್ಯಮಮಾಡಲು ನಿರ್ಧರಿಸಿದರು. ಹನ್ನೊಂದು ವರ್ಷಗಳ ನಂತರ 'ಅಭೌತಿಕ ಸಂಶೋಧನ ಸಮಾಜ' (Society for psychical research) ಎಂಬ ವಿದ್ವದ್ಗೋಷ್ಠಿಯು ಪ್ರವರ್ತಿತವಾಯಿತು.

ಇಂದ್ರಿಯಗಳ ನೆರವಿಲ್ಲದೆ ಹೊರಗಿನ ವಿವರಗಳನ್ನು ಅನುಭವಿಸುವುದು, ಮಾತನಾಡದೆ ಸಂಜ್ಞೆ ಮಾಡದೆ ಮನಸ್ಸಿನ ಭಾವನೆಗಳನ್ನು ನೇರವಾಗಿ ಇನ್ನೊಬ್ಬರ ಮನಸ್ಸಿಗೆ ಮುಟ್ಟಿಸುವುದು, ಮುಂದೆ ನಡೆಯುವ ಪ್ರಸಂಗಗಳನ್ನು ಈಗಲೇ ಅರಿಯುವುದು, ಜಡ ಪದಾರ್ಥಗಳನ್ನು ಮುಟ್ಟದೆ ಸಂಕಲ್ಪದ ಬಲದಿಂದಲೇ ಕದಲಿಸು ವುದು, ಹುಟ್ಟುವ ಮುಂಚೆ ಜರುಗಿದ ಸಂಗತಿಗಳನ್ನು ಸ್ಮರಣೆಗೆ ತಂದುಕೊಳ್ಳುವುದು ಮೊದಲಾದ ಕಲ್ಪನೆಗಳು ಮನುಷ್ಯ ಜೀವನ ಆರಂಭವಾದಾಗಿನಿಂದ ಇದ್ದೇ ಇವೆ. ಎಲ್ಲ ದೇಶಗಳಲ್ಲೂ ಎಲ್ಲ ಕಾಲಗಳಲ್ಲೂ ಇಂಥ ವಿಶ್ವಾಸ ಜನರಲ್ಲಿ ಇದ್ದೇ ಇದ್ದಿತು. ಸಾಮಾನ್ಯ ವಾಗಿ ಧರ್ಮಜೀವನಕ್ಕೆ ಈ ವಿಶ್ವಾಸ ಸಹಕಾರಿ. ತತ್ತ್ವಚಿಂತಕರೂ ಜಿಜ್ಞಾಸುಗಳೂ ಈ ವಿವರಗಳ ವಿಚಾರವಾಗಿ ದೃಷ್ಟಿ ಹರಿಸುತ್ತಿದ್ದರು.

ಆದರೆ ಅವರು ಅನುಸರಿಸುತ್ತಿದ್ದ ಸಂವಿಧಾನ ಅಷ್ಟು ಸಮರ್ಪಕವಾಗಿರಲಿಲ್ಲ. ಯುಕ್ತಿಯುಕ್ತವಾಗಿ ಪ್ರಸಂಗಗಳನ್ನು ವಿಶ್ಲೇಷಣೆ ಮಾಡುತ್ತಿದ್ದರು, ನಿಜ; ಆದರೆ ಪ್ರಸಂಗಗಳನ್ನು ನಿರ್ದಿಷ್ಟವಾಗಿ ನಿರೂಪಿಸುವ ವಿಧಾನ ಮಾತ್ರ ವ್ಯವಸ್ಥಿತವಾಗಿರಲಿಲ್ಲ. ಅಲ್ಲಲ್ಲಿ ಅವರಿವರು ಹೇಳಿದುದನ್ನೆಲ್ಲ ಕೇಳಿ, ಅದರಲ್ಲಿ ದಿಟವೆಷ್ಟೋ ಸೃಷ್ಟಿಯೆಷ್ಟೋ ವಿಚಾರಮಾಡದೆ, ಕಿಂವದಂತಿಗಳನ್ನೂ ಕಥೆಗಳನ್ನೂ ನಡೆದುವನ್ನೂ ಒಂದೇ ತೆರನಾಗಿ ಪರಿಗ್ರಹಿಸುವ ಮನೋವೃತ್ತಿ ಅವರಿಗಿದ್ದಿತು, ಸತ್ಯಾಸತ್ಯ ವಿಭಾಗ ಮಾಡುವ ಸಾಮರ್ಥ್ಯ ವಾಗಲೀ ತವಕವಾಗಲೀ ಅವರಿಗಿರಲಿಲ್ಲ. ಲಂಡನ್ನಿನ 'ಅಭೌತಿಕ ಸಂಶೋಧನ ಸಮಾಜ'ದವರು ವಿಜ್ಞಾನದ ವಿಧಾನಗಳನ್ನು ಈ ಕ್ಷೇತ್ರದಲ್ಲಿ ಬಳಸುವ ನಿರ್ಧಾರ ಮಾಡಿದುದು ಈ ದೋಷವನ್ನು ತಿದ್ದಿತು. ಈ ಸಮಾಜ ಆರಂಭವಾಗಲು ಎಂಟು ವರ್ಷ ಮುಂಚೆ ವಿಲಿಯಂ ಬ್ಯಾರೆಟ್ ಎಂಬ ವಿಜ್ಞಾನಿಯು ಗ್ಲಾಸ್ಗೋವಿನ 'ವಿಜ್ಞಾನಾಭಿವೃದ್ಧಿ ಸಂಘ'ದ ಮುಂದೆ ಅಭೌತಿಕ ವಿವರಗಳನ್ನು ಕುರಿತು ಮಾಡಿದ ಉಪನ್ಯಾಸದಲ್ಲಿ ವಿಜ್ಞಾನ ಸಂವಿಧಾನಗಳ ಅಗತ್ಯವನ್ನು ಹೇಳಿದ್ದನು. ೧೮೮೪ ರಲ್ಲಿ ಚಾರ್ಲ್ಸ್ ರಿಖೆ ಎಂಬ ಇನ್ನೊಬ್ಬ ವಿಜ್ಞಾನಿ ಈ ಕ್ಷೇತ್ರದಲ್ಲಿ ಸಂಖ್ಯಾಶಾಸ್ತ್ರದ ಬಳಕೆ ಯನ್ನು ಸೂಚಿಸಿದನು. ಈ ವೇಳೆಗಾಗಲೇ ಅಭೌತಿಕ ಪ್ರಸಂಗಗಳ ಅನ್ವೇಷಣೆ ದೃಢವಾಗಿ ವಿಸ್ತೃತವಾಗಿದ್ದಿತು.

## ಸಂಶೋಧನೆ ಆರಂಭ

೧೮೮೪ ರಲ್ಲಿಯೇ ಅಮೆರಿಕಾ ಖಂಡದಲ್ಲಿ ಅಭೌತಿಕ ಸಂಶೋಧನಾ ಕೇಂದ್ರವೊಂದು ಸ್ಥಾಪಿತವಾಯಿತು. ಏಳು ವರ್ಷಗಳ ನಂತರ ಸ್ಟ್ಯಾನ್‌ಫೋರ್ಡ್ ವಿಶ್ವವಿದ್ಯಾನಿಲಯದಲ್ಲಿ ಈ ವಿಚಾರವಾಗಿ ಪ್ರಯೋಗಾತ್ಮಕ ಅಧ್ಯಯನ ನಡೆಸಲು ಸೌಕರ್ಯಗಳನ್ನು ಕಲ್ಪಿಸಿದರು. ಇದಾದ ಹತ್ತು ವರ್ಷಗಳಲ್ಲಿ ಕೋಪನ್ ಹೇಗ್‌ನಲ್ಲಿ ಅಭೌತಿಕ ಸಂಶೋಧಕರ ಅಂತರ ರಾಷ್ಟ್ರ ಸಮ್ಮೇಳನವೊಂದು ನಡೆಯಿತು. ಮುಂದೆ, ವಿಶ್ವದ ಹಲವಾರು ವಿಶ್ವವಿದ್ಯಾ ನಿಲಯಗಳಲ್ಲಿ ಈ ವಿಚಾರವಾಗಿ ಅಧ್ಯಯನ ಮಂದಿರಗಳು ಏರ್ಪಟ್ಟುವು. ಇವುಗಳಲ್ಲಿ ಪ್ರಮುಖವಾದುದು ಡ್ಯೂಕ್ ವಿಶ್ವವಿದ್ಯಾನಿಲಯದ ಪ್ರಯೋಗ ಶಾಲೆ. ವಿಲಿಯಂ ಮೆಕ್‌ಡುಗಲ್ ಮತ್ತು ಜೆ. ಬಿ. ರೈನ್ ಎಂಬಿಬ್ಬರು ಮಾನಸಶಾಸ್ತ್ರ ಪರಿಣತರ ನೇತೃತ್ವ ದಲ್ಲಿ ೧೯೩೭ ರಂದು ರೂಪತಳೆದ ಈ ಪ್ರಯೋಗಶಾಲೆ ಅದ್ಭುತವಾದ ಸಂಶೋಧನೆ ಗಳನ್ನು ನಡೆಸಿ, ಈ ಅಧ್ಯಯನಕ್ಕೆ ಶಾಸ್ತ್ರಮರ್ಯಾದೆಯನ್ನು ತಂದುಕೊಟ್ಟಿತು. ಇಲ್ಲಿ ಹಲವಾರು ಸಂವಿಧಾನಗಳನ್ನು ದೃಢಪಡಿಸಿದರು; ಸಾವಿರಾರು ಅತಿ ಭೌತಿಕ ಸಂಗತಿ ಗಳನ್ನು ಸಂಗ್ರಹಿಸಿ, ಅಧ್ಯಯನ ಮಾಡಿ, ವಿವರಗಳನ್ನು ಕ್ರೋಢೀಕರಿಸಿ ವಿಷಯವನ್ನು ಸ್ಪಷ್ಟಪಡಿಸಿದರು. ೧೯೩೭ ರಿಂದ ಈ ಪ್ರಯೋಗಶಾಲೆಯ ಮುಖ ಪತ್ರಿಕೆಯೂ ಪ್ರಕಟವಾಗುತ್ತಿದೆ.

ಹೀಗೆ ತಜ್ಞರಿಂದ, ಅಭಿಜ್ಞರಿಂದ ನಡೆದ ಸಂಶೋಧನೆಗಳ, ಅಧ್ಯಯನದ ಫಲವಾಗಿ ವಿಜ್ಞಾನಕ್ಷೇತ್ರದಲ್ಲಿ ಅತಿಭೌತಿಕ ವಿದ್ಯೆಗೆ ತಕ್ಕಮಟ್ಟಿಗೆ ಪುರಸ್ಕಾರ ದೊರೆಯಿತು. ವಾಲ್ಟರ್ ಪ್ರಿನ್ಸ್, ಆಲಿವರ್ ಲಾಡ್ಜ್, ಓಸ್ಕರ್ ಫಿಷರ್, ಕ್ರುಕ್ಸ್ ಒಸ್ತ್‌ವಾಲ್ಡ್, ವಿಲಿಯಂ ಬ್ಯಾರೆಟ್, ಟೈರಲ್ ಮೊದಲಾದ ಗಣ್ಯ ವಿಜ್ಞಾನಿಗಳೂ ತಮ್ಮ ದೃಷ್ಟಿಯನ್ನು ಈ ಕಡೆ ಹರಿಸಿ, ಈ ಕ್ಷೇತ್ರದಲ್ಲಿ ಕೆಲಸ ಮಾಡಲು ತೊಡಗಿದರು. ಹೊಸ ಹೊಸ ಸಂವಿಧಾನಗಳು ಮೈದಳೆದು ನೂರಾರು ವಿವರಗಳು ಸ್ಪಷ್ಟವಾದುವು. ಮಾನಸಶಾಸ್ತ್ರದಲ್ಲಿ ನವ್ಯವಾದೊಂದು ದೃಷ್ಟಿ ಮೂಡಿತು. ಮನಸ್ಸಿನ ಮತ್ತು ವ್ಯಕ್ತಿತ್ವದ ವಿಚಾರವಾಗಿ ಮೂಲಭೂತವಾದ ಪರಾಮರ್ಶೆ ಅಗತ್ಯವೆನಿಸಿತು. ಈಗ ಇಂಗ್ಲೆಂಡ್, ಅಮೇರಿಕ, ರಷ್ಯ, ನೆದರ್‌ಲ್ಯಾಂಡ್ಸ್, ಜರ್ಮನಿ ಮತ್ತು ಜೆಕೋಸ್ಲವಾಕಿಯಾ ಈ ದೇಶಗಳಲ್ಲಿ ವಿಶೇಷವಾದ ಅಧ್ಯಯನ ನಡೆಯುತ್ತಿದೆ.

ನಮ್ಮ ದೇಶದಲ್ಲಿ ಅತಿಲೌಕಿಕವೆನಿಸಿದ ಪ್ರಸಂಗಗಳಿಗೇನು ಕೊರತೆಯಿಲ್ಲ. ಅಧ್ಯಾತ್ಮಿಕ ಹಂಬಲವನ್ನು ಹಚ್ಚಿಕೊಂಡ ನಮ್ಮ ಜನ ಪ್ರಪಂಚದ ಇಂದ್ರಿಯ ಗ್ರಾಹ್ಯ ವಿವರಗಳನ್ನೇ ಆತ್ಯಂತಿಕವೆಂದು ನಂಬಿಕೊಂಡಿಲ್ಲ. ಯೋಗಿಗಳು, ಸಿದ್ಧರು, ಸಂತರು, ಪವಾಡ ಪುರುಷರು, ಇಂದ್ರಜಾಲ ಕುಶಲರು ಮಾತ್ರವಲ್ಲದೆ ಭಕ್ತರು, ಅನುಭಾವಿಗಳು, ಶ್ರದ್ಧಾಳುಗಳಾದ ಸಾಮಾನ್ಯ ಜನರೂ ಅತೀಂದ್ರಿಯ ದರ್ಶನದ ಸಾಮರ್ಥ್ಯವನ್ನು ಪಡೆದಿರುವ ಉಲ್ಲೇಖ ಬಹಳ. ನಿತ್ಯ ಜೀವನದಲ್ಲೇ ಪ್ರತಿ ಗ್ರಾಮದಲ್ಲೂ ಇಂಥ ಅದ್ಭುತ ಶಕ್ತಿಗಳನ್ನು ಹೊಂದಿರುವ ಮಂದಿ ಇರುವುದುಂಟು. ಜನಜನಿತ ಕಥೆಗಳಲ್ಲಿ, ಕಿಂವದಂತಿಗಳಲ್ಲಿ, ಅಧಿಕೃತ ವೃತ್ತಾಂತಗಳಲ್ಲಿ ಅತಿಲೌಕಿಕ ಅನುಭವದ ಹತ್ತಾರು ಪ್ರಕಾರಗಳು ಪ್ರಕಟವಾಗುತ್ತವೆ. ಜನ ಇವನ್ನು ವಿಶ್ವಾಸದಿಂದಲೂ ಕಾಣುತ್ತಾರೆ. ವಿಜ್ಞಾನದ ಸಂಶಯದೃಷ್ಟಿ ಇಲ್ಲಿ ಇನ್ನೂ ಅಷ್ಟಾಗಿ ಪ್ರಚುರವಾಗಿಲ್ಲ. ಈ ಕಾರಣದಿಂದ ಭೂಮಿ ಫಲವತ್ತಾದರೂ ಸಂಶೋಧನೆಯ ಬೆಳೆ ಬಂದಿಲ್ಲ. ವೈಜ್ಞಾನಿಕ ಪದ್ಧತಿಗಳನ್ನು ಅನುಸರಿಸಿ ನಡೆಸಿದ ಅನ್ವೇಷಣೆ ತಕ್ಕಷ್ಟು ನಡೆದಿಲ್ಲ.

೩

## ಮೈಸೂರಿನಲ್ಲಿ ಸಂಶೋಧನೆ

ಈಗ್ಗೆ ಸುಮಾರು ಮೂವತ್ತು ವರ್ಷಗಳ ಹಿಂದೆ ಮೈಸೂರು ಮಹಾರಾಜ ಕಾಲೇಜಿನ ಮಾನಸ ಶಾಸ್ತ್ರ ಶಾಖೆಯಲ್ಲಿ ಡಾ॥ ಎಂ. ವಿ. ಗೋಪಾಲಸ್ವಾಮಿಗಳು ಈ ಕ್ಷೇತ್ರದಲ್ಲಿ ಸ್ವಲ್ಪಮಟ್ಟಿಗೆ ಸಂಶೋಧನೆ ನಡೆಸಿದರು. ಆದರೆ ಆ ಸಂಶೋಧನೆಗಳು ಪ್ರಕಟವೂ ಆಗಲಿಲ್ಲ, ಮುಂದುವರಿಯಲೂ ಇಲ್ಲ. ಕಾಶೀ ವಿಶ್ವವಿದ್ಯಾನಿಲಯದಲ್ಲಿ ತತ್ತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಡಾ॥ ಅತ್ರೇಯ ಅವರೂ ಈ ಕ್ಷೇತ್ರದಲ್ಲಿ ತುಂಬ ಆಸಕ್ತಿ ವಹಿಸಿದ್ದರು; ಯೋಗಿಪ್ರತ್ಯಕ್ಷಕ್ಕೂ ಅತೀಂದ್ರಿಯ ದರ್ಶನಕ್ಕೂ ಇರುವ

ಸಂಬಂಧವನ್ನು ಅವರು ಸ್ಪಷ್ಟಪಡಿಸುವ ಹಂಬಲ ಇಟ್ಟುಕೊಂಡಿದ್ದರು. ಈ ಉದ್ಯಮವೂ ಮುಂದೆ ಸಾಗಲಿಲ್ಲ. ಈಚೆಗೆ ರಾಜಸ್ಥಾನ ವಿಶ್ವವಿದ್ಯಾನಿಲಯದಲ್ಲಿ ಪರಾಮಾನಸಶಾಸ್ತ್ರ ವಿಭಾಗವು ಈ ದಿಕ್ಕಿನಲ್ಲಿ ತುಂಬ ಕೆಲಸ ಮಾಡುತ್ತಿದೆ. ಈ ವಿಭಾಗದ ಪ್ರಮುಖರಾದ ಡಾ॥ ಹೇಮೇಂದ್ರನಾಥ ಬ್ಯಾನರ್ಜಿ ಪುನರ್ಜನ್ಮದ ವಿಚಾರವಾಗಿ ನೂರಾರು ಆಧಾರಗಳನ್ನು ಹೊರಗೆಡವಿದ್ದಾರೆ; ಹಲವಾರು ಸ್ವಾರಸ್ಯದ ಪ್ರಸಂಗಗಳನ್ನು ಸಂಗ್ರಹಿಸಿದ್ದಾರೆ. ಕಳೆದ ವರ್ಷ ವಾಲ್ತೇರಿನಲ್ಲಿ ಆಂಧ್ರ ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ಪರಾಮಾನಸಶಾಸ್ತ್ರಶಾಖೆಯೊಂದು ಮೈದಳೆದಿದೆ.

ಪರಾಮಾನಸಶಾಸ್ತ್ರ ಎನ್ನುವುದಕ್ಕೆ ಇಂಗ್ಲೀಷಿನಲ್ಲಿ (parapsychology) ಎನ್ನುವುದು ಸಮಾನ ಪದ. ಇದು ಜರ್ಮನ್ ಭಾಷೆಯಿಂದ ತಂದುಕೊಂಡ ಮಾತು. ಈ ಮಾತು ಬಳಕೆಗೆ ಬರುವ ಮುಂಚೆ ಇಂಗ್ಲೀಷಿನಲ್ಲಿ (psychical research) (ಅಭೌತಿಕ ಸಂಶೋಧನೆ) ಎನ್ನುತ್ತಿದ್ದರು. ಫ್ರೆಂಚ್‌ಜನ metapsychique (ಅತಿಮಾನಸ) ಎಂದು ಬಳಸುತ್ತಿದ್ದರು. ಸಾಮಾನ್ಯವಾದ ಮಾನಸಿಕ ನಿಲುವನ್ನು ಮೀರಿ, ತೀರ ಅಧ್ಯಾತ್ಮದ ನೆಲೆಯನ್ನು ಮುಟ್ಟದೆ ಇರುವ ವ್ಯವಹಾರಗಳೆಲ್ಲ ಈ ಮಾತುಗಳ ವ್ಯಾಪ್ತಿಯಲ್ಲಿ ಸೇರಿದ್ದವು. ಮನುಷ್ಯಸಾಧ್ಯವಾದ ಪ್ರಸಂಗಗಳನ್ನು ಮಾತ್ರ ಆಯ್ದುಕೊಂಡು, ಅವುಗಳ ಮೂಲಪ್ರವೃತ್ತಿಗಳನ್ನು ಅಧ್ಯಯನ ಮಾಡುವ ಮಾನಸಶಾಸ್ತ್ರದ ನಿಲುವೇ ಇಲ್ಲಿ ಕೂಡ ಒದಗಿಬಂದಿದೆ; ಮನುಷ್ಯನ ಆಂತರಿಕ ಪ್ರವೃತ್ತಿಗಳಿಗೆ ಸಂಬಂಧಿಸಿದುದೇ ಈ ಶಾಸ್ತ್ರವೂ. ಪ್ರತ್ಯಕ್ಷ, ಸಂವೇದನೆ, ಸ್ಮೃತಿ, ಪರಿಕಲ್ಪನೆ ಮೊದಲಾದ ಮಾನಸ ಪ್ರಕಾರಗಳೇ ಇಲ್ಲಿಯೂ ಸಿದ್ಧವಾಗಿವೆ, ಮನುಷ್ಯನ ಅನುಭವವೇ ಅಲ್ಲಿಯೂ ಮುಖ್ಯವಾದ ವಿಚಾರ. ಈ ಕಾರಣಗಳಿಂದ ಈ ಶಾಸ್ತ್ರವನ್ನು ಮಾನಸಶಾಸ್ತ್ರದ ಶಾಖೆಯೆಂದೇ ಬಗೆದು, ಅದರ ವಸ್ತು ನಿರ್ದೇಶಕ್ಕಾಗಿ 'ಪರಾ ಮಾನಸಶಾಸ್ತ್ರ' ಎಂದರು. ಸಾಮಾನ್ಯವಾದ ಮಾನಸಶಾಸ್ತ್ರ ಪ್ರಕ್ರಿಯಗಳಿಗೆ ಮೀರಿದುದು ಎಂದು ಇಲ್ಲಿನ ಸೂಚನೆ. ಸಾರ್ವಜನೀನವಾದ ಅನುಭವಗಳಲ್ಲದೆ, ಕೆಲವರಿಗೆ ಮಾತ್ರ ಸಾಧ್ಯವೆನಿಸಿದ ಅನುಭವಗಳನ್ನು ಅಧ್ಯಯನ ಮಾಡುವುದು ಇದರ ವಿಶೇಷ.

ಇಂದ್ರಿಯ - ವಿಷಯ ಸಂಯೋಗದಿಂದ ಪ್ರತ್ಯಕ್ಷವಾಗುವುದು ಎಲ್ಲರ ಅನುಭವದಲ್ಲಿಯೂ ಇದೆ. ಕಣ್ಣಿನಿಂದ ನೋಡುವುದು, ಕಿವಿಯಿಂದ ಕೇಳುವುದು, ಎಲ್ಲರಿಗೂ ಸಾಧ್ಯ. ಆದರೆ ಇಂದ್ರಿಯ ವ್ಯಾಪಾರವಿಲ್ಲದೆ, ವಿಷಯ ದೂರದಲ್ಲಿದ್ದು, ಸಂಯೋಗ ಅಸಾಧ್ಯವಾದಾಗಲೂ ಅನುಭವ ಕೆಲವರಿಗೆ ಒದಗುತ್ತದೆ. ಒಬ್ಬಾಕೆ ಮನೆಯಲ್ಲೇ ಕೂತು ನೂರಾರು ಮೈಲಿ ದೂರದಲ್ಲಿ ತನ್ನ ತಂಗಿ ತೀರಿಕೊಂಡುದನ್ನು ತೀರಿಕೊಂಡ ಕ್ಷಣದಲ್ಲಿಯೇ ತಿಳಿದುಕೊಂಡಳು. ಇದು ಎಲ್ಲರಿಗೂ ಸಾಧ್ಯವಿಲ್ಲ. ಆದರೆ ಕೆಲವರಿಗೆ ಸಾಧ್ಯವೆನ್ನುವುದು ಮುಖ್ಯ ವಿಚಾರ. ಹೀಗೆಯೇ ಇನ್ನೊಬ್ಬನ ಮನಸ್ಸಿನಲ್ಲಿರುವುನ್ನು ಮಾತು ಅಥವಾ ಇನ್ನಾವ ಭೌತಿಕ ಸಾಧನದ ನೆರವೂ ಇಲ್ಲದೆ, ನೇರವಾಗಿ ಅರಿತುಕೊಳ್ಳುವ ಜನ

ಇದ್ದಾರೆ. ಪರೇಂಗಿತಪರಿಜ್ಞಾನ ಯೋಗಸಿದ್ಧಿಗಳಲ್ಲಿ ಒಂದೊಂದು ನಮ್ಮ ಕಲ್ಪನೆಯಿದೆಯಷ್ಟೆ. ಇಂಥ ಸಾಧನೆಯೂ ಇಲ್ಲದೆ ಕೆಲವರಿಗೆ ಈ ಸಾಮರ್ಥ್ಯ ಒದಗುವುದು ಗಮನಾರ್ಹವಾದುದು ; ಸಹಜವಾಗಿಯೇ ಇದು ಒದಗುತ್ತದೆ ಎನ್ನುವುದು ಸ್ವಾರಸ್ಯ.

ಇಂಥ ಕೌಶಲ ಅಸಾಧಾರಣವಾದುದಾದರೂ ಅಪ್ರಾಕೃತವಾದುದಲ್ಲ. ಇಂದ್ರಜಾಲದಂತೆ ಭ್ರಾಮಕ ಎನ್ನಲಾಗದು, ಮೋಡಿಯಂತೆ ಕೃತಕ ಎನ್ನಲಾಗದು. ನಿಸರ್ಗಸಿದ್ಧವಾದ ವಿವರಣೆ ಸಾಧ್ಯ ಎನ್ನುವ ಕಾರಣದಿಂದ ವಿಜ್ಞಾನದ ವ್ಯಾಪ್ತಿಗೆ ಇದು ಒಳಪಡುತ್ತದೆ. ಇದಕ್ಕೆ ತಕ್ಕಂಥ ವಿಧಾನಗಳನ್ನೂ ತಜ್ಞರು ವ್ಯವಸ್ಥೆ ಮಾಡಿದ್ದಾರೆ. ಮೊದ ಮೊದಲು ವೈಯಕ್ತಿಕ ಪ್ರಸಂಗಳನ್ನು ಸಂಗ್ರಹಿಸಿ ಒಂದೊಂದನ್ನೂ ಪ್ರತ್ಯೇಕ ವಿಶ್ಲೇಷಣೆ ಮಾಡುವ ಪದ್ಧತಿಯಿದ್ದಿತು. ವ್ಯಕ್ತಿಪ್ರಮುಖವಾದ ಈ ಸಂವಿಧಾನ ಈಗಲೂ ಬಹುಮಟ್ಟಿಗೆ ಬಳಕೆಯಲ್ಲಿದೆ. ಆದರೆ ಇದರ ಜೊತೆಗೆ ಪರೀಕ್ಷಾ ವಿಧಾನವನ್ನು ಸೇರಿಸುವ ಪರಿಪಾಠ ಬರುತ್ತಿದೆ. ಅಸಾಧಾರಣವಾದ ಅಭೌತಿಕ ಸಾಮರ್ಥ್ಯವಿದ್ದರೆ ವ್ಯಕ್ತಿಯ ವರ್ತನೆಯಲ್ಲಿ ಅದು ಸ್ಪಷ್ಟವಾಗುತ್ತದೆ ಎನ್ನುವ ಸೂತ್ರವನ್ನವಲಂಬಿಸಿ ಪ್ರಾಸ್ತಾವಿಕ ಪರೀಕ್ಷೆಯಲ್ಲಿ ಇದನ್ನು ಕಂಡುಕೊಳ್ಳಲು ಯತ್ನಿಸುತ್ತಾರೆ. ಇನ್ನೂ ವಿವರವಾದ, ಸೂಕ್ಷ್ಮವಾದ ಅನುಸಂಧಾನಕ್ಕೆ ಇದು ನಾಂದಿಯಾಗುತ್ತದೆ. ವ್ಯಕ್ತಿಯ ಶಕ್ತಿಯನ್ನು ಪ್ರಯೋಗಾತ್ಮಕವಾಗಿ ತಿಳಿದುಕೊಳ್ಳುವುದೇ ಆಧುನಿಕ ಸಂವಿಧಾನಗಳ ಉದ್ದೇಶ. ಈ ಶಕ್ತಿಯ ಸಹಕಾರಿ ಘಟಕಗಳನ್ನು ಪೃಥಕ್ಕರಿಸಿ ಒಂದೊಂದನ್ನೂ ಕೂಲಂಕಷವಾಗಿ ಅಧ್ಯಯನ ಮಾಡುತ್ತಾರೆ. ಅನಂತರ ಘಟಕಗಳ ನಡುವೆ ಇರಬಹುದಾದ ಸಂಬಂಧ ಸೂತ್ರವನ್ನು ನಿರೂಪಿಸಲು ಯತ್ನಿಸುತ್ತಾರೆ.

ಹೀಗೆ ಮಾಡುವುದರಿಂದ ವ್ಯಕ್ತಿಗೆ ವಿಶಿಷ್ಟವಾದ ಸಾಮರ್ಥ್ಯವನ್ನು ಸಾಮಾನ್ಯ ನಿಯಮಗಳ ನೆಲೆಯಲ್ಲಿ ಪರಿಶೀಲಿಸುವುದು ಸಾಧ್ಯವಾಗುತ್ತದೆ. ಅಲೌಕಿಕವೆನ್ನುವ ಪ್ರಸಂಗಳಲ್ಲಿ ಎಷ್ಟು ಪ್ರಯೋಗ ಸಿದ್ಧವಾಗಿ ಉಳಿಯಬಲ್ಲುವು, ಎಷ್ಟು ಅನ್ವೇಷಣೆಯ ಗಾಳಿಗೆ ನಿಲ್ಲಲಾರದೆ ತೂರಿಕೊಂಡು ಹೋಗುವ ಜೊಳ್ಳು ಎಂಬುದು ತಿಳಿಯುತ್ತದೆ. ಯಾವ ಶಾಸ್ತ್ರದಲ್ಲಿಯಾಗಲೀ ವಿವರಗಳು ಅಸಂದಿಗ್ಧವಾಗಿ ಸ್ಫುಟವಾಗಬೇಕು, ಅವುಗಳ ಹಿನ್ನಲೆ ಮತ್ತು ಮುಂದಿನ ಸ್ಥಿತಿ ತಿಳಿಯಬೇಕು, ಪ್ರಸಂಗಗಳ ತಾತ್ಪರ್ಯ ಮನದಟ್ಟಾಗಬೇಕು. ಈ ಉದ್ದೇಶದಿಂದಲೇ, ಪರಾಮಾನಸಶಾಸ್ತ್ರವೂ ಪ್ರಯೋಗಶೀಲವಾಗಿ ನಿಂತಿದೆ.

೪

## ಇಂದ್ರಿಯಾತೀತ ಜ್ಞಾನ

ಅಭೌತಿಕ ವ್ಯಾಪಾರಗಳ ಅಧ್ಯಯನ ವೈಜ್ಞಾನಿಕ ಅನ್ವೇಷಣೆಗೆ ಒಳಪಟ್ಟಾಗ ಅದು ಜೀವವಿಜ್ಞಾನಕ್ಕೆ, ವಿಶೇಷವಾಗಿ ಮಾನಸವಿಜ್ಞಾನಕ್ಕೆ ಸೇರಿದುದು ಎಂದು

ಸ್ಪಷ್ಟವಾಯಿತು. ಪ್ರಕೃತಿ ಪ್ರವೃತ್ತಿಗಳಿಗೆ ಹೊರಗಾದುದಲ್ಲ; ಪ್ರಕೃತಿ ವ್ಯವಸ್ಥೆಯ ಒಂದು ಪ್ರಕಾರ ಅದು ಎನ್ನುವುದೂ ತಿಳಿದುಬಂದಿತು. ಪ್ರಕೃತಿ ಎಂದರೆ ಕೇವಲ ಭೌತಿಕ ನಿಯಮಗಳಿಗೇ ಸೀಮಿತವಾದುದು ಎನ್ನುವ ದೃಷ್ಟಿ ಸರಿಯಾದುದಲ್ಲ. ಅಭೌತಿಕ ವ್ಯಾಪಾರ ಭೌತಿಕ ಪ್ರಸಂಗಳಲ್ಲಿಯೇ ಅಡಕವಾಗಿ ಹೊರಬರುವ ನಿದರ್ಶನಗಳೇ ಬಹಳ; ಆದರೆ ಅಭೌತಿಕ ವ್ಯಾಪಾರ ಭೌತಿಕ ವಸ್ತುಗಳನ್ನು ಅಥವಾ ಭೌತಿಕ ಪ್ರಸಂಗಳನ್ನು ಅವಲಂಬಿಸಿಯೇ ಇರುತ್ತದೆ ಎನ್ನುವುದು ತಪ್ಪು. ಮಾನಸ ಕ್ರಿಯೆಗಳು ಮಿದುಳನ್ನು ಅವಲಂಬಿಸಿರುವುದು ಸಾಮಾನ್ಯವಾದುದಾದರೂ ಮಿದುಳಿನ ವ್ಯಾಪ್ತಿಯನ್ನು ಮೀರಿದ (ಅತಿಮಸ್ತಿಷ್ಕ) ಮಾನಸ ಕ್ರಿಯೆಗಳೂ ಇರುವುದುಂಟು.

ಇಂಥ ಕ್ರಿಯೆಗಳು ಸಾರ್ವತ್ರಿಕವಾದುದುದಲ್ಲ ಎಂಬಷ್ಟೇ ಕಾರಣದಿಂದ ಅವನ್ನು ಅಲ್ಲಗಳೆಯಬಾರದು. ಕೆಲವು ವ್ಯಕ್ತಿಗಳಲ್ಲಿ, ಕೆಲವು ಸಂದರ್ಭಗಳಲ್ಲಿ ಇವು ಜರುಗುತ್ತವೆ ಎನ್ನುವುದೇ ಸ್ವಾರಸ್ಯವಾದುದು. ವಿಜ್ಞಾನ ಈ ಸಾಮರ್ಥ್ಯವುಳ್ಳ ವ್ಯಕ್ತಿಗಳನ್ನೂ, ಇವು ನಡೆಯುವ ಸಂದರ್ಭಗಳನ್ನೂ ಕುರಿತು ಸಂಶೋಧನೆಗಳನ್ನು ನಡೆಸುತ್ತಿದೆ. ಈ ಸಂಶೋಧನೆಗಳಿಂದ ಕೆಲವು ವಿಸ್ಮಯಕಾರಕ ವಿವರಗಳೂ ಸ್ಪಷ್ಟವಾಗಿವೆ. ಮೊದಲು ಅದ್ಭುತವೆಂದು ವಿಶ್ಲೇಷಣೆ ಮಾಡದೆ ಬಿಟ್ಟದ್ದ ಪ್ರಸಂಗಗಳೂ ಇಂದು ಪರೀಕ್ಷೆಗೆ ಒಳಪಟ್ಟಿವೆ. ಈ ಪರೀಕ್ಷೆಯಿಂದಾಗಿ ಪ್ರಸಂಗಗಳ ಅದ್ಭುತ ಲಕ್ಷಣ ಬಹುಮಟ್ಟಿಗೆ ಮರೆಯಾಗಿದೆ. ಇನ್ನೂ ತಿಳಿಯದೆ ಸೋಜಿಗವಾಗಿಯೇ ಉಳಿದಿರುವ ವಿಚಾರಗಳು ಬಹಳ ಇದ್ದರೂ, ಪರಿಶೀಲನೆ ನಡೆಸುವ ದಾರಿ ತಿಳಿಯಾಗಿದೆ.

ಅಭೌತಿಕ ಪ್ರವೃತ್ತಿಗಳಲ್ಲಿ ಸ್ಥೂಲವಾಗಿ ಅತೀಂದ್ರಿಯ ದರ್ಶನ (extra-sensoriperception) ಅಥವಾ ಸಂಕ್ಷೇಪವಾಗಿ ESP ಮತ್ತು ಅತಿ ಮಾನಸ ಕ್ರಿಯೆ (psycho-kiness) ಅಥವಾ ಸಂಕ್ಷೇಪವಾಗಿ PK ಎಂದು ಎರಡು ಬಗೆ. ಇಂದ್ರಿಯಗಳ ಸಹಾಯವಿಲ್ಲದೇ ನೇರವಾಗಿ ಸ್ವತಂತ್ರವಾಗಿ ಜ್ಞಾನವನ್ನು ಪಡೆಯುವುದು; ಹೊರಗಿನ ಪ್ರಸಂಗಗಳನ್ನು ಅರಿಯುವುದು ಅತೀಂದ್ರಿಯ ದರ್ಶನ ಎನಿಸಿಕೊಳ್ಳುತ್ತದೆ. ಹೊರಗಿನ ವಸ್ತುಗಳು ಉದ್ಬೋಧಕವಾಗಿಯೇ ಇದ್ದಾಗ, ಇಂದ್ರಿಯಗಳು ಜಾಗೃತವಾಗದಿದ್ದರೂ, ಮನುಷ್ಯ ಅವನ್ನು ಅರಿಯುತ್ತಾನೆ. ಅವುಗಳಿಗೆ ತನ್ನ ಪ್ರತಿಕ್ರಿಯೆಗಳನ್ನು ಹೊರಹೊಮ್ಮಿಸುತ್ತಾನೆ. ನಮ್ಮ ಮನಸ್ಸಿನಲ್ಲಿರುವ ಭಾವನೆ ಮತ್ತೊಬ್ಬನ ಮನಸ್ಸಿನಲ್ಲಿ ಪ್ರವೇಶ ಮಾಡಬೇಕಾದರೆ ಸಾಮಾನ್ಯವಾಗಿ ನಾವು ಭಾವನೆಯನ್ನು ಮಾತಿನಲ್ಲಿ ಮೂಡಿಸುತ್ತೇವೆ; ಹಾವ - ಭಾವ, ಸಂಜ್ಞೆ - ಸಂಕೇತಗಳಿಂದ ಅದನ್ನು ಸ್ಪಷ್ಟಪಡಿಸುತ್ತೇವೆ, ಆದರೆ ಇಲ್ಲಿ ಯಾವ ಬಗೆಯ ಬಾಹ್ಯ ಅಭಿವ್ಯಕ್ತಿಯೂ ಇರದೆ ಮತ್ತೊಬ್ಬನ ಕಿವಿ - ಕಣ್ಣುಗಳ ವ್ಯಾಪಾರವಿಲ್ಲದೆ, ಅವನಿಗೆ ನಮ್ಮ ಭಾವನೆ ಸ್ಪಷ್ಟವಾದರೆ ಅದು ಸೋಜಿಗವಲ್ಲವೆ? ವಿಷಯ ಇಂದ್ರಿಯಗಳ ಸಂಸರ್ಗವಿಲ್ಲದೆ ನಡೆಯುವ ಈ ಅತೀಂದ್ರಿಯ ವ್ಯಾಪಾರ ದೂರಾನುಭೂತಿ (telepathy) ಎನಿಸಿಕೊಳ್ಳುತ್ತದೆ.

